ಬಳಬಳ್ಳಾರಿತಾತ

# ಶ್ರೀ ಚನ್ನಬಸವ ಲೀಲಾ ಕಾವ್ಯ

ನಾ.ಮ.ಸಿದ್ಧರಾಮಯ್ಯ-





ಒಳಬಳ್ಳಾರಿ ತಾತ

# ಶ್ರೀ ಚನ್ನಬಸವ ಲೀಲಾಕಾವ್ಯ

"ಭಾಮಿನೀ ಷಟ್ಪದಿ"

—: ಲೇಖಕರು :—

ನಾ. ಮ. ಸಿದ್ಧರಾಮಯ್ಯ, ಬಿ.ಎಸ್‌ಸಿ.,

ಬ ಳ್ಳಾ ರಿ

೧೯೮೯

ಮೃತ್ಯುಂಜಯ ಪ್ರಕಾಶನ

ಬ ಳ್ಳಾ ರಿ

“ ಮೃತ್ಯುಂಜಯ ಪ್ರಕಾಶನ ”
೧೭ ಎಫ್, ಶ್ರೀ ವೀರಭದ್ರೇಶ್ವರ ನಿಲಯ, (ಎರ್ರಿತಾತ ಕಾಲೋನಿ)
ಗಾಂಧಿನಗರ ಮಾರ್ಕೆಟ್, ಬಳ್ಳಾರಿ

VALABALLARY THATHA

# SRI CHANNABASAVA LEELA KAVYA

BY

**N. M. SIDDHARAMAIAH**, B.Sc.,



Published By

**MRUTHYUNJAYA PRAKASHANA**
17 F, Sri Veera Bhadreshwara Nilaya
Yerritata Colony, Gandhi Nagara Market, Bellary

I Edition 1989

Pages : 48+263+64 1000 Copies



ರಕ್ಷಾಪುಟದ ಶಿರೋನಾಮೆಯ ರಚನೆ
ಶ್ರೀ ಬಿ. ರಾಜ್‌ಕುಮಾರ್
ಗಾಂಧಿನಗರ, ಬೆಂಗಳೂರು

ಮುದ್ರಕರು
ಶ್ರೀ ಜಿ. ಎಸ್. ಕುಮಾರಸ್ವಾಮಿ
ಓರಿಯಂಟ್ ಪವರ್ ಪ್ರೆಸ್, ೫೪, ಲಾಲ್‌ಬಾಗ್ ರಸ್ತೆ, ಬೆಂಗಳೂರು-೫೬೦ ೦೨೭

ಕ್ರಯ : ರೂ. 35/-

# ಅ ನು ಕ್ರ ಮ ಣಿ ಕೆ


| ಕ್ರಮಸಂಖ್ಯೆ | ವಿ ಷ ಯ | ಪುಟ |
|---|---|---|
| | ಆಶೀರ್ವಚನಗಳು | ೧ ರಿಂದ ೪೮ |
| ೧) | ಮಂಗಲಾಚರಣೆ | ೧ |
| ೨) | ಕಾರಣಿಕ ಶಿಶುವಿನ ಉದಯ | ೫ |
| ೩) | ವಟುಗಲ್ಲಯ್ಯನ ಬಾಲ್ಯ ಲೀಲೆಗಳು | ೧೯ |
| ೪) | ವಟುಗಲ್ಲಯ್ಯನನ್ನು ಕನಕಗಿರಿ ಶ್ರೀ ಚನ್ನಮಲ್ಲಸ್ವಾಮಿಗಳ ಸನ್ನಿಧಿಗೆ ಕೊಟ್ಟಿದುದು. | ೨೬ |
| ೫) | ಗುರುಸನ್ನಿಧಿಯಲ್ಲಿ ತತ್ವಾನುಸಂಧಾನ | ೩೨ |
| ೬) | ವಟುಗಲ್ಲಯ್ಯ-ಚನ್ನಬಸವ ದೇಶಿಕರಾಗಿ ಪವಾಡ ಪುರುಷರಾದದ್ದು (ನಂದಿಯಾಲಂಗಿರ ಪ್ರಕರಣ) | ೩೯ |
| ೭) | ವಳಬಳ್ಳಾರಿ ಮಠದೊಡೆತನ ವಹಿಸಿದ್ದು | ೫೬ |
| ೮) | ಶ್ರೀ ಚನ್ನಬಸವ ದೇಶಿಕರು-ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರ ಪ್ರಥಮ ಸಂದರ್ಶನ | ೬೬ |
| ೯) | ಶ್ರೀ ಚನ್ನಬಸವ ದೇಶಿಕರಿಗೆ ಪಟ್ಟಾಧಿಕಾರವಾದದ್ದು | ೮೫ |
| ೧೦) | ಲೋಕಕಲ್ಯಾಣಕ್ಕಾಗಿ ಚರಜಂಗಮರಾಗಿ ಶ್ರೀಗಳು ಚರಿಸಿದ್ದು | ೧೧೧ |
| ೧೧) | ಅಡವಿ ಅಮರೇಶ್ವರನ ಕ್ಷೇತ್ರದಲ್ಲಿ ಲಿಂಗಪ್ರತಿಷ್ಠಾಪಿಸಿ ಜಗದೊಳು ಖ್ಯಾತಿ ಹೊಂದಿದ್ದು | ೧೩೪ |
| ೧೨) | ಧರೆಯ ಜನರುದ್ಧಾರಕ್ಕಾಗಿಯೇ ಶ್ರೀ ಚನ್ನಬಸವರು ಪವಾಡ ಮಾಡಿದ ದಿವ್ಯ ಪ್ರಸಂಗಗಳು | ೧೪೭ |
| | ಪ್ರಸಂಗ | |
| | ೧) ಭಕ್ತನ ಜಾಡ್ಯ ನಿವಾರಣೆ | ೧೪೭ |
| | ೨) ಧನಿಕನ ಕ್ಷಯರೋಗ ನಿವಾರಣೆ | ೧೫೩ |
| | ೩) ಭಕ್ತನ ಅಂಧತ್ವ ಕಳೆದು ದೃಷ್ಟಿಯನ್ನು ಕರುಣಿಸಿದ್ದು | ೧೬೦ |
| | ೪) (ಸಂಸ್ಮರಣೆ) ಗುರುಶಿಷ್ಯರ ಮನಸ್ತಾಪ ಹೋಗಲಾಡಿಸುವಿಕೆ | ೧೬೩ |
| | ೫) ಅಲಬನೂರಿನ ಗ್ರಾಮಕ್ಕೆ ಬಂದ ಮಾರಿಕಾಂಬೆಯು ಮುನಿಸನ್ನು ಕಳೆದುದು | ೧೬೫ |
| | ೬) ಮದುವೆ ಬಂಡಿಗಳಿಗೆ ಮಳೆಯು ಸೋಂಕದೆ ಮಳೆ ಬರೆಸಿದ್ದು | ೧೭೨ |
| | ೭) ಬಂಜೆಗೆ ಕೊರಗು ನೀಗಿಸಿ ಮಕ್ಕಳಾಗ್ಲಂತೆ ಹರಸಿ ಕರುಣಿಸಿದ್ದು | ೧೭೫ |
| | ೮) ಭಕ್ತನಿಗೆ ಹಿಡಿದು ಕಾಡುವ ಭೂತವನ್ನು ಹೊಡೆದೋಡಿಸಿದ್ದು | ೧೭೯ |
| | ೯) ಗೊರೆಬಾಳಲ್ಲಿ ಶರಣ ಬಸವೇಶ್ವರ ಪುರಾಣ ಹಾಗೂ ಗುಂಡಿ ಪ್ರತಿಷ್ಠಾಪಿಸಿದ್ದು | ೧೮೯ |

| ಕ್ರಮಸಂಖ್ಯೆ | ವಿ ಷ ಯ | ಪುಟ |
|---|---|---|
| | ಪ್ರಸಂಗ | |
| ೧೦) | ಹೊಸಪೇಟೆ ಕೊಟ್ಟೂರು ಸ್ವಾಮಿಗಳಿಗೆ ಶ್ರೀ ತಾತನವರಿಂದ ಪಟ್ಟಾಧಿಕಾರವಾದದ್ದು | ೧೯೪ |
| ೧೧) | ಅಡವಿ ಅಮರೇಶ್ವರ ಕ್ಷೇತ್ರದಲ್ಲಿ ಕಲ್ಪಭಸ್ಮದ ಕಣಜ ಹಾಗೂ ೨೧ ಮಂಟಪದ ಪೂಜೆ ಮಾಡಿಸಿದುದು | ೧೯೭ |
| ೧೨) | ಭಕ್ತನೋರ್ವನಿಗೆ ವಂಶೋದ್ಧಾರಕ ಮಗುವನ್ನು ಕರುಣಿಸಿದುದು | ೨೦೨ |
| ೧೩) | ತುಂಗಭದ್ರಾ ನದಿಯಲ್ಲಿ ಮುಳುಗುವ ಭಕ್ತನನ್ನು ಕೈಹಿಡಿದು ಸಲಹಿದ್ದು | ೨೦೬ |
| ೧೪) | ಶ್ರೀ ಪಂಡಿತ ದೊಡ್ಡಯ್ಯಶಾಸ್ತ್ರಿಗಳಿಗೆ ಶ್ರೀ ತಾತನವರ ನೇತೃತ್ವದಲ್ಲಿ ಸನ್ಮಾನ | ೨೦೯ |
| ೧೫) | ಶ್ರೀಶೈಲದ ಕದಳೀ ಬನದಲ್ಲಿ ಶ್ರೀ ತಾತನವರು ಪೂಜೆ ಮಾಡಿದ್ದು | ೨೧೦ |
| ೧೩) | ಶ್ರೀ ತಾತನವರು ತಮ್ಮ ವೃದ್ಧಾಪ್ಯವನ್ನು ಗಮನಿಸಿ ದೇಶಿಕರಿಗೆಲ್ಲಾ ಪಟ್ಟಾಧಿಕಾರ (ವಜ್ರಮಹೋತ್ಸವದೊಂದಿಗೆ) ಮಾಡಿದ್ದು | ೨೧೫ |
| ೧೪) | ಸಿರುಗುಪ್ಪೆಯಲ್ಲಿನ ಅಯ್ಯಪ್ಪ ಧಣಿಯ ಬಿಲ್ವ ವನದಲ್ಲಿ ಶ್ರೀ ತಾತನವರು ಅನುಷ್ಠಾನ ಮಾಡಿದ್ದು | ೨೨೫ |
| ೧೫) | ವಳಬಳ್ಳಾರಿಯಲ್ಲಿ ದಾಸೋಹ ಮಂಟಪ ಕಟ್ಟಿಸಿದುದು | ೨೨೮ |
| ೧೬) | ಶ್ರೀ ತಾತನವರು ಪರಮ ಲೀಲೆಗಳನ್ನು ಮಾಡಿ ಲಿಂಗದೊಳಗಾದದ್ದು | ೨೪೦ |
| ೧) | ಒಳಬಳ್ಳಾರಿ ತಾತ ಶ್ರೀ ಚನ್ನಬಸವ ಲೀಲಾಕಾವ್ಯ ಗದ್ಯ ಕಥಾಸಾರ | ೧ |
| ೨) | ಒಪ್ಪೋಲೆ | ೪೪ |
| ೩) | ವಿರಕ್ತ ಶ್ರೇಷ್ಠನಿಗೆ ಸಾಂಕೇತಿಕವಾಗಿ ಮಾಡಿದ ಅಷ್ಟಾದಶ ವರ್ಣನೆಗಳು | ೪೭ |
| ೪) | ಶಬ್ದಕೋಶ | ೫೦ |
| ೫) | ಶಿವಕವಿ ಪಂಡಿತ ಶ್ರೀ ನಾ.ಮ. ಸಿದ್ಧರಾಮಯ್ಯನವರು ಮಾಡಿದ ಧಾರ್ಮಿಕ ಸೇವೆಯ ಬಗ್ಗೆ ವಿಹಂಗಮ ನೋಟ | ೫೩ |
| ೬) | ಒಳಬಳ್ಳಾರಿ ತಾತ ಶ್ರೀ ಚನ್ನಬಸವ ಸ್ವಾಮಿಗಳ ಸುಪ್ರಭಾತ | ೫೭ |
| ೭) | ಶಿವಾನುಭವ | |
| ೮) | ಒಳಬಳ್ಳಾರಿ ಶ್ರೀ ತಾತನವರ ಸುಪ್ರಭಾತ | |
| ೯) | ಶ್ರೀ ಚನ್ನಬಸವಸ್ವಾಮಿಗಳ ಪ್ರಾರ್ಥನೆ | |
| ೧೦) | ಸ್ತುತಿ ಪಂಚಕ | |
| ೧೧) | ಕವಿ ಶ್ರೀ ನಾ.ಮ. ಸಿದ್ಧರಾಮಯ್ಯನವರ ಕಾವ್ಯ–ಗದ್ಯ ಕೃತಿಗಳ ಬಗ್ಗೆ ಮಹನೀಯರ ಸದಭಿಪ್ರಾಯಗಳು | |

ಶ್ರೀ ಗುರು ಬಸವಲಿಂಗಾಯ ನಮಃ

ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು

ಶ್ರೀ ಜಗದ್ಗುರು ಕೊಟ್ಟೂರುಸ್ವಾಮಿ ಮಠ

ಬಳ್ಳಾರಿ-ಹೊಸಪೇಟೆ ಇವರ

# ಆ ಶೀ ರ್ವಾ ದ ನ ಗ ಳು

ವಸ್ತುನಿಷ್ಟವಾದ ಕಾವ್ಯವನ್ನು ರಚಿಸುವುದಕ್ಕಿಂತ ವ್ಯಕ್ತಿನಿಷ್ಟವಾದ ಕಾವ್ಯವನ್ನು ರಚಿಸುವುದು ಸ್ವಲ್ಪ ಕಠಿಣ; ಅದರಲ್ಲಿ ಅಲೌಕಿಕ ವ್ಯಕ್ತಿಗಳ, ಮಹಾತ್ಮರ ಹಾಗೂ ಶಿವಯೋಗಿಗಳ ಶಿವಬಾಳನ್ನು ಕೃತಿಗಿಳಿಸುವುದು ಮತ್ತಷ್ಟು ಕಠಿಣ; ಏಕೆಂದರೆ "ಒಂದು ಕಾಣೆಯು ಸೋಲದೆ, ಅರ್ಧ ಕಾಣೆಯು ಗೆಲ್ಲದೆ ಯಥಾವತ್ತಾಗಿ ಕಥಾನಾಯ ಕರ ಚರಿತ್ರೆಯನ್ನು ರೂಪಿಸಬೇಕಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಕವಿ ತನ್ನ ಚರಿತ್ರ ನಾಯಕನ ಚರಿತ್ರೆಯನ್ನು ಸ್ಥೂಲಕ್ಕೂ, ಸ್ಥೂಲ, ಸೂಕ್ಷ್ಮಕ್ಕೂ ಸೂಕ್ಷ್ಮವಾಗಿ ಅರಿತುಕೊಳ್ಳಬೇಕಾಗುತ್ತದೆ. ಇಲ್ಲಿ ಶ್ರೀ ವಳಬಳ್ಳಾರಿ ತಾತನವರ ಕೃಪೆಗೆ ಪಾತ್ರರಾದ ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಅದನ್ನು ಸಾಧಿಸಿದ್ದಾರೆಂದರೆ ಅತಿ ಶಯೋಕ್ತಿಯಾಗಲಾರದು.

ಕಾರಣಿಕ ಪುರುಷರ ದಿವ್ಯಚರಿತ್ರ ಬರೆಯಲು ಪ್ರಾರಂಭಿಸುವ ಮೊದಲ ಹಂತದಲ್ಲಿಯೇ ಕವಿ ತನ್ನ ಪ್ರತಿಭೆಯನ್ನು ತೋರಿಸಿ ಒಂದೇ ನೆಗೆತಕ್ಕೆ ಓದುಗರ ಕಣ್ಮನಗಳನ್ನು ಸೆಳೆಯುತ್ತಾನೆ. ಅಂದರೆ ಅವರ ಸಮಗ್ರ ವ್ಯಕ್ತಿತ್ವವನ್ನು ಕರಿಯನ್ನು ಕನ್ನಡಿಯಲ್ಲಿ ತೋರಿಸಿದಂತೆ ಲೋಕದ ಜನತೆಗೆ ಭಕ್ತಿ-ಭಾವಗಳು ಉಕ್ಕೇರುವಂತೆ ಮಾಡುತ್ತಾನೆ. ಈ ಮನೋಭಾವ "ಪ್ರಭುಲಿಂಗಲೀಲ"ಯನ್ನು ಬರೆಯುವಾಗ ಶಿವಕವಿ ಚಾಮರಸನನ್ನು ಸಹಾ ಬಿಡಲಿಲ್ಲ. ಅಂತೆಯೇ ಚಾಮರಸ ಮಹಾಕವಿಯು ತನ್ನ ಗ್ರಂಥದ ಹಾಗೂ ಚರಿತ್ರ ನಾಯಕನ ಬಗ್ಗೆ ಪ್ರಥಮದಲ್ಲಿಯೇ

"ಸತ್ತವರ ಕಥೆಯಲ್ಲ ಜನನದ
ಕುತ್ತದಲಿ ಕುದಿ ಕುದಿದು ಕರ್ಮದ

ಕತ್ತಲೆಗೆ ಸಿಲ್ಕುವರ ಸೀಮೆಯ ಹೊಲಬು ತಾನಲ್ಲಾ
ಹೊತ್ತು ಹೋಗದ ಪುಂಡರಾಲಿಪ
ಮತ್ತಮತಿಗಳ ಗೋಷ್ಠಿಯಲ್ಲಿದು
ಸತ್ಯ ಶರಣರು ತಿಳಿವುದೀ ಪ್ರಭುಲಿಂಗಲೀಲೆಯನೂ.

ಎಂದು ಮುಂಬರುವ ದಿವ್ಯ ಚರಿತ್ರೆಗೆ ಓದುಗರನ್ನು, ಕೇಳುವವರನ್ನು ಆಹ್ವಾನಿಸಿ, ಜಾಗೃತಗೊಳಿಸಿ ಆದರ್ಶದ ಎತ್ತರಕೊಯ್ದು ಭಕ್ತಿ-ಭಾವದ ಬೀಜ ಬಿತ್ತಿದ್ದಾನೆ. ಇದು ಉದ್ದಾಮ ಕವಿಗಳ ವೈಶಿಷ್ಟ್ಯವೂ ಆಗಿದೆ.

ಇದರಂತೆಯೇ ಪ್ರಸ್ತುತ "ಶ್ರೀ ಚನ್ನಬಸವಲೀಲಾ ಕಾವ್ಯ"ದ ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಸಹ ಕಾವ್ಯದ ಪೀಠಿಕಾ ಸಂಧಿಯಲ್ಲಿ ಬಹು ಜಾಗೃತೆಯಿಂದ ಪುರಾಣಪುರುಷರಾದ ಶ್ರೀ ಚನ್ನಬಸವ ಮಹಾಸ್ವಾಮಿಗಳವರನ್ನು

"ಏನು ಹೇಳುವೆ ಎಂತು ಬರೆಯುವೆ
ನೀನು ಶ್ರೀ ತಾತನ ಚರಿತ್ರವ
ಬಾನಿನೆತ್ತರ ಬೆಳೆದ ಒಳ ಬಳ್ಳಾರಿ ತಾತನನಾ
ಭಾನು ತೇಜದ ವೀರ ವಿರತನು
ತಾನೆ ಒಡೆಯನು ಚನ್ನಬಸವನು
ಜ್ಞಾನನಿಧಿತಾ ಕನಕಗಿರಿ ಶ್ರೀ ವಿರತಮಠದೊಡೆಯಾ

(ಪೀಠಿಕಾಸಂಧಿ :-ಪದ್ಯ :-೪)

ಎಂದು ಹೇಳುವಲ್ಲಿ ಶ್ರೀ ವಳಬಳ್ಳಾರಿ ತಾತನ ಸೀಮಾತೀತ ಶಿವಬಾಳಿನ ಬೃಹತ್ ದರ್ಶನವನ್ನು ಸಹೃದಯರಿಗೆ ಮಾಡಿಸಿದ್ದು ಯಥಾ ಯೋಗ್ಯವಾಗಿದೆ. ಅಂದರೆ ಸತ್ಯಶರಣರು ಮಾತ್ರ ತಿಳಿವುದೀ ವಳಬಳ್ಳಾರಿ ತಾತಾ ಶ್ರೀ ಚನ್ನಬಸವ ಲೀಲಾವಿಲಾಸ ವಿಭ್ರಮ ಎಂಬುದು ಕವಿ ಕಾವ್ಯದ ಧ್ವನಿ ಅರ್ಥಪೂರ್ಣವಾಗಿದೆ. ಭಾಮಿನಿ ಷಟ್ಪದಿಯಲ್ಲಿರುವ ಈ ಕಾವ್ಯವು ಹದಿನಾರು ಸಂಧಿಗಳಲ್ಲಿ ೧೦೦೮ ಪದ್ಯಗಳಿಂದೊಡಗೂಡಿದೆ. ಸ್ವಾಮಿಯ ಭಕ್ತರು, ನಿಸ್ವಾರ್ಥ ಜೀವಿಗಳು, ಸಹಜ ಕವಿಯೂ ಆಗಿರುವ ಶ್ರೀ ನಾ.ಮ. ಸಿದ್ಧರಾಮಯ್ಯನವರು ಭಕ್ತಿ-ಭಾವದ ಲೆಕ್ಕಣಿಕೆಯಿಂದ ಹೊರಹೊಮ್ಮಿಬಾದ ಶ್ರೀಗಳವರ ಚರಿತ್ರೆಯನ್ನು ಈ ಕಾವ್ಯದಲ್ಲಿ ಎಳೆ ಎಳೆಯಾಗಿ ಬಿಡಿಸುತ್ತಾ ಸಾಗಿದ್ದಾರೆ.

"ಪ್ರತಿಪರ್ವಂ ರಸೋದಯಂ" ಎನ್ನುವಂತೆ, ಓದುತ್ತಾ ಹೋದಂತೆ ಒಂದೊಂದು ಅಧ್ಯಾಯವೂ ಮತ್ತೊಂದು ಅಧ್ಯಾಯವನ್ನು ಮೀರಿ ನಿಲ್ಲುತ್ತದೆ. ಶ್ರೀ ಚನ್ನಬಸವ ಸ್ವಾಮಿಗಳೇ ಪುರಾಣದ ಆದಿ-ಮಧ್ಯ-ಅಂತ್ಯ ದೇವರಾಗಿದ್ದಾರೆ.

ನಾಗರಹಾಳು ಮಠದ ಪಂಡಿತ ಶ್ರೀ ದೊಡ್ಡಯ್ಯ ಶಾಸ್ತ್ರಿಗಳು ಈ ಮಹಾತ್ಮರ ಭಕ್ತಾಗ್ರಣಿಗಳಾಗಿ ಪ್ರಿಯ ಶಿಷ್ಯರಾಗಿ ಅವರ ಸುವರ್ಣಗಿರಿ ಸಂಸ್ಥಾನದ ವಿರಕ್ತಮಠದ ಆಸ್ಥಾನ ಕವಿಗಳಾಗಿ, ಪಂಡಿತರಾಗಿ, ಶಿವಾನುಭವಿಗಳಾಗಿ ಶ್ರೀ ತಾತನವರ ಕೃಪೆಯಲ್ಲಿ ತೊಳಗಿ ಬೆಳಗಿದ್ದಾರೆ.

"ಧರೆಯ ಜನರ ಕಲ್ಯಾಣಕ್ಕಾಗಿ ಗುರುವರ್ಯರಾದ ಶ್ರೀ ಚನ್ನಬಸವರು ಹಳ್ಳಿ-ಪಟ್ಟಣಗಳಿಗೆಲ್ಲ ಸಂಚರಿಸಿ ಭಕ್ತರ ಆಶೋತ್ತರವನ್ನು ಈಡೇರಿಸಿದರು. ಮ್ಯಾಡಲೂಪಿ ಶ್ರೀ ಚನ್ನಬಸವರು ಅಡವಿ ಅಮರೇಶ್ವರ ಲಿಂಗವನ್ನು ಸ್ಥಾಪಿಸಿದ್ದು ಅವರ ದಿವ್ಯ ಶಿವಬಾಳಿನ ವ್ಯಕ್ತಿತ್ವ ಸಿದ್ಧಿಯ ಪರಮ ಸಾಧನೆ-ಸಮಗ್ರವಾಗಿ ಈಕ್ಷಿಸಿದಾಗ ಕಾಡನ್ನು ಸೋಸಿ ಈ ನಾಡನ್ನು ಆಧ್ಯಾತ್ಮಿಕ ಉದ್ಯಾನವನ್ನಾಗಿ ಮಾಡಿದ ಶ್ರೀ ಚನ್ನಬಸವ ಮಹಾಸ್ವಾಮಿಗಳವರ ಶಿವಕಾಯಕಕ್ಕೆ ಎಂಥವರೂ ನಮೋನಮೋ ಎನ್ನಲೇಬೇಕು !"

ಈ ಕಾವ್ಯದಲ್ಲಿ ಒಡೆದು ಕಾಣುವ ಸಂಧಿಯೆಂದರೆ ೧೨ನೆಯ ಸಂಧಿ. ಇಲ್ಲಿ ಶಿವಕವಿಗಳಾದ ಶ್ರೀ ನಾ ಮ. ಸಿದ್ಧರಾಮಯ್ಯನವರು ಶ್ರೀ ಚನ್ನಬಸವ ಸ್ವಾಮಿಗಳ ಅನಂತ ಪವಾಡಗಳನ್ನು, ಶಿವಲೀಲೆಗಳನ್ನು ವಿವರಿಸುತ್ತ ಶ್ರೀಗಳವರ ಬಹುಮುಖ ದಿವ್ಯ ವ್ಯಕ್ತಿತ್ವವನ್ನು ಸ್ಫುಟವಾಗಿ ನಿರೂಪಿಸಿದ್ದಾರೆ. ಸುಮಾರು ಅಂತಹ ೧೫ ಪ್ರಸಂಗಗಳನ್ನು ಮನ ಸೂರೆಗೊಳ್ಳುವಂತೆ ವರ್ಣಿಸಿ ಭಾಮಿನೀ ಷಟ್ಪದಿಯ ಲಲಿತ ಶೈಲಿಯಿಂದ ಕಂಗೊಳಿಸುವಂತೆ ಮಾಡಿದ್ದಾರೆ. ಶಿವಾನುಭವ ಚರವರ್ಯರಾದ ಶ್ರೀ ಚನ್ನಬಸವ ಶಿವಯೋಗಿಗಳ ಸಂಪೂರ್ಣ ಚರಿತಾಮೃತವನ್ನು ಧರೆಯ ಜನರಿಗೆ ಉಣಬಡಿಸುವಲ್ಲಿ ಕವಿಯು ಸಫಲತೆಯನ್ನು ಸಾಧಿಸಿದ್ದಾನೆಂದು ಹೇಳುವುದರಲ್ಲಿ ಅತಿಶಯೋಕ್ತಿಯಾಗದೆ ಸಹಜ ಸುಂದರ ಚಿತ್ರಣದಿಂದ ಸಾರ್ಥಕತೆ ಪಡೆದಿದೆ. ಭಕ್ತಿ ಭಾವುಕರಾದ ನಮ್ಮ ಜನತೆಯ ಜೀವನದಲ್ಲಿ ಮಹಾತ್ಮರ ತಪಸ್ವಿಗಳ ದಿವ್ಯ ಚರಿತ್ರೆಗೆ ಪವಿತ್ರ ಸ್ಥಾನ ಯಾವಾಗಲೂ ಇದ್ದೇ ಇದೆ. ಇಂದಿಗೂ ಇಂತಹ ಮಹಾತ್ಮರ ಪವಿತ್ರ ಗ್ರಂಥಗಳು ಪಠಣ ಮಾಡುವವರ ಹಾಗೂ ಶ್ರವಣ ಮಾಡುವವರ ಅಂತರಂಗ-ಬಹಿರಂಗ ಶುದ್ಧತೆಗೆ ಕಾರಣೀಭೂತಗಳಾಗಿವೆ. ಅಷ್ಟೇ ಅಲ್ಲಿ ಬರಬಹುದಾದ ಆಪತ್ತು-ವಿಪತ್ತುಗಳು ದೂರವಾಗಿ ಅನಿರ್ವಚನೀಯ ಆನಂದವನ್ನುಂಟು ಮಾಡುತ್ತವೆ ಎಂಬುದು ಸರ್ವವಿದಿತ ; ಅಂತೆಯೇ ಮೊಮ್ಮಟನು ತನ್ನ ಕಾವ್ಯ ಪ್ರಕಾಶದಲ್ಲಿ ಕಾವ್ಯ ಪ್ರಯೋಜನಗಳನ್ನು ಹೇಳಿದ್ದಾನೆ.

"ಕಾವ್ಯಂ ಯಶಸ್ಸೇ ಅರ್ಥಕೃತೇ ವ್ಯವಹಾರವಿದೆ ।
ಶಿವೇತ ರಕ್ಷತಯೇ, ಸದ್ಯಃ ಪರನಿವೃತ್ತಯೇ,
ಕಾಂತಾಸಂಹಿತ ತಯೋಪಯುಂಜೇ" ಎಂದು

ಹೇಳಿದವುಗಳೆಲ್ಲವೂ ಇಂದಿನ ವೈಜ್ಞಾನಿಕ ಯುಗದಲ್ಲೂ ಸಹಾ ತಮ್ಮ ಅಸ್ತಿತ್ವವನ್ನು ಕಾಯ್ದುಕೊಂಡು ಬಂದಿದೆ. ಕವಿಗಳಾದ ಶ್ರೀ ನಾ. ಮ. ಸಿದ್ಧರಾಮಯ್ಯನವರು ತಾತನವರ ದಿವ್ಯಚರಿತ್ರೆಯೊಂದಿಗೆ ಹತ್ತು-ಹಲವಾರು ದೇಶಿ ಮಾತುಗಳನ್ನು, ಹಿಡಿ-ನುಡಿಗಳನ್ನು, ಪಡೆನುಡಿಗಳನ್ನು ಅಲ್ಲಲ್ಲಿ ಪರದುಕೂಲದ ಮೇಲೆ ಕಸೂತಿಯ ಕಲೆಯಂತೆ ಕಂಗೊಳಿಸುವಂತೆ ತಮ್ಮ ಕಾವ್ಯದಲ್ಲಿ ಹೆಣೆದಿದ್ದಾರೆ.

ಉದಾ :–“ಕಣ್ಣಿದ್ದ ಕುರುಡರು ; ಸೇರಿ ಮೂರೆನಿಸಿ
ಹುಲಿಯ ಬಣ್ಣದ ಹೋಳಿಗೆ–
ಗೋಪಿನಾಮೊಗ ತೋರಿಸುತ, ಗೋವಿನ ಗಂಟಲವ ಹಿಡಿಯುವ”
ಕಾಶಿ ನೋಡಿದ ಮುಕ್ತಿ, ತಾತದರ್ಶನದಿ ದೊರೆವುದು,
“ಮುಗಿಲು ದೇವರೆಂದು ಜಗದ ಜನ ಹಂಬಲಿಸಿ”
“ಏನು ಕೆಟ್ಟರೂ ಕೆಡಲಿ ಮಾನವನ ಮತಿ ಕೆಡದಿರಲಿ ಜಗದಿ”
“ಯೋಗದೊಳು ಶಿವಯೋಗ ಶ್ರೇಷ್ಠವು”
“ಕೂಗಳತೆಯಲಿ ಶಿವನಿರುವ ಇವರಿಗ”

ಮುಂತಾದ ಆಡುನುಡಿಗಳಲ್ಲಿ ನಿಡಿದಾದ ದೇಶೀಯ ಚಲುವಿಕೆಯನ್ನು ತುಂಬಿದ್ದಾರೆ.

ಇದರಂತೆ ಕಾವ್ಯದಲ್ಲಿನ ಚರಿತ್ರೆಯುದ್ದಕ್ಕೂ ವೀರಶೈವದ ತತ್ವಗಳನ್ನು, ಸ್ಥಲಗಳನ್ನು ಸಹಾ ಪಾಂಡಿತ್ಯಪೂರ್ಣವಾಗಿ ಹೇಳಿದ್ದಾರೆ. ಹಲವೆಡೆಗೆ ಕವಿಯ ಭಾವವೇ ಭಾಷೆಯಾಗಿ, ಅನುಭಾವವೇ ಅಲಂಕಾರವಾಗಿ ಸಹಜ ಸೌಂದರ್ಯಕ್ಕೆ ಆದರ್ಶದ ಉದಾಹರಣೆ ಎಂಬಂತೆ ಬಿಡಿ ಬಿಡಿಯಾದ ಶಬ್ದಗಳು, ಹಿಡಿ ಹಿಡಿಯಾದ ಪದ್ಯಗಳು ಓದುಗನನ್ನು ತಲೆದೂಗುವಂತೆ ಮಾಡುತ್ತವೆ.

ಉದಾ : ಮೆಲ್ಲ ಮೆಲ್ಲನೆ ಮೈ ತೊನೆಯುತ
ಮೆಲ್ಲ ಮೆಲ್ಲನೆ ಗೋಣು ಹಾಕುತ
ಸಲ್ಲಲಿತ ಬಾಲಗಳನೆತ್ತುತ ಬಂಡಿಯೆಳೆದೋಡೀ

(ಪುಟ ೩೦–ಪದ್ಯ ೧೯)

ತೊನೆದು ಓಡುವ ಎತ್ತುಗಳು ತಾ
ಕನಕಗಿರಿಗಭಿಮುಖವ ಮಾಡಿಯ
ಕನಕಕೋಡಣಸುಗಳ ಗಗ್ಗರಿನಾದದಲಿ ನಡೆದೂ
ಮಿನುಗಿ ಹೊಳೆಯುವ ಜೂಲುಗನ್ನಡಿ
ಇನನ ಬೆಳಕಲಿ ತೊಳಗಿ ಬೆಳಗುವ
ಮನಸಿಜಾರಿಯ ಕೃಪೆಯ ಕಂದನ ಹೊತ್ತ ಎತ್ತುಗಳೂ

(ಪುಟ ೩೧–ಪದ್ಯ ೩೦)

ಇಂಥ ಪದ್ಯಗಳಲ್ಲಿ ಎತ್ತಿಗೆ ಕಟ್ಟಿದ ಕಿರುಗೆಜ್ಜೆಯ ಕಿಣಿಕಿಣಿ ನಿನಾದದಂತೆ ಸಹಜಪ್ರಾಸ. ಸರಳ ಶಬ್ದಗಳಿಂದ ಸ್ವಾರಸ್ಯದರ್ಥದಿಂದ ಓದುಗ ತನ್ನಷ್ಟಕ್ಕೆ ತಾನೆ ತನು ಮನ ತಲೆದೂಗುವಂತಿವೆ. ಇದರಂತೆ ಲಯಬದ್ಧತೆಗೂ, ಸರಳತೆಗೂ ಉದಾಹರಣೆ ಯಂತಿರುವ ಈ ಪದ್ಯವನ್ನು ಸದಾ ನಾವಿಲ್ಲಿ ಉದಾಹರಿಸಬಹುದು.

"ಜೊಂಪು ನಿದ್ರೆಯಲಿರುವ ಕಂದನ
ಇಂಪುಗಾನದಿ ತೂಗಿ ತೊಟ್ಟಿಲು
ತಂಪುಗಾಳಿಗೆ ಕಣ್ಣಿಮುಚ್ಚುತ ನಿದ್ರೆಯೊಳು ಶಿಶುವೂ
ಹೆಂಪು ಶಿವಧ್ಯಾನದಲಿ ಮಲಗಿದ
ರಂಪ ಮಾಡದ ದಿವ್ಯಶಿಶುವದು
ಹೊಂಪುಳಿಯು ತಾನಾಗಿ ನೋಡ್ವರ ಕಣ್ಗೆ ಹಬ್ಬವದೂ

(ಪುಟ ೩೦–ಪದ್ಯ ೬)

ಎಂದು ಹೇಳುವಲ್ಲಿ ನಿಜಕ್ಕೂ ಅತ್ತ್ರಕಡೆಗೆ ಶಿಶುವನ್ನು ನೋಡುವ ಕಣ್ಗೆ ಹಬ್ಬ; ಈ ಪದ್ಯವನ್ನು ನೋಡಿದವರ–ಕೇಳಿದವರ ಕಣ್ ಮನಗಳಿಗೆ ಹಬ್ಬವೇ ಹಬ್ಬ. ಹಿಂದಿನ ಘಟನೆಗಳನ್ನು ಹೇಳುವಲ್ಲಿ ಕವಿಯ ಭಾವವೇ ಸಹಜ ಭಾಷೆಯಾಗಿ ಹೊರ ಹೊಮ್ಮುತ್ತದೆ.

ಉದಾ :–ಹಿಂದೆರಡು ಕೂಸುಗಳು ಸತ್ತವು
ಇಂದಿರುವ ಮಗುವಿಂಗೆ ವ್ಯಾಧಿಯು
ಇಂದೊ-ನಾಳೆಯು ದಿನಗಳಲ್ಲಿಯೇ ಸಾಯುವಂತಾಗೀ

(ಪುಟ ೧೨೨–ಪದ್ಯ ೪೪)

ಎಂಬ ಪದ್ಯವು ಸಾಕ್ಷಿ ನುಡಿಯುತ್ತಿದ್ದರೆ. ಭಯ, ಆರ್ಭಟಗಳನ್ನು ಸಹ ಅಲ್ಲಲ್ಲಿ ಕವಿ ಲೀಲಾಜಾಲವಾಗಿ ಚಿತ್ರಿಸಿರುತ್ತಾರೆ.

ಉದಾ :–ಗಗನ ಮಿಂಚಿನ ಗುಡುಗು ಹೊಡೆತಕೆ
ಗಗನಮಣಿ ಮರೆಯಾಗಿ ಹೋದನು
ನಗೆಯು ನಗಜಾವರನ ಹಾಸದಿ ಆಲಿಕಲ್ ಬಿದ್ದು

(ಪುಟ ೧೨೭–ಪದ್ಯ ೬೭)

ಎನ್ನುವಲ್ಲಿ ಒಳ್ಳೆಯ ರೂಪಕದೊಂದಿಗೆ ಕವಿವಾಣಿ ಜನವಾಣಿಯೊಂದಿಗೆ ಬೆಸೆದು ನಿಲ್ಲುತ್ತದೆ.

ಶ್ರೀ ತಾತನವರು ಇಹವನ್ನು ತ್ಯಜಿಸಿ, ಪರಶಿವನಲ್ಲಿ ಬೆರೆತಾಗಿನ ಅತ್ಯಂತ ಶೋಕ ವಾತಾವರಣದಲ್ಲಿ ಈ ಸೃಷ್ಟಿಯ ಚರಾಚರ ಜೀವಿಗಳು ಸಮಭಾಗಿಗಳಾದವು ಎನ್ನುವಲ್ಲಿ

"ಎಲೆಯೂ ಅಲುಗದು ಗಾಳಿ ಬೀಸದು
ಉಲಿವ ಮೃಗ ಪಕ್ಷಿಗಳು ಶೋಕದಿ
ಹೊಲಬುಗಾಣದೆ ದನಗಳೆಲ್ಲವು ನಿಂತು ರೋದನದೀ
ಗೆಲವಿರದೆ ವರ ತುಂಗಭದ್ರೆಯು
ಉಲುಹಿನಿಂ ಹರಿಯದಲೆ ಸ್ತಬ್ಧದಿ
ತಳಮಳವ ಪಡುವಂಥ ಜನಗಳು ಸೇರಿ ಮಠದೊಳಗೇ
(ಸಂಧಿ ೧೬ ; ಪದ್ಯ ೫೧)

ನಾನು ಕೇಳಿದ ಪ್ರಶ್ನೆಗುತ್ತರ
ಬಾನುಲಿಯು ಬಂದಿರುವದುತ್ತರ
ಏನು ಸೋಜಿಗ ತಾತ ಮಾಡಿದನೆಂಥ ಜಗದ ಗುರೂ
(ಪುಟ ೨೫೪ : ಪದ್ಯ ೫೮)

ಎನ್ನುವಲ್ಲಿ ಕವಿ ಶಬ್ದಾರ್ಥ-ಭಾವಗಳ ಸಮತೂಕವನ್ನು ಕಾಯ್ದುಕೊಂಡು ಶಬ್ದಕ್ಕೆ ಶಕ್ತಿಯನ್ನು, ಕಾವ್ಯಕ್ಕೆ ಪ್ರೌಢಿಮೆಯನ್ನು ಒದಗಿಸಿ ಕವಿಗಳು ಕೃತಕೃತ್ಯರಾಗಿದ್ದಾರೆ.

ಒಟ್ಟಾರೆ ಶಿವಕವಿಗಳಾದ ಶ್ರೀ ನಾ. ಮ. ಸಿದ್ಧರಾಮಯ್ಯನವರು ಘನ ಮಹಿಮಾಶಾಲಿಗಳು ಹಾಗೂ ನಮ್ಮ ಪರಮಗುರುಗಳು ಆದ ಶ್ರೀ ವಳಬಳ್ಳಾರಿ ತಾತನವರ ಸಮಗ್ರ ಚರಿತ್ರೆಯನ್ನು ಬೃಹತ್ ಕಾವ್ಯ ರೂಪದಲ್ಲಿ ಚಿತ್ರಿಸಿ ಸಾರ್ಥಕದ ಸಿದ್ಧಿಯನ್ನು ಪಡೆದು ಪುಣ್ಯಜೀವಿಗಳಾಗಿದ್ದಾರೆ. ಪ್ರಸ್ತುತ ಈ ಪುಣ್ಯ ಕಾವ್ಯ ಲೀಲೆಯು ಓದುಗರ-ಕೇಳುಗರ ಮನವನ್ನು ಅರಳಿಸುವ ಮಂದಾರವಾಗಿದೆ.

ಪರಮ ಗುರುಗಳಾದ ಶ್ರೀ ತಾತನವರ ಪುರಾಣಕರ್ತೃ ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ಇನ್ನೂ ಹೆಚ್ಚಿನ ಕಾವ್ಯಶಕ್ತಿಯನ್ನು ನೀಡಲಿ, ಅವರ ಕೀರ್ತಿ ನಾಡಿನಾದ್ಯಂತ ತೊಳಗಿ ಬೆಳಗಲಿ, ಅನೇಕಾನೇಕ ಕೃತಿಗಳು ಅವರ ಅನುಭವದಾಳದಿಂದ ಹೊರಹೊಮ್ಮಿ ಸಾಹಿತ್ಯ ಸರಸ್ವತಿಯ ಉಡಿಯನ್ನು ತುಂಬಲೆಂದು ಹಾರೈಸುತ್ತೇನೆ.

"ಮನವು ಘನದಲಿರಿಸಿ ಘನಸುಖದ ಸಾಮ್ರಾಜ್ಯ ಪಡೆದ
ಘನ ಪರಂಜ್ಯೋತಿ ತಾತನು-ತಾ ಶಿವಯೋಗ
ಸಾಮ್ರಾಜ್ಯದಲಿದ್ದು ಭಕ್ತಕೋಟಿಗೆ ಸುಖ-ಶಾಂತಿಯನ್ನೀಯಲಿ"

ಶ್ರೀ ಜಗದ್ಗುರು
ಕೊಟ್ಟೂರುಸ್ವಾಮಿ ಮಠ
ಬಳ್ಳಾರಿ-ಹೊಸಪೇಟೆ

೧೨-೭-೮೯

ಶ್ರೀ ಜಗದ್ಗುರು
ಸಂಗಬಸವಸ್ವಾಮಿಗಳು
ಹಂಪೆ-ಹೊಸಪೇಟೆ-ಬಳ್ಳಾರಿ

ಶ್ರೀ ಗುರು ಚೆನ್ನಬಸವೇಶ್ವರ ಪ್ರಸನ್ನ

**ಶ್ರೀ ಮ.ನಿ.ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು**

**ಶ್ರೀ ಸುವರ್ಣಗಿರಿ-ಸಂಸ್ಥಾನ-ವಿರಕ್ತಮಠ**

**ವಳಬಳ್ಳಾರಿ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ.**

# ಶುಭಾಶೀರ್ವಚನಗಳು

ಕನ್ನಡನಾಡು, ಶರಣರ, ಸಂತರ, ದಾಸರ, ಶಿವಯೋಗಿ ಪುಂಗವರಿಗೆ ಜನ್ಮವಿತ್ತ ಪವಿತ್ರಭೂಮಿ ; ಅಂತೆಯೇ ಕಾಲಕಾಲಕ್ಕೆ ಧರ್ಮ ಅವನತಿಗೊಂಡಾಗ ಮಹಾತ್ಮರು ಉದಯಿಸಿ ಜನತೆಗೆ ಒಳ್ಳೆಯ ಮಾರ್ಗ ತೋರಿಸಿ ಉದ್ಧರಿಸುತ್ತಾ ಬಂದಿದ್ದುದು ಸರ್ವವಿದಿತ. ಅಂತಹ ಮಹಾತ್ಮರ ಮಾಲಿಕೆಯಲ್ಲಿ ೨೦ನೇ ಶತಮಾನದ ವಿಭೂತಿ ಪುರುಷರಾಗಿ, ಶಿವಕುಲ ಸಂಜಾತರಾಗಿ ಮಾನವ ಕುಲೋದ್ಧಾರಕರಾಗಿ, ಲಿಂಗಪೂಜಾ ನಿಷ್ಠರಾಗಿ ಬಂದ ಭಕ್ತರ ಬಯಕೆ ಪೂರೈಸುವ ಕಾಮಧೇನುವಾಗಿ, ವೈರಾಗ್ಯನಿಧಿಯಾಗಿ ಬೆಳಗಿದ ವಳಬಳ್ಳಾರಿ ಶ್ರೀ ಚನ್ನಬಸವ ತಾತನವರು ಶ್ರೇಷ್ಠರೆನಿಸಿದ್ದಾರೆ. ಇಂತಹ ಮಹಾತ್ಮರ ಲೀಲೆಗಳು ಸರ್ವ ಭಕ್ತರಿಗೆ ತಿಳಿಯಲೆಂಬ ಉದ್ದೇಶದಿಂದ ಮಹಾನ್ ಸಾಹಿತಿಗಳಾಗಿ, ಶಿವಕವಿ ಶ್ರೀ ವೇ॥ ನಾ. ಮ. ಸಿದ್ಧರಾಮಯ್ಯನವರು ಶ್ರೀ ಚನ್ನಬಸವ ಲೀಲಾಕಾವ್ಯವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿ ಸತ್ಯ ಶಿವ ಸುಂದರತೆಯಿಂದ ಕೂಡಿದ ಈ ಕಾವ್ಯವನ್ನು ಸರಸ್ವತಿಯ ಭಂಡಾರಕ್ಕೆ ಸಮರ್ಪಿಸಿ ನಾಡಿನ ಜನತೆಗೆ ಒಂದು ಸತ್ಕೃತಿಯನ್ನು ನೀಡಿ ಧನ್ಯರಾಗಿದ್ದಾರೆ.

ಕವಿ ಶ್ರೀ ಸಿದ್ಧರಾಮಯ್ಯನವರು ಬರೆದಿರುವ ಕಾವ್ಯದಲ್ಲಿ ಶೈಲಿಯು ಸರಳ ಸುಂದರತೆಯಿಂದ ಕೂಡಿ, ಸಾಮಾನ್ಯ ಜನತೆಗೆ ತಿಳಿಯುವಂತೆ ಭಾಮಿನೀ ಷಟ್ಪದಿಯಲ್ಲಿ ರಚಿಸಿರುವುದು ಯಥಾಯೋಗ್ಯವಾಗಿದೆ. ಶ್ರೀ ತಾತನವರ ಕರುಣೆಗೆ ಕಾದರಾಗಿ ಜೀವಿಸಿದ್ದಾರೆ. ನಮ್ಮ ಮಠದ ಆಸ್ಥಾನ ಪಂಡಿತರೂ, ಕವಿಗಳೂ, ಶಿವಾನುಭಾವಿಗಳೂ ಆದ ಲಿಂಗೈಕ್ಯ ಶ್ರೀ ನಾ.ಮ. ದೊಡ್ಡಯ್ಯಶಾಸ್ತ್ರಿಗಳವರ ಕೃಪೆಗೆ ಪಾತ್ರರಾಗಿ ಬೆಳಗಿದ್ದಾರೆ.

ಈ ಶಿವಕವಿಯಿಂದ ರಚಿತಗೊಂಡ ಶ್ರೀ ತಾತನವರ ದಿವ್ಯ ಚರಿತಾಮೃತವು ಅಸಂಖ್ಯ ಜನತೆಗೆ ಲಭ್ಯವಾಗಲಿ. ಶ್ರೀ ಕೃಪೆ ತಾತನವರಿಂದ ಬೆಳಗಲಿ ಮತ್ತು ಶ್ರೀ ನಾ. ಮ. ಸಿದ್ಧರಾಮಯ್ಯನವರಿಂದ ಉತ್ತಮೋತ್ತಮ ಕೃತಿಗಳು ಸಮಾಜಕ್ಕೆ ದೊರಕುವಂತಾಗಲಿ, ಶ್ರೀ ಚನ್ನಬಸವ ಶಿವಯೋಗಿ ತಾತನವರ ಕೃಪಾಶೀರ್ವಾದ ಇವರಿಗೂ ಇವರ ಮನೆತನಕ್ಕೂ ಸದಾ ಇರಲೆಂದು ನಾವು ತಾತನವರಲ್ಲಿ ಹಾರೈಸುತ್ತೇವೆ.

ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ವಳಬಳ್ಳಾರಿ

ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು
ಮುರುಘಾಮಠ-ಮೃತ್ಯುಂಜಯನಗರ-ಧಾರವಾಡ-ಇವರ

# ಆ ಶೀ ರ್ವ ಚ ನ ಗ ಳು

ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರಿಂದ ವಿರಚಿತವಾದ ಒಳಬಳ್ಳಾರಿ ತಾತ ಶ್ರೀ ಚನ್ನಬಸವಲೀಲಾ ಕಾವ್ಯವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿ ಸಮಾಜಕ್ಕೆ ಒಂದು ಸಾರ್ಥಕದ ಸತ್ಕೃತಿಯನ್ನು ನೀಡಿದ್ದಾರೆ. ಪರಮ ತಪಸಿಗಳಾದ ಶ್ರೀ ತಾತನವರ ಚರಿತ್ರೆ ಅಸಂಖ್ಯ ಭಕ್ತಾದಿಗಳು ತಿಳಿದು ಸಂತೋಷವನ್ನುಂಟುಮಾಡುವ ಕೃತಿ ರಚಿಸಿ ಕವಿಗಳು ಧನ್ಯರಾಗಿದ್ದಾರೆ. ಶಿವಾನುಭವಿಗಳೂ, ಪಂಡಿತರೂ ಆದ ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ಭಗವಂತನು ಹಾಗೂ ಶ್ರೀ ಮ. ನಿ. ಪ್ರ. ಮೃತ್ಯುಂಜಯಪ್ಪಗಳ ಕೃಪೆ ಸದಾ ಇರಲೆಂದು ಹಾರೈಸಿ ಆಶೀರ್ವದಿಸೋಣವಾಗಿದೆ.

ಮುರುಘಾಮಠ, ಮೃತ್ಯುಂಜಯನಗರ
ಧಾರವಾಡ

ಶ್ರೀ ಮಹಾಂತ ಸ್ವಾಮಿಗಳು



ಶ್ರೀ ಮ. ನಿ. ಪ್ರ. ನೀಲಕಂಠ ಮಹಾಸ್ವಾಮಿಗಳು
ಗುಬ್ಬಿ–ಗುಳೇದಗುಡ್ಡ–ಇವರ

# ಆಶೀರ್ವಾದಗಳು

ಕರ್ನಾಟಕದಲ್ಲಿ ಪ್ರಸಿದ್ಧಿ ಪಡೆದ, ಪರಮ ತಪೋಧನರಾದ ಒಳಬಳ್ಳಾರಿ ಶ್ರೀ ಚನ್ನಬಸವ ಮಹಾಸ್ವಾಮಿಗಳವರ ಚರಿತ್ರೆಯನ್ನು ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಭಾಮಿನೀ ಷಟ್ಪದಿಯಲ್ಲಿ ರಚಿಸಿ, ನಾಡಿನ ಜನತೆಗೆ ಮಹೋಪಕಾರ ಮಾಡಿ ಕೃತಕೃತ್ಯರಾಗಿದ್ದಾರೆ. ಸರಳತೆ, ಸುಭಗತೆ, ಸುಂದರ ದಿಂದ ಕೂಡಿದ ಭಾಮಿನೀ ಷಟ್ಪದಿಯ ಕಾವ್ಯ ಶ್ರೀ ತಾತನವರ ಚರಿತ್ರೆ ತಿಳಿಸುವುದರ ಜೊತೆಗೆ ವೀರಶೈವ ತತ್ವ ಸಿದ್ಧಾಂತವನ್ನು ವಿವರವಾಗಿ ತಿಳಿಸುವ ಈ ಕೃತಿ ಸಾರ್ಥಕತೆ ಪಡೆದಿದೆ. ಶಿವಕವಿ ಶ್ರೀ ಸಿದ್ಧರಾಮಯ್ಯನವರು (ಬಳ್ಳಾರಿ) ಚಿರಕಾಲ ಬಾಳಿ ಇನ್ನು ಮಹತ್ ಕೃತಿಗಳನ್ನು ಸಮಾಜಕ್ಕೆ ನೀಡಲೆಂದು ಆಶೀರ್ವದಿಸಲಾಗಿದೆ.

ಗುಬ್ಬಿ–ಗುಳೇದಗುಡ್ಡ — ಶ್ರೀ ನೀಲಕಂಠ ಸ್ವಾಮಿಗಳು
ದಿನಾಂಕ ೧೧–೭–೮೯



ಶ್ರೀ ಘನ ಮಠೇಶ್ವರ ಪ್ರಸನ್ನ

ಶ್ರೀ ಘನಮಠೇಶ್ವರ ಸಂಸ್ಥಾನ ಮಠದ ಪೀಠಾಧಿಪತಿಗಳಾದ

**ಶ್ರೀ ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು**

ಸಂತೆಕೆಲೂರ ಅವರ

# ಶುಭಾಶೀರ್ವಾದಗಳು

ಕರ್ನಾಟಕದಲ್ಲಿ ಅದರಲ್ಲಿಯೂ ರಾಯಚೂರು ಜಿಲ್ಲೆಯಲ್ಲಿ ಧರ್ಮಕ್ಕೆ, ಆಚಾರಕ್ಕೆ ಮಹತ್ವ ಬಂದಿದ್ದು ತಪೋನಿಧಿಗಳಾದ ಒಳಬಳ್ಳಾರಿಯ ಶ್ರೀ ಚನ್ನಬಸವ ತಾತನವರಿಂದ ಅಂದರೆ ಅತಿಶಯೋಕ್ತಿ ಎನಿಸಿರಲಿಕ್ಕಿಲ್ಲ. ಶಿವನಪ್ಪಣೆಯಂತೆ ಮಾನವ ಕುಲ-ಉದ್ಧಾರಕ್ಕಾಗಿ ಅವತರಿಸಿ ಅಹೋರಾತ್ರಿ ಶಿವಚಿಂತನೆಯಲ್ಲಿ ಕಾಲ ಕಳೆದು ಶಿವನೇ ತಾವಾಗಿದ್ದಾರೆ. ಲಕ್ಷ ಲಕ್ಷಗಟ್ಟಲೇ ಜನ ದರ್ಶನಕ್ಕೆ ಬಂದು ಮನಸ್ಸಿನ ಬಯಕೆ ಪೂರೈಸಿಕೊಂಡು ಹೋಗುತ್ತಿರುವುದು ಇದಕ್ಕೆ ನಿದರ್ಶನ.

ಮೌನವೇ ಬಂಗಾರ ಎಂಬಂತೆ ತಾತನವರು ಹೆಚ್ಚು ಮಾತನಾಡದೇ ಅವರ ವಾಣಿಯಿಂದ ನುಡಿದರೆ ಲಿಂಗ ಮೆಚ್ಚಿ ಅಹುದೆನ್ನಬೇಕು ಎನ್ನುವ ಶರಣರ ವಾಣಿಯಂತೆ ಸಾಕ್ಷಾತ್ ಶಿವನೇ ಜಂಗಮ ರೂಪದಲ್ಲಿ ಮಾತನಾಡುವ ಲಿಂಗಸ್ವರೂಪಿಯಾಗಿದ್ದರು. ಅವರ ನುಡಿ ಭಕ್ತರಿಗೆ ಸಂಜೀವಿನಿಯಾಗಿತ್ತು. ಇಂತಹ ಪವಿತ್ರಾತ್ಮರ ಪುರಾಣವನ್ನು (ಲೀಲೆ)ಯನ್ನು ಮಹಾನ್ ಸಾಹಿತಿಗಳಾದ ಶ್ರೀ ನಾ. ಮ. ಸಿದ್ಧರಾಮಯ್ಯನವರು ಬರೆದು ಕೃತಾರ್ಥರಾಗಿದ್ದಾರೆ. ಇವರು ರಚಿಸಿದ ಕೃತಿ ಮೇರು ಕೃತಿಯಾಗಿದೆ. ಈ ಪುರಾಣದಿಂದ ತಾತನವರ ಪವಾಡಗಳು ಭಕ್ತರಿಗೆ ಹೆಚ್ಚು ಪರಿಚಯವಾಗಲಿ ನಾಡಿನುದ್ದಕ್ಕೂ ಶ್ರೀ ತಾತನವರ ಕೀರ್ತಿ ಪಸರಿಸಲಿ ಅವರ ಆಶೀರ್ವಾದ ಸರ್ವರ ಬಾಳಿಗೆ ಬೆಳಕು ನೀಡಲೆಂದು ಹಾರೈಸೋಣವಾಗಿದೆ.

ಸಂತೆಕೆಲ್ಲೂರು

ದಿನಾಂಕ ೧೩-೭-೮೯

ಇತಿ ಮಂಗಲಗಳು

ಸಿದ್ಧಲಿಂಗ ಮಹಾಸ್ವಾಮಿಗಳು

॥ ಶ್ರೀ ಗುರು ಕುಮಾರಂ ವಂದೇ ॥

ಶ್ರೀ ಷ. ಬ್ರ. ಮಹಾಂತಲಿಂಗ ಶಿವಾಚಾರ್ಯರು

ಮಹಾಂತೇಶ್ವರ ಹಿರೇಮಠ ಆಳಂದ–ನಂದವಾಡಗಿ ಅವರ

# ಶುಭ ಸಂದೇಶಗಳು

ಭಾರತ ಭೂಮಿ ಮಹಾತ್ಮರ ಪಾದಸ್ಪರ್ಶದಿಂದ ಪವಿತ್ರಗೊಂಡಿದೆ. ಅದಕ್ಕೆ ಮಕುಟಪ್ರಾಯವಾಗಿ ಮೆರೆಯುತ್ತಿರುವ ಕರ್ನಾಟಕದಲ್ಲಿ ರೇಣುಕಾದಿ ಆಚಾರ್ಯರೂ ಬಸವಾದಿ ಪ್ರಮಥರು ಎಡೆಯೂರ ಸಿದ್ಧಲಿಂಗೇಶ್ವರರು ಹಾನಗಲ್ಲ ಗುರು ಕುಮಾರೇಶ್ವರರು ಜನಿಸಿ ಮಾನವ ಕುಲಕೋಟಿಯ ಉದ್ಧಾರಕ್ಕಾಗಿ ಶ್ರಮಿಸಿ, ಕನ್ನಡ ನಾಡ–ನುಡಿ ತತ್ವಗಳನ್ನು ಶ್ರೀಮಂತಗೊಳಿಸಿದ್ದಾರೆ. ಅಂತಹ ಪವಿತ್ರಾತ್ಮರ ಮಾಲಿಕೆಯಲ್ಲಿ ಜನ-ಮನದಲ್ಲಿ ತಾತನವರೆಂದೇ ಪ್ರಸಿದ್ಧಿಯಾದ ಒಳಬಳ್ಳಾರಿಯ ಶ್ರೀ ಚನ್ನಬಸವ ಶಿವಯೋಗಿಗಳೊಬ್ಬರು ! ನಾನು ಬಾಲ್ಯದಿಂದಲೂ ಅವರ ಘನ ವ್ಯಕ್ತಿತ್ವವನ್ನು ಕಂಡವನು. ಕಿಂಕರತೆಯ ಸಾಕಾರ ರೂಪವೇ ಆಗಿದ್ದರು. ಎನಗಿಂತ ಕಿರಿಯರಿಲ್ಲ ಎಂಬ ಬಸವ-ಮಹಾನುಭಾವನ ಸಂದೇಶವನ್ನು ಜೀವನದಲ್ಲಿ ಅಳವಡಿಸಿಕೊಂಡಿದ್ದರು. ದಾಸೋಹವೇ ಅವರ ಜೀವನದ ಉಸಿರಾಗಿತ್ತು. ಅಂತಹ ಶಿವಯೋಗಿ ಪುಂಗವರ ಜೀವನ ಸಮುದ್ರದಂತೆ, ಆ ಸಾಗರವನ್ನು ಮಹಾನು ಪಂಡಿತರಾದ, ಸಾಹಿತಿಗಳಾದ ಶ್ರೀ ನಾ. ಮ. ಸಿದ್ಧರಾಮಯ್ಯನವರು ತಾವು ರಚಿಸಿದ ಚನ್ನಬಸವೇಶ್ವರ ಲೀಲಾಗ್ರಂಥದಲ್ಲಿ ಹಿಡಿದಿಟ್ಟಿದ್ದಾರೆ. ಕೃತಿ ನೋಡಿ ಸಂತೋಷಪಟ್ಟಿದ್ದೇವೆ. ಸರಳವೂ ! ಸುಲಲಿತವೂ ! ಆದ ಈ ಮೇರುಕೃತಿ ತಾತನವರ ಆ ಸಂದೇಶ ಹೊತ್ತಿದೆ. ಅದು ನಿತ್ಯ ಪಾರಾಯಣ ಮಾಡುವವರಿಗೆ ಸಂಜೀವಿನಿಯಾಗಿದೆ. ಇಂತಹ ಕೃತಿಗಳು ಗ್ರಂಥಕರ್ತರಿಂದ ಇನ್ನೂ ಬರಲಿ. ತಾತನವರ ಕೃಪೆ ಚಿರಂತನ ಇವರ ಜೀವನಕ್ಕೆ ಇರಲೆಂದು ಆಶಿಸೋಣವಾಗಿದೆ.

ಇತಿ ಶುಭಃ

ಆಳಂದ–ನಂದವಾಡಗಿ — ಮಹಾಂತಲಿಂಗ ಶಿವಾಚಾರ್ಯರು

ದಿನಾಂಕ ೧೪–೭–೮೯



-: ಸಿರಿಗನ್ನಡಂ ಗೆಲ್ಗೆ :-

ಡಾ|| ಸಿದ್ಧಯ್ಯ ಪುರಾಣಿಕ, ಐ.ಎ.ಯಸ್. (ನಿ)
ಅಧ್ಯಕ್ಷರು, ೫೨ನೆಯ ಅಖಿಲಭಾರತ ಕನ್ನಡ
ಸಾಹಿತ್ಯ ಸಮ್ಮೇಳನ (ಗುಲ್ಬರ್ಗ)

ದೂರವಾಣಿ : ೭೩೭೭೪
" ಶ್ರೀ ಗಿ ರಿ "
೫/೪ ಎ, ಆಲಿ ಅಸ್ಕರ್ ರಸ್ತೆ
ಬೆಂಗಳೂರು–೫೬೦೦೫೨

# ಮು ನ್ನು ಡಿ

ಇಂದಿನ ಕನ್ನಡ ಕಾವ್ಯರಂಗದ ಮೇಲೆ ನವೋದಯ, ನವ್ಯ, ದಲಿತ, ಬಂಡಾಯ, ಸಮನ್ವಯೇತ್ಯಾದಿ ಆಧುನಿಕ ರೂಪಗಳ ಲಾಸ್ಯ ನಡೆದಿದ್ದರೂ ಷಟ್ಪದೀ ಕಾವ್ಯ ಪರಂಪರೆಯೂ ಜೀವಂತ ಉಳಿದು ತನ್ನ ಪರಂಪರಾಗತ ಕುಣಿತ ವನ್ನು ತೋರುತ್ತಿರುವುದು ಅದರ ನಿರಂತರತೆಯ, ಚಿರಂತನತೆಯ ಕುರುಹಾಗಿದೆ. ಈ ಕಾಲದಲ್ಲಿಯೂ ಷಟ್ಪದೀ ಕಾವ್ಯಗಳನ್ನು ಬರೆದು ಪುರಾಣ ಕವಿಗಳ ಸಂಖ್ಯೆ ದೊಡ್ಡದಿದೆ. ಅವರೆಲ್ಲರ ಉಲ್ಲೇಖ ಇಲ್ಲಿ ಸಾಧ್ಯವಿಲ್ಲ. ಅವರ ಸಾಲಿಗೆ ಸಮ್ಮ ತರುಣ ಶಿವಕವಿ ಶ್ರೀ ನಾ.ಮ. ಸಿದ್ಧರಾಮಯ್ಯನವರು, ಪರಂಜ್ಯೋತಿ ಸ್ವರೂಪರೂ, ಪ್ರಾತಃಸ್ಮರಣೀಯರೂ ಆದ ಒಳಬಳ್ಳಾರಿಯ ಪರಮಪೂಜ್ಯ ಚನ್ನಬಸವ ತಾತ ನವರನ್ನು ಕುರಿತು "ಶ್ರೀ ಚನ್ನಬಸವ ಲೀಲಾಕಾವ್ಯ"ವನ್ನು ಬರೆಯುವುದರ ಮೂಲಕ ಸೇರಿದುದು ಅಭಿನಂದನೀಯವಾದುದು.

ಮಹಾಮಹಿಮ ಒಳಬಳ್ಳಾರಿ ತಾತನವರ ದರ್ಶನಭಾಗ್ಯ ನನಗೂ ದೊರೆತಿತ್ತು. ಅಡವಿ ಅಮರೇಶ್ವರ ಕ್ಷೇತ್ರದಲ್ಲಿ ಒಮ್ಮೆ, ವಜ್ರಮಹೋತ್ಸವ ಸಂದರ್ಭದಲ್ಲಿ ಒಮ್ಮೆ, ದಾಸೋಹಮಂಟಪದ ಉದ್ಘಾಟನಾ ಸಮಾರಂಭದಲ್ಲಿ ಒಮ್ಮೆ, ಅವರ ಆತ್ಮಶ್ರೀ ಅದ್ಭುತವಾದುದು. "ಸಮಸ್ತ ಜಾತಿಯ ಜಾಲವನು ಸರ್ವರನು ತಮ್ಮತ್ತ ಆಕರ್ಷಿಸುವ ಚುಂಬಕ ಶಕ್ತಿ ಅವರಲ್ಲಿ ಇದ್ದಿತು. ಒಂದು ಸಣ್ಣ ಹಳ್ಳಿಯ, ಸಣ್ಣ ಮಠವೊಂದರ ಸ್ವಾಮಿಗಳಾಗಿ ಅವರು ಸಾಧಿಸಿದ ಆತ್ಮಶಕ್ತಿಯ ಪರಮೋನ್ನತಿ, ಪಂಡಿತ, ಪಾಮರರೆನ್ನದೆ, ಬಡವ ಬಲ್ಲಿದರೆನ್ನದೆ, ಕುಲಜ, ಕುಲಹೀನರೆನ್ನದೆ, ಹಿಂದು ಮುಸ್ಲಿಮರರೆನ್ನದೆ, ಸ್ತ್ರೀ ಪುರುಷರೆನ್ನದೆ ಎಲ್ಲರಲ್ಲಿ ಅವರು ತೋರುತ್ತಿದ್ದ ದಯಾ ಮಯತೆ, ಸಂದರ್ಭಾನುಸಾರ ಸಹಸ್ರ ಸಹಸ್ರ ಭಕ್ತರು ಬಂದರೂ ಅವರಿಗೆ, ಎಳ್ಳಷ್ಟೂ ತೊಂದರೆಯಾಗದಂತೆ ನಡೆಯುತ್ತಿದ್ದ ದಾಸೋಹ, ಉತ್ಪೀಡಿತರಿಗೆ

ಅನುಗ್ರಹಿಸುವವರು ತಾವಾದರೂ ಅದನ್ನು ಶಿವನ ಉಡಿಗೆ ಹಾಕಿಬಿಡುತ್ತಿದ್ದ ಅವರ ಅನುಪಮ ಪ್ರಸಿದ್ಧಿ ಪರಾನ್ಮುಖತೆ, ನಿರ್ಲಿಪ್ತತೆ, ನಿರಾಡಂಬರತೆ, ನಿರಹಂಕಾರಗಳು, ಭಕ್ತರು ಸ್ವ ಸಂತೋಷದಿಂದ ಹೇಮ-ಭೂಮಿಗಳನ್ನು, ಅರ್ಪಿಸಿದರೂ ಸ್ವೀಕರಿಸದ ನಿಸ್ಪೃಹತೆ ಸ್ವಯಂ ತಾವೇ ಎತ್ತುಗಳನ್ನು ಸಾಕಿ, ಮಠದ ಹೊಲಗಳನ್ನು ಬಿತ್ತಿ ಬೆಳೆದು ದಾಸೋಹ ನಡೆಸುತ್ತಿದ್ದ ಅವರ ಕಾಯಕ ನಿಷ್ಠೆ ಎಲ್ಲಾ ಆಶ್ಚರ್ಯಕರ! ಅವರ ವಜ್ರಮಹೋತ್ಸವ, ದಾಸೋಹ ಮಂಟಪದ ಉದ್ಘಾಟನಾ ಸಮಾರಂಭಕ್ಕೆ ಲಕ್ಷ ಲಕ್ಷ ಜನರು ಬಂದಿದ್ದರೂ ಅವರಿಗಾಗಿ ಮಾಡಿದ್ದ ದಾಸೋಹ ವ್ಯವಸ್ಥೆ ದಿಗ್ಭ್ರಮೆಗೊಳಿಸುವಂಥದು. ಆ ಚಿಕ್ಕ ಮಠದ ಮೂಲೆಯೊಂದರಲ್ಲಿ ತಾತನವರು ಸಾಲು ಸಾಲಾಗಿ ಬರುತ್ತಿದ್ದ ಭಕ್ತರನ್ನು ಆಶೀರ್ವದಿಸುತ್ತ ಕುಳಿತಿರುತ್ತಿದ್ದರು. ಹೊರಗೆ ಕರೆಯದಲೆ ಬಂದ ಸಾವಿರಾರು ಕಾರ್ಯಕರ್ತರು, ನಿಜಭಕ್ತರು, ದಾಸೋಹ, ಉತ್ಸವಾದಿ ಸರ್ವ ಕಾರ್ಯಗಳನ್ನು ವಿನೀತ ಭಾವದಿಂದ ಮಾಡಿ ಪುನೀತರಾಗುತ್ತಿದ್ದರು. ಕರ್ನಾಟಕಾಂಧ್ರ ರಾಜ್ಯದಲ್ಲಿ ಅವರಿಗಿದ್ದ ಅಪಾರ ಶಿಷ್ಯ ಸಂಪತ್ತು ವಿಸ್ಮಯಕಾರಕವಾದುದು.

ಇಷ್ಟೆಲ್ಲ ಇದ್ದೂ ಕನ್ನಡ ಪತ್ರಿಕಾ ಪ್ರಪಂಚ ಅವರನ್ನು ಕಡೆಗಣಿಸಿದೆಯೆಂದರೂ ತಪ್ಪಾಗಲಾರದು. ಒಮ್ಮೊಮ್ಮೆ ಅನರ್ಹರಿಗೂ ಪ್ರಚಾರವನ್ನು ನೀಡಿಯಾರು; ಆದರೆ ಇಂಥ ಮಹಾತ್ಮರ ಬಗ್ಗೆ ಚಕಾರ ಶಬ್ದವನ್ನು ಎತ್ತದಿದ್ದಾರು! ಅವರ ದಿವ್ಯ ಜೀವನದ ಮಹತ್ವದ ಘಟನೆಗಳನ್ನಾದರೂ ಮುಂದಿನ ತಲೆಮಾರುಗಳಿಗಾಗಿ ಯಾರಾದರೂ ಅವರ ಜೀವನಚರಿತ್ರೆ ಬರೆದು ಉಳಿಸಬಾರದೆ ಎಂದು ನನ್ನಷ್ಟಕ್ಕೆ ನಾನೇ ಅಂದುಕೊಂಡಿದ್ದೆ. ಈಗ ಸಾಹಸಶೀಲ ಶಿವಕವಿ ಶ್ರೀ ನಾ.ಮ. ಸಿದ್ಧ ರಾಮಯ್ಯನವರು ಅವರ ಬಗ್ಗೆ ಕಾವ್ಯವನ್ನು ಬರೆದು ಧನ್ಯರಾಗಿದ್ದಾರೆ.

ಈ ಕಾವ್ಯ ಬರೆಯಲು ಅವರಿಗೆ ಪ್ರೇರಣೆಗಳು ಹಲವು. ಮೊದಲನೆಯದಾಗಿ ಆ ಮಹಾತ್ಮನಿಗೆ ನಿಕಟವಾಗಿದ್ದುಕೊಂಡು, ತಮ್ಮ ನೂತನ ಗೃಹಪ್ರವೇಶಕ್ಕೆ ಅವರನ್ನು ಭಕ್ತಿ ಬಿನ್ನಹ ಮಾಡಿ ಕರೆದು ತಂದು, ಅವರು ಸಮಾಧಿಸ್ಥರಾಗುವಾಗಲೂ ಅವರ ಕೈವಿಡಿದು ಕೃತಾರ್ಥರಾದುದು; ಎರಡನೆಯದಾಗಿ ಆ ಮಹಾತ್ಮರ ನೆರಳೆ ನಂತಿದ್ದ ಸಾಗರಹಾಳು ಗ್ರಾಮದ ಪಂಡಿತ ಶ್ರೀ ನಾ.ಮ. ದೊಡ್ಡಯ್ಯಶಾಸ್ತ್ರಿಗಳ ಕೃಪೆಗೆ ಪಾತ್ರರಾದುದು. ಮೂರನೆಯದಾಗಿ ಆಧುನಿಕ ಷಟ್ಪದಿ ಕವಿಗಳಲ್ಲಿ ಅಗ್ರ ಗಣ್ಯರಾದ ಸರ್ವದರ್ಶನತೀರ್ಥ ಶ್ರೀ ವೈ. ನಾಗೇಶಶಾಸ್ತ್ರಿಗಳವರ ಮಾರ್ಗದರ್ಶನ ದೊರೆತುದು; ನಾಲ್ಕನೆಯದಾಗಿ ಸ್ವಂತದ ಆಧ್ಯಾತ್ಮರತಿ; ಐದನೆಯದಾಗಿ ಶರಣ ಸಾಹಿತ್ಯ ವ್ಯಾಸಂಗನಿರತಿ; ಈ ಐದೂ ಪ್ರೇರಣೆಗಳು ಹುರಿಗೊಂಡು ಹುರುಪು ಹುಟ್ಟಿಸಿ ಅವರ ಈ ಪ್ರಥಮ ಪುರಾಣ ಕಾವ್ಯಕ್ಕೆ ಅವರನ್ನು ಅಣಿಗೊಳಿಸಿವೆ.

ಈ ವಿನಯಶೀಲ ಕವಿಗೆ ತಾನು ಬರೆಯುತ್ತಿರುವುದು ಉದ್ದಾಮ ಕೃತಿಯೆಂಬ ಭ್ರಮೆಯಿಲ್ಲ.

ಎನ್ನ ಬುದ್ಧಿಗೆ ಹೊಳೆದ ಪರಿಯಲಿ
ಎನ್ನ ಹೃದಯದಲಿರಿಸಿಕೊಳ್ಳುತ
ಚನ್ನಬಸವನ ದಿವ್ಯಲೀಲೆಯ ಕಾವ್ಯದೊಳು ಹಾಡೀ
ಮುನ್ನಿನಾ ಶರಣರನು ನೆನೆಯುತ
ಬನ್ನದಿಂದಲಿ ಬೆಂದ ಜೀವರಿ
ಗಿನ್ನು ಕರುಣಿಸು ಶಾಂತಿ ಸುಖಗಳನೆಂದು ಬೇಡುವೆನು ॥

(ಪೀಠಿಕಾ ಸಂಧಿ ಪದ್ಯ ೯)

ಎಂದು ವಾಸ್ತವದ ನೆಲೆಯಲ್ಲಿ ನಿಂತೇ ನಿರೂಪಿಸಿಕೊಂಡಿದ್ದಾರೆ, ಭಾಷೆ, ಬಂಧಗಳು ಸಮಂತ್ವದಿಂದ ಇದ್ದು, ಭಾಮಿನೀ ಷಟ್ಪದಿಯ ನಡೆ, ನಯ, ಲಯಗಳು ಧಾರಾಳವಾದಿ ಪ್ರಕಟವಾಗಿವೆ. ಉದಾಹರಣೆಗಾಗಿ ಕೆಳಗಣ ಪದ್ಯಗಳನ್ನು ನೋಡಬಹುದು.

ಲೋಕಸೃಷ್ಟಿಯ ಬದಲುಗೊಳಿಸದೆ
ಲೋಕ ದೃಷ್ಟಿಯ ಹಸನುಗೊಳಿಸುತ
ಏಕ ಸಂಸಾರದಲಿ ರಮಿಸುವ ಜನಗಳೇ ಧನ್ಯಾ ।
ನಾಕ ನರಕಗಳಿಲ್ಲಿಯಿರುವವು
ಕಾಕುಮನ ಜೀವನವ ನಡೆಸದೆ
ಲೋಕಕಲ್ಯಾಣದೊಳು ಜೀವನ ಸವೆಸಿ ಸಾರ್ಥಕದೀ

(೨ನೇ ಸಂಧಿ ; ಪದ್ಯ ೩೫)

ತನ್ನ ಮತ ಮೇಲೆಂದು ಹೇಳದೆ
ಇನ್ನುಳಿದ ಮತ ಕೀಳೆಂದು ಬಗೆಯದೆ
ಖಿನ್ನ ಮಾಡದೆ ಪರಧರ್ಮದೊಳಾ ಸಹಿಷ್ಣುತೆಯಲೀ
ತನ್ನ ಮತದಲಿ ನಿಷ್ಠೆಯಿಡುತಲಿ
ತನ್ನ ಗುಣಗಳ ಲಿಂಗವಾಗಿಸಿ
ತನ್ನ ಧರ್ಮದಿ ಕೊಸೆಯು ಕಾಣ್ವದೆ ಯಶವು ಜಗದೊಳಗೇ

(೬ನೇ ಸಂಧಿ ; ಪದ್ಯ ೨೨)

ಮನದ ಮುಂದಣ ದಾಸೆ ಮಾಯೆಯು
ಮನುಜನಾಶೆಗೆ ಮಿತಿಯು ಯಿಲ್ಲವು
ತನುವ ದಣಿಸದೆ ಹಣವಗಳಿಸುತ ಸುಲಭಸುಖಬಯಸೀ

ಧನದಿ ಸುಖವುಂಟೆಂದು ತಿಳಿಯುತ
ಜನರು ತಿಳಿಯದೆ ಸುಖದನೆಲೆಯನು
ದಿನದ ಜೀವನ ಸತ್ಯಶುದ್ಧದ ಕಾಯಕದಿ ಸುಖವೂ

( ೯ನೇ ಸಂಧಿ ; ಪದ್ಯ ೪೦ )

ನಡೆದು ನಾಡಿನ ಜನರ ತಿದ್ದುತ
ಒಡವೆನವ ಶ್ರೀಮಂತಗೊಳಿಸುತ
ಮೃಡರೂಪಿ ಶ್ರೀ ಚೆನ್ನಬಸವರು ಚರಿಸಿಜಗದೊಳಗೇ
ಬಿಡಿಸಿ ದುರ್ಗುಣ ಚಟಗಳೆಲ್ಲವ
ಒಡೆಯ ತಾವಾಗಿರುತ ಶಿವಸುಖ ಸಾಮ್ರಾಜ್ಯದೊಳಗೇ

( ೯ನೇ ಸಂಧಿ ; ಪದ್ಯ ೧೮ )

ಎಲೆಯು ಅಲುಗದು ಗಾಳಿ ಬೀಸದು
ಉಲಿವ ಮೃಗ ಪಕ್ಷಿಗಳು ಶೋಕದಿ
ಹೊಲಬುಗಾಣದೆ ದನಗಳೆಲ್ಲವು ನಿಂತು ರೋದನದೀ
ಗೆಲವಿರದೆ ವರ ತುಂಗಭದ್ರೆಯು
ಉಲುಹಿನಿಂ ಹರಿಯದಲೆ ಸ್ತಬ್ಧದಿ
ತಳಮಳವ ಪಡುವಂಥ ಜನಗಳು ಸೇರಿ ಮಠದೊಳಗೇ

(೧೬ನೇ ಸಂಧಿ ; ಪದ್ಯ ೫೧)
(ತಾತನವರ ಕೊನೆಯ ಗಳಿಗೆಯಲ್ಲಿ)

ಇಷ್ಟು ಸಾಕು ಈ ಶಿವಕವಿ ಸಾಧಿಸಿರುವ ಕಾವ್ಯಶಕ್ತಿಯ ನಿದರ್ಶನಕ್ಕೆ. ಈ ಕಾವ್ಯದಲ್ಲಿ ವೀರಶೈವ ಸಿದ್ಧಾಂತಕ್ಕೆ ಸಂಬಂಧಿಸಿದ ಖಚಿತ ವಿವರಗಳು ತುಂಬಿ ತುಳುಕುತ್ತಿವೆ. ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ, ಏಕೋತ್ತರ ಶತಸ್ಥಲ, ತ್ರಿವಿಧ ದೀಕ್ಷೆ, ದಶವಿಧ ಪಾದೋದಕ, ಷಡಧ್ವಗಳು, ಪ್ರಸಾದಗಳು, ಕಲ್ಪಭಸ್ಮ, ಕ್ರಿಯಾಸಮಾಧಿಯ ರಚನೆ–ಇತ್ಯಾದಿಗಳ ಸ್ಪಷ್ಟ, ಅಕ್ಲಿಷ್ಟ ನಿರೂಪಣೆಯಿದೆ. ತಾತನವರ ಎಲ್ಲ ಲೀಲೆಗಳ ಜೊತೆಗೆ ಅವರ ಉತ್ಕಟ ಮಾನವೀಯತೆಯು ಉಕ್ಕಿದ ಘಟನೆಗಳ ಸಮುಚಿತ ಚಿತ್ರಣವಿದೆ. ಉದಾಹರಣೆಗೆ :–ಸಂತೇಕೂಡ್ಲೂರು ಗ್ರಾಮದ ಸಂಗನಗೌಡರು ತಾತನವರ ಸೇವಕನಿಗೆ ಹಳಸಿದನ್ನ ಬಡಿಸಿದಾಗ ತಾತನವರು ತತ್‌ಕ್ಷಣ ಗೌಡರ ಮನೆಬಿಟ್ಟು ರಾತ್ರೋರಾತ್ರಿ ಪ್ರಯಾಣ ಬೆಳೆಸಿದುದು. (೯ನೇ ಸಂಧಿ)

ಒಟ್ಟಿನಲ್ಲಿ ಇದೊಂದು ಮಹತ್ವದ ಅಗತ್ಯವೊಂದನ್ನು ಪೂರೈಸಿದ ಕೃತಿ. ಇದರಲ್ಲಿ ಕಾವ್ಯಗುಣಗಳು, ಲಕ್ಷಣಗಳೂ ಕಾಣಿಸಿಕೊಂಡಿವೆಯಾದರೂ, ಕಾವ್ಯಗುಣ

ಲಕ್ಷಣಗಳಿಂದಲೇ ಒಂದು ಕೃತಿ ಶ್ರೇಷ್ಠವೆನಿಸಬೇಕಿಲ್ಲ; ವಸ್ತು ಮಹತ್ವ, ಸಾಮಾಜಿಕ ಮೌಲ್ಯ, ಕೃತಿಕಾರನ ನಿಷ್ಠೆ ನಿರೂಪಣಾ ಕೌಶಲ್ಯ, ಪರಿಣಾಮ ರಮಣೀಯತೆ, ಇತ್ಯಾದಿಗಳೂ ಶ್ರೇಷ್ಠತೆಯ ಅಪರಿಹಾರ್ಯ ಅಂಶಗಳು. ಇವೆಲ್ಲವುಗಳನ್ನು ಒಳಗೊಂಡ ಈ ಕೃತಿ ಒಂದು ಸತ್ಕೃತಿಯೆಂದು ಹೇಳಿದರೆ ತಪ್ಪಾಗದು. ಇನ್ನು ಬಹಳ ವರ್ಷ ಬದುಕಲಿರುವ ಈ ಶಿವಕವಿ ತನ್ನ ಶಕ್ತಿ ಸಾಮರ್ಥ್ಯಗಳನ್ನು ಬೆಳೆಸಿಕೊಂಡು ಉದ್ಧ ಕೃತಿಗಳನ್ನು ಕೊಡುತ್ತಾ ಹೋಗಲೆಂದು ಹೃದಯಾರೆ ಹಾರೈಸುತ್ತೇನೆ.

ಬೆಂಗಳೂರು — ಸಿದ್ಧಯ್ಯ ಪುರಾಣಿಕ

ದಿನಾಂಕ ೧೮-೬-೧೯೬೮



ಓಂ ಶಂ

ಶ್ರೀಶೈಲ ಜಗದ್ಗುರು ಪಂಡಿತಾರಾಧ್ಯ ಪ್ರಸೀದತು

'ಕವಿಗುರು, ಗುರುಕವಿ' 'ವಚನಬ್ರಹ್ಮ' 'ಸಾಹಿತ್ಯ ಸಾರ್ವಭೌಮ' 'ದಾರ್ಶನಿಕ ಸಾಹಿತ್ಯ ಸಾಮ್ರಾಟ್' 'ಅದ್ಯತನ ಗದ್ಯಗೀತಾಚಾರ್ಯ' ಸಂಶೋಧನ ಸುಧಾಕರ' 'ಭಾರತೀಯ ಭಾಷಾಭೂಷಣಂ' ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ

೧೧೮ಲ ಜಗದ್ಗುರು ಡಾ|| ಶ್ರೀ. ಜ. ಚ. ನಿ. ಸನ್ನಿಧಿಯ

# ನಲ್ವರಕೆ

ಶ್ರೀ ನಾ. ಮ. ಸಿದ್ಧರಾಮಯ್ಯ ಕವಿಯು ಸಮಕಾಲೀನ ಲೀಲಾಮೂರ್ತಿಗಳಾಗಿದ್ದ 'ಒಳಬಳ್ಳಾರಿ ತಾತ' ಎಂದು ಕೀರ್ತಿಗಳಿಸಿದ್ದ ಶ್ರೀಗಳವರ ನಲ್ವಸರಿನ "ಶ್ರೀ ಚನ್ನಬಸವ ಲೀಲಾಕಾವ್ಯ"ವೊಂದನ್ನು ಸರಳ ಶೈಲಿಯಲ್ಲಿ ಲೀಲಾಜಾಲವಾಗಿ ರಚಿಸಿರುವುದೇ ಇದರ ಹೆಚ್ಚಳಿಕೆ! ಏಕೆಂದರೆ ಸಮಕಾಲೀನರ ಮೇಲೆ ಸೃಜನಾತ್ಮಕವಾಗಿ ಕಾವ್ಯ ಬರೆಯುವುದು ಕಠಿಣವೆಂದು ಬೇರೆ ಬರೆಯಬೇಕಾಗಿಲ್ಲ. ಸಿರಿಗನ್ನಡ ಸಾಹಿತ್ಯೇತಿಹಾಸದಲ್ಲಿ ಸಮಕಾಲೀನ ಸೃಜನಾತ್ಮಕ ಕಾವ್ಯಗಳೇ ವಿರಳ. ಇಲ್ಲೆಂದರೂ ಸಲ್ಲುವುದು. ಈ ಅಭಾವವನ್ನು 'ಸದಾ-ಶಿವ-ರುದ್ರಂ' 'ಸಜ್ಜಲ ಶರಣವ್ವೆ' ಎಂಬೀ ಎರಡು ಸಮಕಾಲೀನ ಸೃಜನಾತ್ಮಕ ಮಹಾ ಕಾವ್ಯಗಳನ್ನು ಸೃಜಿಸಿ ತೊಡೆದುಹಾಕಿದ ಮೊದಲಿಗರು ನಾವು. ನಮ್ಮ ಬೆಂಬಳಿವಿಡಿದು ಬರೆದ ಶ್ರೀ ನಾ. ಮ. ಸಿದ್ಧರಾಮ ಕವಿ ಎರಡನೆಯವರು. ಈ ದೃಷ್ಟಿಯಿಂದ ಈ ಕಾವ್ಯಕ್ಕೆ ಹೆಚ್ಚಳಿಕೆಯಿದೆ. ಇದು ಹಳೆಯ ಷಟ್ಪದಿ ಶೈಲಿಯಲ್ಲಿದ್ದರೂ ಇದು ಪುರಾಣವಲ್ಲ; ಲೀಲಾಕಾವ್ಯ. ಇದು ಗಮನೀಯ.

ಒಳಬಳ್ಳಾರಿ ತಾತನವರು ಕ್ರಿಯಾಸಿದ್ಧರೆಂಬುದನ್ನು ನಾವು ಹಲವಾರು ಭಕ್ತ ಜನರಿಂದ ಕೇಳಿ ತಿಳಿದುಕೊಂಡಿದ್ದೆವು. ದರ್ಶಿಸಲು ಸಮಯ ಕೂಡಿಬರಲಿಲ್ಲ. ಅವರು ಸಮತಾಭಾವಿಗಳಾಗಿದ್ದರಿಂದ ಸರ್ವಜನಭಾವ್ಯರು. ಆ ಸರ್ವಜನ ಭಾವ್ಯರ ಸಚ್ಚರಿತೆಯನ್ನು ಈ ಕವಿಯು ಕಾವ್ಯರೂಪದಲ್ಲಿ ಅರಿತು ಈ ಎರಡು ನುಡಿಗಳನ್ನು ಬರೆಯುವುದಕ್ಕೆ ಕವಿಯು ಕರುಳಿನ ಕೇಳಿಕೆಯೆ ಕಾರಣ. ಇದೂ ಸಹ ನೇರ ಕೇಳಿಕೆಯಲ್ಲ; ನಾವು ಅವರಿಗೆ ದೊರಕದೆ ನಮಗೆ ತುಂಬಾ ಬೇಕಾದ, ಓರಿಯಂಟ್ ಪವರ್ ಪ್ರೆಸ್ ಒಡೆಯರಾದ ಶ್ರೀ ಜಿ. ಎಸ್. ಕುಮಾರಸ್ವಾಮಿಯವರ ಮುಖಾಂತರ ಈ ಕಾವ್ಯಕರ್ತ್ರರ ಹಾರ್ದಿಕ ಹಂಬಲವನ್ನು ಕೇಳಿ ಹರುಷಗೊಂಡು ಹೃದಯ ತುಂಬಿ ಬರೆಯುತ್ತಿದ್ದೇವೆ. ಸಮಕಾಲೀನ ಸೃಜನಾತ್ಮಕ ಕಾವ್ಯ ರಚಿಸಿ ಬೆಂಬಳಿಗರಾಗಿರುವರೆಂಬ

ಕಾರಣದಿಂದ ಮಾತ್ರವಲ್ಲ, ಪುರಾತನ ಪರಂಪರೆಯ ವಾಸ್ತವ ಪ್ರಜ್ಞೆಯಲ್ಲಿಯೂ ನಮ್ಮ ಹೊಲಬಿಗರೆಂಬುದನ್ನು ಮನಗಂಡು ಬರೆಯೋಣವಾಗಿದೆ.

ಕಾವ್ಯದ ಮಂಗಲಾಚರಣೆ ಮೊದಲಾಗುತ್ತಲೆ,

ವೀರಗಣಗಳ ವೊಡೆಯನಾಗಿಹ
ಭೂರಿ ಗಣಪನ ಸಿದ್ಧಿ ಕೃಪೆಯೊಳು
ಮಾರಹರ ಕರುಣೋದಯದಿ ತಾ ಕಾವ್ಯ ರಚಿಸುವನು ;
ಚಾರು ಶ್ರೀಗುರು ರೇಣುಕಾಚಾರ್ಯರ
ವೀರ ಶ್ರೀಗುರು ವೀರಭದ್ರನ
ಧೀರಕವಿ ಶ್ರೀ ಸಿದ್ಧರಾಮೇಶ್ವರನು ನುಡಿಸುವನು.

ಪುರಾತನೇತಿಹಾಸದ ವಾಸ್ತವ ಪಥದಲ್ಲಿ ಹೆಜ್ಜೆಹಾಕಿ ಹೃದಯ ತುಂಬಿ ಮಂಗಲ ಮಾಡಿದ್ದಾರೆ. ವಿನಾಯಕನ ವಿಶೇಷಣವನ್ನು, ವೀರಭದ್ರನ ವಿಶೇಷಣವನ್ನು ಕೊಡುವಲ್ಲಿ ಅದೆಂತಹ ಪರಿಣತ ಪ್ರಜ್ಞೆ. ಔಚಿತ್ಯ, ಚಾರಿತ್ರ ನಿಲುವು ಕವಿಗೆ ಮೂಡಿಬಂದಿದೆಯೆಂಬುದೇ ನಮಗಾದ ಹರುಷ ಹೆಮ್ಮೆಗಳಿಗೆ ಕಾರಣ !

ರುದ್ರಗಣರಿಗೆ ವೀರಭದ್ರನೊಡೆಯನಾದರೆ, ವೀರಗಣರಿಗೆ ವಿನಾಯಕ ಒಡೆಯನೆಂಬುದು ಚಾರಿತ್ರಿಕ ಸತ್ಯ ಮತ್ತು ಶ್ರೀಗುರು ವೀರಭದ್ರನೆಂಬುದನ್ನು ವೀರಾಗಮ ಉಗ್ಗಡಿಸಿದೆ,

"ವೀರಮಾಹೇಶ್ವರಾಚಾರ ವೀರಭದ್ರಾಯ ತೇ ನಮಃ ।
ಅಶೇಷ ಪ್ರಪಂಚಾಚಾರ ಗುರೂಣಾಂಗುರುವೇ ನಮಃ ॥"
"ವೀರಭದ್ರೋಯಥಾ ರುದ್ರಸ್ತ್ವನ್ಯೇಚ ಗುರವಃಸ್ಮೃತಾಃ"—ಸ್ಕಾಂದ

ಇವರಿಂದಾಗಿ ಈ ಮಂಗಲಾಚರಣೆ ಕೇವಲ ಭಾವಿಕ ಮಂಗಲಾಚರಣೆಯಾಗಿರದೆ ವೀರಶೈವ ಪುರಾತನೇತಿಹಾಸ ನಿರೂಪಣೆಯೂ ಆಗಿದೆ. ಶ್ರೀ ಗುರು ರೇಣುಕಾಚಾರ್ಯರ ನೆನೆದು ಕವಿ ಸಾಮ್ಯವಾದಿಯಾಗಿದ್ದಾನೆ. ಇದಲ್ಲದೆ ಪೂರ್ವ ಪರಂಪರೆಯ ಪ್ರಾಮಾಣಿಕ ಪ್ರಜ್ಞೆಯುಳ್ಳ ಕವಿ ೨ನೆಯ ಸಂಧಿ ಪದ್ಯ ೪ ಮತ್ತು ೬ರಲ್ಲಿ ರುದ್ರ ಕನ್ನೆಯರನ್ನು ರುದ್ರಗಣರನ್ನು ನೆನೆದಿದ್ದಾನೆ.

ರಾಜ ಮಹಾರಾಜರ ಚರಿತ್ರವ । ರಾಜ ವಿಭವದಿ ಬರೆಯಬಹುದು ।
ರಾಜ ಋಷಿಗಳು ಬರೆದ ಕಥನವ ಮತ್ತೆ ಬರೆದಿಹರು ॥
ಭೋಜರಾಜನ ಕಾಳಿದಾಸನು । ರಾಜ ಅರಿಕೇಸರಿಯ ಪಂಪನು
ರಾಜಭೋಗದಿ ರಾಜಯೋಗವ ತಿಳಿಸಿ ಕೃತಿಗಳಲಿ ॥

ಅರ್ಥದಾಸೆಗೆ ಕಾವ್ಯ ಬರಯದೆ। ಅರ್ಥಕಾಮದಿ ತನುವು ಮಾರದೆ।
ವ್ಯರ್ಥಗೊಳಿಸದೆ ಜನ್ಮ ಸಾರ್ಥಕದಮಾರ ಕೃತಿಗಳಲಿ ॥
ಅರ್ಥ ಪದಗಳು ಬೇರೆಯಾಗದೆ। ಅರ್ಥ ಪದಗಳು ಕೂಡಿಕೊಂಡಿಹ।
ದರ್ಥ ಪದಗಳ ಸಾರ್ಥಕತೆಯನು ಸಾಂಬನಲಿ ಕಂಡು ॥

ಪರಮ ರಸಿಕದ ಚಿಕ್ರ ಹರಿಹರ। ವರಮಹಾಕವಿ ರಾಘವಾಂಕನ।
ವರಷಡಕ್ಷರಿ ಕವಿಗಳೆಲ್ಲರ ಭಜಿಸಿ ಭಕ್ತಿಯಲಿ
ಹರಿವ ಮಾನವನ ನಿಲಿಸುವಂಥಹ। ಬೆರೆತು ಶಿವಯೋಗದೊಳು ಕೂಡುವ
ಪರಮ ತತ್ತ್ವವ ತಿಳಿಸುವಂತಹ ಕೃತಿಗಳೇ ಧನ್ಯ ॥

ಮೇಲಿನ ಮೂರು ಪದ್ಯಗಳಿಂದ ಕವಿಗೆ ಕಾವ್ಯದ ಬಗೆಗೆ ಇರುವ ದೃಷ್ಟಿ ಮನೋಭಾವಗಳು ಎಂತಹವೆಂಬುದು ಎಂತವರಿಗೂ ತಿಳಿದುಬರುತ್ತದೆ. ಮಮ್ಮಟ ಕವಿಯ ಕಾವ್ಯ ಪ್ರಕಾಶದ "ಶಿವೇತರ ಕ್ಷತಯೇ" ಎಂಬ ಒಳ್ನುಡಿ ನೆನಪಿಗೆ ಬರುತ್ತದೆ. ಚೈತನ್ಯಪೂರ್ಣವೂ ಶಿವಸೌಂದರ್ಯವೂ ಸತ್ಯಶಾಶ್ವತವೂ ಆದ ವಿಭೂತಿ ಪುರುಷರ ಜೀವನವನ್ನು ಗೀತಿಸುವ ಕಾವ್ಯವೇ ಧನ್ಯವೆಂಬುದು ಶ್ರೀ ಸಿದ್ಧರಾಮಯ್ಯ ಕವಿಯ ಕಲಾಮಯ ಆಶಯ. ಈ ದಿಸೆಯಲ್ಲಿ ಕಾಳಿದಾಸ, ಪಂಪ ಕವಿಗಳ ಅರ್ಥದಾಸೆಯ ಕೃತಿಗಳನ್ನೊಪ್ಪುವುದಿಲ್ಲ ಈ ದಿಟ್ಟಕವಿ. ಅಂತೆಯೆ ಮೊದಲ ಪದ್ಯದಲ್ಲಿ ತಾನೇ ಹೇಳಿಕೊಂಡ 'ಧೀರಕವಿ ಶ್ರೀ ಸಿದ್ಧರಾಮೇಶ್ವರನು' ಮಾತು ಸತ್ಯಕ್ಕೂ ಸಾರ್ಥಕವಾಗಿದೆ. ಮಾನವರ ಹೃದಯಗಳನ್ನು ಹೊಲಬುಗೆಡಿಸದೆ ಹಸಗೆಡಿಸದೆ ವಿಶುದ್ಧವಾಗಿ ವಿಶಾಲವಾಗಿ ಸತ್ಯಶಿವವಾಗಿ ಚಿತ್ರಿಸುವ ಕಾವ್ಯ ಜೀವಂತವಾಗಿರುವುದು ; ಜೀವಾತ್ಮ್ಯತ ವಾಗಿರುವುದು. ಇಲ್ಲಿ ಹಳೆ ಹೊಸತುಗಳ ಮಾತಿಲ್ಲ. ಶೈಲಿ ರೀತಿಗಳ ಕಟ್ಟಿಲ್ಲ. ಅಂತಹ ಕೃತಿ ಕಾಲಾತೀತವಾಗುತ್ತದೆ ; ಮಾಯಾತೀತವಾಗುತ್ತದೆ ; ಕರ್ಮಾತೀತವೂ ಆಗುತ್ತದೆ. ಹಾಗಾಗಬೇಕೆಂಬುದು ಈ ಕವಿಯ ದಿಟವಾದ ದೃಷ್ಟಿ !

"ಬೇಡಿದರೆ ಸದುಭಕ್ತಿ ಕೇಳುವ, ನೀಡಿದರೆ ನೆನಪಿರದೆಯಿರುವ ;
ರೂಢಿಯೊಳಗುತ್ತಮಂದ ಮಾನವನು ಕರುಣಿಸೆನಗಿಂದು ;
ಜೋಡು ಕೈಗಳ ಮುಗಿದು ಮೃಡನಿಗೆ, ಹಾಡಿ ಹೊಗಳುತ ಭಕ್ತಿಭಾವದಿ ;
ಕೂಡಿ ನಲಿಯುತ ಎನ್ನ ಆತ್ಮಾನಂದದಲಿ ಸುಖಿಸಿ ;
ಹರನ ರೂಪದ ಚೆನ್ನಬಸವರು, ಹಿರಿಯ ಶಿವಕಳೆಯಿಂದ ಶೋಭಿಸಿ ;
ತಿರೆಯ ಕೆಲಸವ ಮುಗಿಸಿ ಪರಮನ ಕೂಡಿಕೊಂಡಿಹನು.

ವರವರೇಣ್ಯರ ಪೂರ್ಣ ಚರಿತೆಯಂ, ಧರೆಯಂ ಜನಗಳುಂ ತಿಳಿದು ಶಾಂತಿಯಂ ;
ಪರಮಂ ಕೃಪೆಯಿಂ ಪಡೆಯಲೆಂದೀ ಕಾವ್ಯರೂಪಕವು.

ಎಂದು ಕಾವ್ಯವನ್ನು ಗೀತಿಸಿ ಕೃತಕೃತ್ಯನಾಗಿದ್ದಾನೆ – ಕವಿ ! ಜನ ಶಾಂತಿಯಿಂದ ಒದುಕಲೆಂದು ಬಯಸಿ ಈ ಕೃತಿ ರೂಪಿಸಿದ್ದಾನೆ. ಜೊತೆಗೆ ಜನತೆಯು ಸತ್‌ಸಾಧನೆಗೆ ಅನುವಾಗಬಲ್ಲ ಗುಣ ಈ ಕಾವ್ಯದಲ್ಲಿರುತ್ತದೆ. ಶಿವಸ್ವರೂಪರಾದ, ಉಳಬಳ್ಳಾರಿಯ ಚೆನ್ನಬಸವರ ಪಾವನವಾಯ ಪುಣ್ಯಚರಿತ್ರೆಯು ಶ್ರವಣ ಮನನ ಮಾಡಿ ನಾಡ ಜನ ಕೃತಾರ್ಥರಾಗಲು ಅವಕಾಶ ಮಾಡಿಕೊಟ್ಟಿದು ಸಣ್ಣ ಕೆಲಸವೇನಲ್ಲ. ಅದಕ್ಕೆ ತಕ್ಕ ಅನುಭವ ಬೇಕಾಗುತ್ತದೆ. ಆ ಅನುಭವ ತಾತನವರ ಕೃಪೆಯಿಂದ ಕವಿಗೆ ಕೈಗೂಡಿದೆ. ಇಂತಹ ಚೈತನ್ಯಶಾಲಿ ವಿಭೂತಿ ಪುರುಷರ ಕಳಾತ್ಮಕ ಕಾವ್ಯಗಳನ್ನು ಇನ್ನೂ ಪರಿಣತ ಪ್ರಾನುಭೂತಿಯಿಂದ ಪ್ರಕೃಷ್ಟ ಕಾವ್ಯಗಳನ್ನು ಕನ್ನಡನುಡಿದಾಯಿಯ ಉಡಿದುಂಬುವ ಪ್ರತಿಭೆಯನ್ನು ಪ್ರತಿಭಾಸಿದ್ಧರಾದ ಪಂಡಿತಾಚಾರ್ಯರು, ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ಅನುಗ್ರಹಿಸಲೆಂದು ಹಾ ರ್ದಿ ಕ ವಾ ಗಿ ಹಾರೈಸುವವು ; ಹರಸುವೆವು.

ಬೆಂಗಳೂರು
ನಿಜಾನುಭಾವ ನಿವಾಸ
ದಿನಾಂಕ : ೬–೯–೮೯

— ಸೂರ್ಯಸಿಂಹಾಸನಾಧೀಶ್ವರ
ಡಾ|| ಶ್ರೀ. ಜ. ಚ. ನಿ. ಸನ್ನಿಧಿಯು

ಶ್ರೀ ಮ. ನಿ. ಪ್ರ. ರುದ್ರಮುನಿ ಮಹಾಸ್ವಾಮಿಗಳು
ಶ್ರೀ ಚರಣಗಿರಿ ಶಿವಯೋಗೀಶ್ವರ ಸಂಸ್ಥಾನ ಮಠ
ಹಾಲ್ವಿ-ಬಾಗವಾಡಿ-ಚೀಕಲ ಪರ್ವಿ

# ಮುಡಿಗನ್ನಡಿ

ಶ್ರೀ ಸಾ. ಮ. ಎಂದೇ ನಾಮಾಂಕಿತರಾದ ಶ್ರೀ ನಾ. ಮ. ಸಿದ್ಧರಾಮಯ್ಯನವರು ಸಾಹಿತ್ಯದಲ್ಲಿ ಅನುಭಾವದ ನಡೆನುಡಿಯಿಂದ ನಡೆದಾಡುವವರು. ಅವರು ಚಿಕ್ಕಂದಿನಿಂದಲೇ ಹಿರಿಯ ಅನುಭಾವಿ ಪಂಡಿತ ಶ್ರೀ ದೊಡ್ಡಯ್ಯಶಾಸ್ತ್ರಿಗಳವರ ಕರಸಂಜಾತರಾಗಿ ಸಾರಸ್ವತಲೋಕದಲ್ಲಿ ಅಡಿಯಿಟ್ಟರು. ಅರ್ಧ ಶತಮಾನದ ಹಿಂದೆ ಬಳ್ಳಾರಿ ಭಾಗದಲ್ಲಿ ಮಹಾ ವಿದ್ವಾಂಸರಾಗಿ ವೈಚಾರಿಕ ವಾಗ್ಮಿಗಳಾಗಿ, ಸದಾ ವಿನಯದ ಮೂರ್ತಿಗಳಾಗಿ ಬಾಳಿದವರು ಶ್ರೀ ಪಂ. ದೊಡ್ಡಯ್ಯ ಶಾಸ್ತ್ರಿಗಳು. ಅವರ ಕಾಯ ಕಾಣಲು ಕೃಶವಾದರೂ, ಆಧ್ಯಾತ್ಮದ ಅನುಭಾವದಿಂದ ಭೀಮ ಕಾಯರಾಗಿ ದೊಡ್ಡ ದೊಡ್ಡವರಿಗೆಲ್ಲ ದೊಡ್ಡಯ್ಯ ಶಾಸ್ತ್ರಿಗಳೇ ಎಂದು ಸಾರ್ಥಕ ನಾಮ ಪಡೆದಿದ್ದರು.

ಒಳಬಾಳರಿದ ವಳಬಳ್ಳಾರಿ ಶ್ರೀ ತಾತನವರಿಗೆ ಶ್ರೀ ದೊಡ್ಡಯ್ಯ ಶಾಸ್ತ್ರಿಗಳಿಗೂ ಎಲ್ಲಿಲ್ಲದ ನಂಟು, ಆಧ್ಯಾತ್ಮದಗಂಟು, ಬಿಡಿಸಲಾರದ ಸತ್ಯದ ಕಗ್ಗಂಟು! ದೇಹ ಎರಡಾಗಿದ್ದರೂ ಮನ ಒಂದಾಗಿ ಬಾಳಿದವರು. ಲೋಕ, ಲೌಕಿಕರಿಗೆ, ದಾರಿಗೆಟ್ಟವರಿಗೊಂದು ದಿಕ್ಕಾಗಿದ್ದವರು. ತಾತನವರ ಸಾನಿಧ್ಯ, ನಮ್ಮ ಇರುವಿಕೆ, ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರ ಪ್ರವಚನ, ಕೇಳುಗರನ್ನು ಕಲ್ಯಾಣದ ಅನುಭವ ಮಂಟಪಕ್ಕೆ ಕರೆದೊಯ್ಯುತ್ತಿತ್ತು! ಆ ಅನುಭವದ ಮಧುರ ಮಕರಂದವನ್ನು ಕುಡಿದು ನಾದ ದುಂಬಿಗಳಾಗಿ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಸತ್ಯದಲ್ಲಿ ನಿಷ್ಠುರರು, ಸದಾಚಾರಿಗಳೂ ಶಿವಾನುಭಾವಿಗಳೂ, ಕಾಯಕ ಜೀವಿಗಳಾಗಿ ಬಾಳುವುದಲ್ಲದೆ 14–15ನೇ ಶ ತ ಮಾ ನ ದ ಹಿರಿಯ ಮಹಾಕವಿಗಳ ಸಾಲಿನಲ್ಲಿ ಪಾದಾರ್ಪಣೆ ಮಾಡಿ ಧನ್ಯರಾಗಿದ್ದಾರೆ. ಶ್ರೀ ತಾತನವರ ನಿಜ ಜೀವನವನ್ನು ಕಾವ್ಯ ಕನ್ನಿಕೆಯಲ್ಲಿ ಅಲಂಕರಿಸಿ ವಾಚಕರ ಕೈಗೆ ಕೊಟ್ಟಿರುವುದೇ ಇದಕ್ಕೆ ಸಾಕ್ಷಿ!

ಇತ್ತೀಚಿನ ಮಹಾಪುರುಷರಲ್ಲಿ ಒಳಬಳ್ಳಾರಿ ಶ್ರೀ ತಾತನವರು ಒಬ್ಬರು! ಅವರನ್ನು ನಾವು ಬಹಳ ಹತ್ತಿರದಿಂದ ನೋಡಿದ್ದೇವೆ. ಪರಗುಣ ಪರಮಾಣು ವನ್ನು ಪರ್ವತೋಪಾದಿಯಲ್ಲಿ ಗ್ರಹಿಸುತ್ತಿದ್ದರು. ಅವರ ಹೃದಯ-ವೈಶಾಲ್ಯದಲ್ಲಿ ದೋಷಕ್ಕೆ ಎಳ್ಳಷ್ಟೂ ಸ್ಥಾನವನ್ನು ಕೊಡುತ್ತಿರಲಿಲ್ಲ. ಯಾರು ಏನು ಕೇಳಿದರೂ

ಶಿವನಿದ್ದಾನೆ, ಶಿವ–ಬಸವ ಕಾಯುತ್ತಾನೆ. ಹೋಗ್ರಪಾ, ಅಂತ ಅಪ್ಪಣೆ ಮಾಡು ತ್ತಿದ್ದರು. ಏನಾದರೂ ಪೂಜಾ, ಬಿನ್ನಹ, ಒಳ್ಳೆಯ ಕಾರ್ಯಕ್ಕೆ ನಮ್ಮನ್ನೇ ಬೊಟ್ಟು ಮಾಡಿ ತೋರಿಸಿ ಅವರ ಒಪ್ಪಿಗೆ ಪಡೀರಪ್ಪ, ಅಂತ ತಿಳಿಸುತ್ತಿದ್ದರು. ಇಲಕಲ್ಲೂ, ನೀರಡಗುಂಭ, ಹೊಸಪೇಟೆ ಮಹಾಸಂಸ್ಥಾನ ಮಠಗಳಿಗೆ ಅಧಿಕಾರ, ಪಟ್ಟಾಭಿಷೇಕ ಕಾರ್ಯಗಳಿಗೆ ಯಾರ ಮಾತಿಗೂ ಒಳಗಾಗದೆ ನಮ್ಮನ್ನೇ ಒಪ್ಪಿಸಿ ಆ ಕಾರ್ಯಕ್ಕೆ ಮಂಗಲವನ್ನುಂಟು ಮಾಡುತ್ತಿದ್ದರು. ತಮ್ಮ ಪೀಠದ ಉತ್ತರಾಧಿ ಕಾರ ಮರಿಗಳನ್ನು ಆರಿಸುವ ಮೊದಲು ಹೊಣೆಗಾರಿಕೆಯನ್ನು ನಮ್ಮ ಮೇಲೆ ವಹಿಸಿ ಕೊಟ್ಟಿದ್ದರು. ಹಲವು ಮಹತ್ತರ ಕಾರ್ಯಕ್ರಮಗಳೆಲ್ಲ ನಮ್ಮನ್ನೆ ಮುಂದಾ ಳಿಸಿ ನೇಮಿಸಿ ನಿಜ ಜಂಗಮ ಸ್ವರೂಪಾನುಸಂಧಾನದಲ್ಲಿ ಮಗ್ನರಾಗಿರಿಸುತ್ತಿದ್ದರು.

ಈ ಮಹಾಪುರುಷರ ಜೀವನ ಜ್ಯೋತಿಯನ್ನು ಕಾವ್ಯ ಪ್ರಣತೆಯಲ್ಲಿ ಬೆಳಗಿ ಸಲು ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಮಾಡಿದ ಮಹಾಪ್ರಯತ್ನವು ಸಾರ್ಥಕಗೊಳಿಸಿ ಯಶಸ್ವಿಗಳಾಗಿದ್ದಾರೆ. ನಾವು ಕಣ್ಣಾರೆ ಕಂಡ ಮಹಿಮರ ಚರಿತ್ರ ಯನ್ನು ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಬಹು ಸುಂದರವಾಗಿ ನಿರೂಪಿಸಿದ್ದಾರೆ. ಛಂದೋಬದ್ಧದ ಲಲಿತ ಶೈಲಿಯಲ್ಲಿ ಸುಶ್ರಾವ್ಯ ಕಾವ್ಯವಾಗಿ ಹೊರಹೊಮ್ಮಿ ರೂಪಕಾಲಂಕಾರದಿಂದ ಚಿತ್ರಣಗೊಂಡು, ಹಲವು ಕಡೆಗೆ ಅನೇಕ ಉತ್ಪ್ರೇಕ್ಷಗಳೂ ಸಹಜವಾಗಿ ಓದುಗರನ್ನು ಬೆರಗುಗೊಳಿಸುತ್ತವೆ. ಶ್ರೀ ಪಂಡಿತ ನಾ. ಮ. ದೊಡ್ಡಯ್ಯ ಶಾಸ್ತ್ರಿಗಳವರ ಸಹಜ ಇರುವಿಕೆಯ ಚಲುವು ಈ ಕೆಳಗಿನ ಪದ್ಯದಲ್ಲಿ ತನ್ನಿಂದ ತಾನೇ ಉದ್ಭವವಾಗಿದೆ. ಉದಾ :—

ಸರಳತೆಗೆ ಸಾಕಾರ ರೂಪವ
ಧರಿಸಿ ಜಗದೊಳು ಬಂದ ತೆರನಲಿ
ಅರಿವು ಆಚಾರದಲಿ ಜೀವನ ಶಿವಮಯದಿ ತುಂಬೀ
ಗುರು ಘನತೆ ನುಡಿಗಳೆಲ್ಲವು
ಗುರುಲಿಂಗ ಜಂಗಮರು ಮೆಚ್ಚುವ
ಶರಣ ಗುಣಮಣಿ ತತ್ವ ಚಿಂತಾಂತ್ಮವಾಗಿರುತಾ ॥

(ಪುಟ :—೬೬ :—ಪದ್ಯ ೩)

ಸರಸ್ವತಿ ಶಬ್ದ ಭಾಂಡಾರವು ಇವರ ಲೇಖನಿಯಲ್ಲಿ ಹರಿದುಬಂದಿದೆ. ಸರ್ವರೂ ಸುಲಭವಾಗಿ ಗ್ರಹಿಸಿ ಆನಂದಿಸುವ ಭಾಮಿನಿ ಷಟ್ಪದಿಯ ಕಾವ್ಯವಾಗಿ ಮೂಡಿಬಂದಿದ್ದರೂ, ಅಲ್ಲಲ್ಲಿ ಕೆಲವು ಪದ್ಯಗಳು ಉಕ್ಕಿನ ಕಡಲೆಯಂತೆ ಆಲೋಚನೆಗೆ ನಿಲುಕುವ ಸ್ಥಿತಿಯಲ್ಲಿಲ್ಲದೆ ಕಾವ್ಯಕ್ಕೆ ಮೆರಗೂ, ಶಬ್ದಕ್ಕೆ ಸೊಬಗೂ ತಂದಿವೆ. ಶಿವಕವಿ ಡಾ॥ ಸಿದ್ಧಯ್ಯ ಪುರಾಣಿಕರಂತಹ ಮಹಾ ಮೇಧಾವಿಗಳು ಇವರ ಕಾವ್ಯಕ್ಕೆ ಮುನ್ನುಡಿಯ ಸುವರ್ಣ ಮುಕುಟವಿಡುವುದರ ಜೊತೆಗೆ ಸುಗಂಧ ಬಂದಂತಾಗಿದೆ.

ಕಾವ್ಯದ ಪ್ರೌಢಿಮೆಯನ್ನು, ಶಬ್ದ ಸಂಪತ್ತಿನ ಮಾಧುರ್ಯವನ್ನು ಕವಿಗಳು ತಮ್ಮ ಶ್ರೀ ಚೆನ್ನಬಸವಲೀಲಾ ಕಾವ್ಯದಲ್ಲಿ ಲೀಲಾಜಾಲವಾಗಿ ನೈಪುಣ್ಯತೆಯಿಂದ ನಿರೂಪಿಸಿದ್ದಾರೆ.

ಉದಾ :

ಅಭಿಜಾತ ಪುತ್ರನನರ್ಪಿಸಲು
ಅಭಿರಾಮ ಶಿವತೇಜದಲಿಯಿರು
ವಭಿದಾನದಿಂ ಕೀರ್ತಿಯನು ಪಡೆದ ವನಗಲಲಿರದೇ
ಅಭಿಘಾತವಾದ ಕಳತ್ರಕರು
ಳಭಿಭವಿಸುತಲಿ ಬಸವಯ್ಯಾತಾ
ನಭಿ ಮಾನತೆಗೆ ಕಿವಿಗೊಟ್ಟು ಸತಿ ಮನವೊಲಿಸಲೆಳಸೀ
(ಪುಟ : ೨೬, ಪದ್ಯ-೪)

ತಮ್ಮ ಗುರು ಶ್ರೀ ರುದ್ರಮುನಿಗಳು
ಒಮ್ಮೆ ನೈಜಾಂ ಪ್ರಾಂತದೂರಿನ
ಇಮ್ಮನದ ಶ್ರೀಮಂತನೋರ್ವನ ಬಿನ್ನಹಕೆ ಒಪ್ಪೀ
ಕೆಮ್ಮನುಪಚಾರವನು ಮಾಡುತ
ಗುಮ್ಮಡಿಯ ಗೃಹಗದೊಳಗೆ ಶ್ರೀಗಳು
ಸಮ್ಮತಿಸಿ ಪೂಜೆಯನು ಮಾಡುವ ಸಮಯ ನೋಡುತಲಿ
(ಪುಟ : ೧೮೪ :—ಪದ್ಯ ೧೪೮)

ಸಹೃದಯ ವಾಚಕ ಮಹಾಶಯರು ಪರಿಶ್ರಮಪಟ್ಟು ಪ್ರಕಟಿಸಿದ ಮಹಾತ್ಮರ ಚರಿತ್ರೆಯನ್ನು ಮನನ ಮಾಡಿದಲ್ಲಿ ಕವಿಯ ಕರ್ತೃಶಕ್ತಿಯು ಸಾರ್ಥಕವಾಗುವುದಲ್ಲದೆ, ಹೇಳುವವರ ಕೇಳುವವರ ಜೀವನವೂ ಸಾರ್ಥಕವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಕವಿ ಶ್ರೀ ಸಾ. ಮ. ಸಿದ್ಧರಾಮಯ್ಯನವರಿಂದ ಇನ್ನು ಇಂತಹ ಅನೇಕ ಮಹಾತ್ಮರ ಚರಿತ್ರೆಗಳು ಮೂಡಿಬಂದು ನಾಡಿಗೆ ಮಹದುಪಕಾರವಾಗುವುದೆಂದು ಹಾರೈಸುತ್ತೇವೆ.

ಹಾಲ್ವಿ–ಬಾಗವಾಡಿ —ಶ್ರೀ. ಮ. ನಿ. ಪ್ರ. ರುದ್ರಮುನಿಮಹಾಸ್ವಾಮಿಗಳು
ಚೀಕಲಪರಿ ಶ್ರೀ ಚರಣಗಿರಿ ಶಿವಯೋಗೀಶ್ವರ
ಆದವಾನಿ ತಾ ॥ (ಕರ್ನೂಲ ಜಿಲ್ಲಾ) ಸಂಸ್ಥಾನ ಮಠ
ದಿನಾಂಕ ೨೧-೭-೮೯

ಡಾ|| ಎಸ್.ಎಂ. ವೃಷಭೇಂದ್ರ ಸ್ವಾಮಿ, ಎಂ.ಎ., ಪಿಎಚ್‌ಡಿ.,
ಕನ್ನಡ ಪ್ರಾಧ್ಯಾಪಕರು (ನಿ.)
ಕರ್ನಾಟಕ ವಿಶ್ವವಿದ್ಯಾಲಯ

'ಶಿವಪ್ರಸಾದ'
ಕಲ್ಯಾಣ ನಗರ
ಧಾರವಾಡ

# ನಲ್ನುಡಿ

**ಪುರಾಣಕ್ಕೆ ಪ್ರಣಾಮ, ಪುರಾಣ ಪುರುಷಗೆ ಪ್ರಣಾಮ**

ಶಿವಯೋಗಿಗಳ ಹಾಗೂ ಶಿವಶರಣರ ಪರಂಪರೆ ನಿರಂತರವಾದುದು. ನಿತ್ಯ ಮಹಿಮಾಶೀಲವಾದುದು. ನಿತ್ಯವೂ ಜಗದೋದ್ಧಾರ ಶೀಲವಾದುದು. ಶ್ರೀ ರೇಣುಕಾದಿ ಜಗದ್ಗುರುಗಳ ಬಸವಾಲ್ಲಮಾದಿ ಶಿವಶರಣರ ಜೀವನ ಕಥನವೆಲ್ಲ ಜನತೆಯ ಉದ್ಧಾರ, ಶಿವಯೋಗ ಸಾಧನೆ, ಧರ್ಮ, ತತ್ವವಿಚಾರ, ಮಠಮಾನ್ಯ ಸ್ಥಾಪನೆ, ಶಿವಭಕ್ತಿಯ ವಿಸ್ತರಣೆ, ಲೋಕಲೀಲೆಗಳ ಮೆರವಣಿಗೆಯ ಪ್ರತೀಕವೇ ಆಗಿದೆ. ಶತಮಾನಗಳುದ್ದಕ್ಕೂ, ನಿರಂತರವಾಗಿ ಬೆಳೆದುಬಂದ ಈ ಶರಣಲೀಲೆಯು, ಶರಣ ಸಂತತಿಯ ಮಹಿಮೆ-ಪವಾಡ-ಪುಣ್ಯ ಕಾರ್ಯಗಳ ಚಿರಂತನ ದಾಖಲೆಗಳಾಗಿವೆ. ವೀರಶೈವ ಪುರಾಣ-ಲೀಲೆ-ಕಾವ್ಯ ಸಮುದಾಯ, ಇಪ್ಪತ್ತನೆಯ ಶತಮಾನವೂ ಹಲವಾರು ಪುಣ್ಯಶರಣರ ಆಗಮನದಿಂದ ಅವರ ಕಾರ್ಯ ಚಟುವಟಿಕೆಗಳಿಂದ ಘನತೆಯನ್ನು ಪಡೆದುದಾಗಿದೆ. ಅಂಥ ಮಹಿಮಾಶಾಲಿಗಳ ಪುರಾಣಗಳು ರಚನೆಯಾಗುತ್ತಲೇ ನಡೆದಿವೆ ; ಜನಮನದಲ್ಲಿ ಭಕ್ತಿ, ಸೇವೆ, ನಿಷ್ಠೆ, ನೀತಿ-ತ್ಯಾಗ ಗುಣಗಳನ್ನು ಅರಳಿಸುವ ಕಾರ್ಯವನ್ನು ಸಾಧಿಸುತ್ತಿವೆ. ಈ ಸಾಲಿನಲ್ಲಿ ಒಂದು ಒಳ್ಳೆಯ ದಾಖಲೆ, ಒಳ (ಹೊಳೆ) ಬಳ್ಳಾರಿಯ ತಾತನವರೆಂದೇ ಪ್ರಸಿದ್ಧರಾಗಿದ್ದ ಶ್ರೀ. ಮ. ನಿ. ಪ್ರ. ಚನ್ನಬಸವ ಮಹಾಸ್ವಾಮಿಗಳನ್ನು ಕುರಿತು ಈ ಶ್ರೀ ಚನ್ನಬಸವ ಲೀಲಾಕಾವ್ಯ. ಈ ಪುರಾಣ ಪುಣ್ಯಪುರುಷರಿಗೆ, ಅವರ ಲೀಲಾ ಕಥನವಾದ ಕಾವ್ಯಕ್ಕೆ ಮೊದಲು ಪ್ರಣಾಮ. ಶಿವಶರಣ ಸಂತತಿಗೆ ಮತ್ತೆ ಪ್ರಣಾಮ. ಭಕ್ತರ ಪುಣ್ಯಕ್ಕೆ ಮತ್ತೊಮ್ಮೆ ಪ್ರಣಾಮ.

ನನ್ನ ಪ್ರೀತಿಯ ಆತ್ಮೀಯರೂ, ಮಿತ್ರರೂ ಆಗಿರುವ ಶರಣ ಶಿವಕವಿ ಶ್ರೀ ಸಾ. ಮ. ಸಿದ್ಧರಾಮಯ್ಯನವರ ಭಕ್ತಿ, ಭಾವ ತುಂಬಿ, ಶರಣ ತತ್ವ, ಆಚರಣೆ ಮಹಿಮೆಯ ಸಂಗತಿ ತುಂಬಿ ಶ್ರೀ ತಾತನವರ ಲೀಲಾ ವಿಲಾಸವನ್ನು ಕಂಡು ಅನುಭವ ತುಂಬಿ ಈ ಚನ್ನಬಸವ ಲೀಲಾಕಾವ್ಯ ಪುರಾಣವನ್ನು ರಚಿಸಿರುವುದು ಒಂದು ಪುಣ್ಯ ಕಾರ್ಯ. ಶರಣ ಸಾಹಿತ್ಯದ ಅಭ್ಯಾಸಿಗಳಾಗಿ, ವಚನ, ಪುರಾಣ, ಕಾವ್ಯಗಳ ಅನುಸಂಧಾನ ನಿಷ್ಠರಾಗಿ, ಅನೇಕ ಕೃತಿಗಳನ್ನು, ಕಾವ್ಯಗಳನ್ನು ಬರೆದು ಪಳಗಿದ ಹಸ್ತ

ದಿಂದ ಈ ಪುರಾಣವನ್ನು ರಚಿಸಿರುವ ಶ್ರೀ ನಾ. ಮ. ಸಿದ್ಧರಾಮಯ್ಯನವರು ಅಭಿನಂದನಾರ್ಹರು. ನಮ್ಮ ಕಾಲದಲ್ಲಿ ಮಹಿಮರೆಂದು ಪ್ರಸಿದ್ಧರಾಗಿದ್ದ ಪೂಜ್ಯ ಶ್ರೀ ಒಳಬಳ್ಳಾರಿ ಶ್ರೀ ತಾತನವರ ಜೀವನ ಕಥನ, ಮಹಿಮಾ ವಿಲಾಸ, ಮಠಮಾನ್ಯ ಸ್ಥಾಪನೆ, ಹಾಗೂ ಸಮಾಜೋದ್ಧಾರ ಕಾರ್ಯಗಳ ಸವಿವರವಾದ ದಾಖಲೆ ಈ ಪುರಾಣ. ವೀರಶೈವ ಲೀಲಾಪುರಾಣ ಕಾವ್ಯಗಳಲ್ಲಿ ಇದೊಂದು ಇತ್ತೀಚಿನ ಸಾಧನೆ, ದಾಖಲೆ. ಈ ಕಾವ್ಯ ರಚನೆಗೆ, ಪ್ರಕಟಣೆಗೆ ನೆರವಾದ ಎಲ್ಲರ ಭಕ್ತಿ ಸೇವೆಗೂ ಪ್ರಣಾಮ.

ಪುಣ್ಯಜೀವಿಗಳು ಹುಟ್ಟುವಾಗ ಅಪ್ರಸಿದ್ಧರೆಂಬಂತೆ ಮೂಡಿ ತಮ್ಮ ಸಾಧನೆಯ ಅಂತ್ಯದಲ್ಲಿ ಸುಪ್ರಸಿದ್ಧರಾಗಿ ಬೆಳಗುವುದು ಒಂದು ಸಹಜಗತಿ. ಮೂಲದಲ್ಲಿ ಕಿರುಶ್ರೋತವಾಗಿ ಹೊರಟ ತುಂಗಭದ್ರೆ ಮುಂದೆ ಸಾಗಿ, ಸಾಗಿ, ಹಳ್ಳ, ಹೊಳೆ, ನದಿಯಾಗಿ ನಾಡನ್ನು ಆವರಿಸಿ, ಉದ್ಧರಿಸುವಂತೆ, ಪುಣ್ಯಶರಣರ ಬದುಕು, ಅಲ್ಪದಿಂದ ಮಹತ್‌ವರೆಗೆ ನಡೆದು, ಜನಮನದಲ್ಲಿ ನೀತಿ, ಭಕ್ತಿ, ಸಂಸ್ಕೃತಿ, ಸಂತೃಪ್ತಿ ತುಂಬಿ, ತುಂಬು ಜೀವನದ ತುಂಬು ನದಿಯಾಗಿ ಪ್ರವಹಿಸುತ್ತದೆ. ಅಂಥವರಲ್ಲಿ ಒಬ್ಬರಾದ ಶ್ರೀ ಒಳಬಳ್ಳಾರಿ ತಾತನವರು ನಮ್ಮ ಕಾಲದ ಮಹಿಮಾ ಜೀವಿಗಳಲ್ಲಿ ಒಬ್ಬರು. ಲಿಂಗನಿಷ್ಠೆ, ಜಂಗಮ ಅಂದರೆ ಜನತಾ ಜಂಗಮ ದಾಸೋಹ, ಶಿವಭಕ್ತಿ ಲೀಲಾವಿಲಾಸಗಳನ್ನು ಮೆರೆದು ಪುರಾಣ ಪುರುಷರಾಗಿರುವರು. ಶರಣ ಪರಂಪರೆಯ ಇತ್ತೀಚಿನ ಕುಡಿಯಾಗಿರುವರು. ಅವರ ದಿವ್ಯ ಚರಣಗಳಿಗೂ ಪ್ರಣಾಮ.

ಶ್ರೀ ಚನ್ನಬಸವ ಲೀಲಾಕಾವ್ಯ, ಹದಿನಾರು ಸಂಧಿಗಳ, ಒಂದು ಸಾವಿರದ ಎಂಟು ಭಾಮಿನಿ ಷಟ್ಪದಿಗಳ-ವಿಸ್ತಾರ ಪಡೆದಿದೆ. ಕ್ರಿ. ಶ. ೧೯೦೩ರಲ್ಲಿ ರಾಯಚೂರು ಜಿಲ್ಲೆಯ ಮಾನ್ವಿ ತಾಲೂಕಿನ "ಪಾಮನಕೆಲ್ಲೂರ" ಗ್ರಾಮದ ಶಿವಭಕ್ತಿ ದಂಪತಿಗಳಾದ ಶ್ರೀ ಬಸವಯ್ಯ ಮತ್ತು ಶ್ರೀಮತಿ ವೀರಮ್ಮನವರ ಮಗನಾಗಿ ಜನಿಸಿ ಬಾಲ್ಯದಲ್ಲಿಯೇ ಮಹತ್ವ ಪವಾಡಗಳಿಂದ ಮೆರೆದು ಕನಕಗಿರಿ ವಿರಕ್ತ ಮಠದ ಶ್ರೀ ಚನ್ನಮಲ್ಲ ಮಹಾಸ್ವಾಮಿಗಳಲ್ಲಿ ಶಿಕ್ಷಣ-ಅನುಗ್ರಹ ಪಡೆದು, ಒಳಬಳ್ಳಾರಿ ಮಠದ ಅಧಿಪತಿಗಳಾಗಿ ಬಂದ ಶ್ರೀ ಶ್ರೀಗಳು ಲಿಂಗಾನುಷ್ಠಾನ, ಭಕ್ತರ ಸೇವಾನುಷ್ಠಾನ, ಧರ್ಮತತ್ವ ಪ್ರಸಾರಾನುಷ್ಠಾನಕ್ಕೆ ತಮ್ಮನ್ನು ವಿಶಾಸಲಾಗಿರಿಸಿಕೊಂಡು, ಬಾಳು ಬೆಳಗಿಸಿದರು ; ಜನಮನವನ್ನು ಹದಗೊಳಿಸಿದರು ; ಶಾಖಾ ಮಠಗಳ ವ್ಯವಸ್ಥೆ ಮಾಡಿದರು. ಹಂಪಿ, ಶ್ರೀಶೈಲ ಮುಂತಾದ ಪುಣ್ಯಕ್ಷೇತ್ರಗಳನ್ನು, ನಮ್ಮ ಕಾಲದ ಮಹಿಮಾ ಪುರುಷರಾದ ಧಾರವಾಡದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳೇ ಮೊದಲಾಗಿ ಅನೇಕ ಹರ-ಗುರು ಚರ ಮೂರ್ತಿಗಳ ದರ್ಶನವನ್ನೂ ಪಡೆದು, ಶಿವಭಕ್ತಿ ಶಕ್ತಿಗಳ ಆಗರವಾದರು ಶ್ರೀ ತಾತನವರು. ಅವರ ನಿಜ ಚಿತ್ರವನ್ನು,

ಬರ್ರಿ ಬರ್ರೆಪ ಬರ್ರಿಯೆನ್ನುತ
ಬರ್ರಿ ಸನಿಹಕೆ ಬಂದು ಕುಳ್ಳಿರಿ
ಬರ್ರಿ ತಾಯಾತೆಯೆಂದು ಕರೆಯುವ ತಾತ ಕರುಣೆಯಲೀ
ತರ್ರಿ ತರ್ರೆಪ ಫಲ ಪ್ರಸಾದವ
ಬರ್ರಿ ತಗಳರಪ ತಗಳಿರೆನುತ
ಕೊರ್ರಿಯೆನ್ನುತ ಕೊಟ್ಟು ಹರಸಿದ ನಮ್ಮ ಈ ತಾತಾ

(ಸಂಧಿ ೧೫, ಪದ್ಯ ೧೧)

ಎಂಬ ಪದ್ಯದಲ್ಲಿ ಚನ್ನಾಗಿ ನೀಡಿರುವರು ಶ್ರೀ ಶಿವಕವಿ ನಾ. ಮು. ಸಿದ್ಧ ರಾಮಯ್ಯನವರು. ಪೂಜ್ಯರ ಬದುಕಿನ ಮಂತ್ರವೇ ಈ "ಬರ್ರಿ–ತರ್ರಿ–ಕೊರ್ರಿ" ಎಂಬುದು ಅತ್ಯಂತ ಅರ್ಥಗರ್ಭಿತವಾದುದು. ಸಮಾಜದ ಸರ್ವರೂ ನನ್ನ ಹತ್ತಿರ ಬರ್ರಿ, ಬರ್ರಿ ಎಂದೂ, ಬರುವಾಗ ದಾಸೋಹ ಸೇವೆಗೆ, ಭಕ್ತಿ ಫಲಗಳನ್ನು ತರ್ರಿ, ತರ್ರಿ ಎಂದೂ ಅದರಿಂದ ಸಮಾಜಸೇವೆ–ಶಿವಶರಣರ ಭಕ್ತಿ ಪ್ರಸಾದವನ್ನು ಕೊರ್ರಿ, ಕೊರ್ರಿ, ಎಂದರೆ ಕೊಳ್ಳಿರಿ, ಕೊಳ್ಳಿರಿ. ಎಂದು ಆಶೀರ್ವದಿಸುವ ಪುಣ್ಯ ಪುರುಷರ ದಿವ್ಯ ಚಿತ್ರ ಮೂಡಿ ನಿಲ್ಲುತ್ತದೆ. ಈ ಲೀಲಾ ಕಾವ್ಯದುದ್ದಕ್ಕೂ ಈ "ಬರ್ರಿ–ತರ್ರಿ–ಕೊರ್ರಿಗಳ ವಿವರ ಕಾಣಸಿಗುತ್ತವೆ. ಹಾಗೆಯೇ ಮಕ್ಕಳ ಫಲ ನೀಡುವ, ರೋಗಗಳನ್ನು ವಾಸಿ ಮಾಡುವ, ವೈರಗಳನ್ನು ಶಾಂತಗೊಳಿಸುವ, ಜನ ಸಮೂಹ ದಂತೆಯೇ ಮಠದ ಗೋವುಗಳನ್ನು ಪ್ರೀತಿಸುವ, ಧನಿಕರಂತೆ, ಬಡವರನ್ನು ಉದ್ಧರಿಸುವ ಶಿವಶರಣನ ಸಹಜಕ್ರಿಯೆ, ಭಕ್ತಿಭಾವಕ್ಕೆ–ಪವಾಡಗಳೆಂಬಂತೆ ತೋರುವ ಲೀಲಾವಿಲಾಸ ಈ ಕಾವ್ಯದಲ್ಲಿ ವಿವರವಾಗಿ ಮೂಡಿಬಂದಿದೆ. ಮಣ್ಣಿನ ಮಾನವ ನನ್ನು, ದೇವಮಾನವನನ್ನಾಗಿಸುವ ಶರಣ ಮಹಿಮೆಗೂ ಮತ್ತೆ ಮತ್ತೆ ಪ್ರಣಾಮ,

ಒಳಬಳ್ಳಾರಿ ಶ್ರೀ ತಾತನವರು, ನಮ್ಮ ಕಾಲದ ಮತ್ತೊಬ್ಬ ಸಮಾಜೋ-ಧಾರ್ಮಿಕ ದಿವ್ಯಶಕ್ತಿ ಶ್ರೀ ಕೊಟ್ಟೂರು ಮಠದ ಶ್ರೀ ಜಗದ್ಗುರು ಸಂಗನ ಬಸವ ಮಹಾಸ್ವಾಮಿಗಳಿಗೆ ನೀಡಿದ (ಕರುಣಿಸಿದ) ದಿವ್ಯಾನುಗ್ರಹ, ಹಾಗೆಯೇ ಒಳ ಬಳ್ಳಾರಿಯ ಶ್ರೀ ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳೂ, ನದೀಚಾಗಿ ಮಠದ ಶ್ರೀ ಮ. ನಿ. ಪ್ರ. ತೋಂಟದಾರ್ಯ ಮಹಾಸ್ವಾಮಿಗಳೂ ಮತ್ತು ಅಡವಿ-ಅಮರೇಶ್ವರ ಸುಕ್ಷೇತ್ರದ ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು ಮುಂತಾದ ದೇಶಿಕವರೇಣ್ಯರಿಗೆ ಜಂಗಮ ದೀಕ್ಷೆ ನೀಡಿ ಸಮಾಜ ಸೇವೆಗೆ ಅಣಿ ಮಾಡುವ, ಅನುಗ್ರಹ ನೀಡಿರುವವರು ಶ್ರೀ ತಾತನವರು. ತಮ್ಮ ಮಠದ ಶಿವಭಕ್ತಿ, ಆಸ್ಥಾನ ವಿದ್ವಾಂಸರಾಗಿ ಬೆಳೆದುಬಂದಿದ್ದ ಪಂಡಿತ ಶ್ರೀ ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು ಅಭಿಪ್ರಾಯಪಟ್ಟಂತೆ, ಒಳಬಳ್ಳಾರಿಯು "ಮಹಾದಾಸೋಹ ಮಂಟಪದ"

ನಿರ್ಮಾಣ ಹಾಗೂ ಅಲ್ಲಿ ನಿರಂತರವಾಗಿ ನಡೆಯುವ ಭಕ್ತಿ ದಾಸೋಹ, ಜ್ಞಾನ ದಾಸೋಹ, ಶ್ರೀ ತಾತನವರ ಮಹತ್ವದ ಸಾಧನೆ. ಈ ವೈಭವದ ಸವಿವರವಾದ ವರದಿ ಹಾಗೂ ಶ್ರೀ ಮಠಕ್ಕೆ ಸೇವೆ ಸಲ್ಲಿಸಿದ ಭಕ್ತ-ಮಹನೀಯರ, ದರ್ಶನಾಶೀರ್ವಾದ ನೀಡಿದ ಹರಗುರು ಚರ ಮೂರ್ತಿಗಳ ವರದಿಯೇ ಈ ಕಾವ್ಯದಲ್ಲಿ ದಾಖಲಾಗಿದೆ. ಮಹಿಮಾನ್ವಿತರ, ಕಾಲಾನಂತರ, ನಿಜಜೀವನದ ಸಂಗತಿಗಳನ್ನೆಲ್ಲಾ ಇತಿಹಾಸದಲ್ಲಿ ಮರೆತುಹೋಗಿ ಅವರ ಪವಾಡಗಳೇ ಪ್ರಚುರವಾಗುವ ಪರಿಸ್ಥಿತಿ ಒದಗನಂತೆ ಶ್ರೀ ಶ್ರೀಗಳ ನಿಜ ಜೀವನದ ಘಟನೆಗಳನ್ನು, ಭಕ್ತ ಮಹನೀಯರ ಹೆಸರು ಕ್ರಿಯೆ ಗಳನ್ನು ಈ ಪುರಾಣದಲ್ಲಿ ದಾಖಲಿಸಿರುವುದು ಒಂದು ವಿನೂತನ ಪರಂಪರೆ, ಸತ್ಯ ಸಂಗತಿಗಳ ಸತ್ಯ ದಾಖಲೆ. ಶ್ರೀ ತಾತನಂಥ ಪುಣ್ಯಾತ್ಮರ ಲೀಲಾ ಕಥನದಲ್ಲಿ ಈ ಭಕ್ತರ ಕಥನವೂ ಪುರಾಣಯೋಗ್ಯವಾದುದು ಗಮನಾರ್ಹ ಸಂಗತಿ. ಆ ಎಲ್ಲ 'ಲೀಲೆ'ಗಳಿಗೂ ಭಕ್ತರ' ಕಥನ'ಕ್ಕೂ ಪ್ರಣಾಮ.

ಶರಣರ ಮಹಿಮೆ ಮರಣದಲ್ಲಿ, ಮರಣಾನಂತರ ಎಂಬುದು ಪರಂಪರೆಯ ಮಾತು. ಶಿವಶರಣರು ಬದುಕಿನುದ್ದಕ್ಕೂ ಮಹಿಮಾಶಾಲಿಗಳು ಅವರಿಗೆ ಮರಣ ವಿಲ್ಲವಾಗಿ, ನಂತರವೂ ಮಹಿಮಾಶಾಲಿಗಳು, ಅವರು ಮೆಟ್ಟಿದ ಧರೆ ಪಾವನ ಪುಣ್ಯ ಕ್ಷೇತ್ರವಾಗುತ್ತದೆ. ಶ್ರೀ ತಾತನವರು ಲಿಂಗೈಕ್ಯರಾದ ಪುಣ್ಯ ದಿನದ ಘಟನೆಗಳೂ ಶಿವಯೋಗ ಸಮಾಧಿಯ ವಿವರಗಳೂ, ಆ ಪುಣ್ಯ ಕ್ಷಣದಲ್ಲಿ ಉಪಸ್ಥಿತರಿದ್ದ ಮಹಿಮಾ ನ್ವಿತರ ಸಂಗತಿಗಳು ಜನಮನದಲ್ಲಿ, ಕಿರಿಯ ಸ್ವಾಮಿಗಳಲ್ಲಿ, ಭಕ್ತರಲ್ಲಿ ಮೂಡಿದ ಖಿನ್ನ ಭಾವ, ಅಗಲುವಿಕೆಯ ಅಳಲು, ಅವನ್ನೆಲ್ಲ ಮೀರಿ ನಿಲ್ಲುವ ಶ್ರೀ ತಾತನವರ ಜಯಘೋಷ ಈ ಕಾವ್ಯದಲ್ಲಿ ಚಿತ್ರಿತವಾಗಿದೆ. ಸ್ಪಷ್ಟ ವರ್ಣನೆ, ಭಾವಪೂರ್ಣ ವಾದ ಚಿತ್ರಣದ ಆವಶ್ಯಕತೆ ಪೂರೈಸಿರುವ ಪದ್ಯಗಳು ಧಾರಾಳವಾಗಿ ಈ ಕಾವ್ಯದಲ್ಲಿ ಬಂದಿವೆ.

ಪರಮ ತಾತನ ನಿತ್ಯ ಲೀಲೆಯ
ಸರಳ ಭಾಮಿನಿಯಲ್ಲಿ ರಚಿಸಿಯೆ
ವರತಪೋಧನ ಚನ್ನಬಸವರ ಕೃಪೆಯೊಳಗೆ ಬೆಳಗೀ
ಸುರುಚಿರದ ಮಹಾಕಾವ್ಯ ಬರೆದಿಹ
ಅರಿವು ಗುರುವೆನಿಸುತಲಿ ಜಗದಲಿ
ಶರಣ ಕವಿ ಶ್ರೀ ಸಿದ್ಧರಾಮಯ್ಯಂಗೆ ಕೊಡು ಮುಕುತೀ.

(ಸಂಧಿ ೧೬, ಪದ್ಯ ೭೫)

ಎಂಬ ವಿನಯದ ನುಡಿಗಳಲ್ಲಿ, ಕವಿಯ ಭಕ್ತಿ ನಿಷ್ಠೆ, ಕಾವ್ಯೋದ್ಯೋಗ ಸಾಹಸ ಚಿತ್ರಿತವಾಗಿದೆ. ಕಾವ್ಯ ಪುರುಷನ ಮಹಿಮೆಯೇ ಮುಖ್ಯ, ಕವಿಯ ಕಾವ್ಯರಚನೆ ಆದರ್ಶ-ಪೋಷಕ. ಕವಿ ಪ್ರತಿಭೆಯ ಸತ್ಯ-ಕಾವ್ಯಗುಣದ ಶಿವ ಸುಂದರತೆಯಿಂದ,

ವೀರಶೈವರ ತತ್ವಸಿದ್ಧಾಂತ ಸಾಹಿತ್ಯವನ್ನು ಪ್ರತಿಬಿಂಬಿಸುವ ಈ ಶಿವಕವಿ-ಶರಣ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರ ಈ ಶ್ರೀ ಚನ್ನಬಸವಲೀಲಾ ಕಾವ್ಯ ಸಾಹಸಕ್ಕೆ ಪ್ರಣಾಮ.

ಎಲ್ಲ ಮಾನವ ಜನಾಂಗಕ್ಕೆ ಶ್ರೀ ತಾತನವರ ಕಾವ್ಯದ ರಸಮಾಧುರ್ಯದ ಪ್ರಸಾದ ಲಭ್ಯವಾಗುವಂತಿದ್ದರೂ, ಜನ ಸಾಮಾನ್ಯರಿಗೂ ಶ್ರೀ ತಾತನವರ ಲೀಲೆಗಳು ಸುಲಭದಲ್ಲಿ ತಿಳಿಸುವ ಗದ್ಯ ಕಾವ್ಯವೂ ಮಹಾ ಪ್ರಸಾದದಂತೆ ಪವಿತ್ರವಾಗಿದೆ. ಪ್ರಸಾದಿಕ ಶೈಲಿಯಲ್ಲಿ ಲಾಲಿತ್ಯದಿಂದ ಕೂಡಿ ಕಂಗೊಳಿಸಿದೆ.

'ಚನ್ನಬಸವ ಸ್ವಾಮಿ ನಾಮವು - ಚನ್ನ ಚಲುವಿಕೆಯಲ್ಲಿ ಸಾರ್ಥಕ
ಬನ್ನಜೀವರಿಗೆಲ್ಲ ಶಾಂತಿಯ ಮಾರ್ಗ ಜ್ಯೋತಿಗೆ
ಪ್ರಣಾಮ, ಪ್ರಣಾಮ, ಪ್ರಣಾಮ

ಧಾರವಾಡ.
೧೧-೮-೧೯೭೮

—ಎಸ್. ಎಂ. ವೃಷಭೇಂದ್ರ ಸ್ವಾಮಿಗಳು
ಕರ್ನಾಟಕ ವಿಶ್ವವಿದ್ಯಾಲಯ

---

॥ ನಮಃ ಶ್ರೀ ಗುರುಲಿಂಗ ಜಂಗಮೇಭ್ಯಃ ॥

# ಶುಭಾಶಯಗಳು

ನಮ್ಮ ಕನ್ನಡನಾಡಿನ ಹಾಗು ಆಂಧ್ರಪ್ರದೇಶದಲ್ಲಿನ ಅಖಿಲ ಭಕ್ತಾದಿಗಳಿಗೆ ಪ್ರಾತಃ ಸ್ಮರಣೀಯರೂ, ಪರಮ ತಪೋಧನರೂ ಆದ ತ್ರಿವಿಧ ದಾಸೋಹ ಮೂರ್ತಿಗಳೂ ಆದ ಲಿಂಗೈಕ್ಯ-ವಳಬಳ್ಳಾರಿ ಶ್ರೀ ತಾತನವರೆಂಬೇ ಹೆಸರಾದ ಶ್ರೀ. ಮ. ನಿ. ಪ್ರ. ಚನ್ನಬಸವ ಮಹಾಸ್ವಾಮಿಗಳವರ "ಶ್ರೀ ಚನ್ನಬಸವಲೀಲಾ ಕಾವ್ಯ" ಎಂಬ ಚಾರಿತ್ರಾತ್ಮಕವಾದ ಕಾವ್ಯವನ್ನು ಕವಿ ಶ್ರೀ ನಾ. ಮ. ಸಿದ್ಧ ರಾಮಯ್ಯನವರು 'ಭಾಮಿನಿ ಷಟ್ಪದಿ'ಯಲ್ಲಿ ರಚಿಸಿದ್ದಾರೆ. ಈ ಕಾವ್ಯವು ಘನಗುರು ಚರವರೇಣ್ಯರ ಜೊತೆಗೆ ಅಸಂಖ್ಯ ಭಕ್ತಾದಿಗಳಿಗೆ ಘನ ತೃಪ್ತಿ ನೀಡಬಲ್ಲ ಸತ್ಕೃತಿ ಯೆಂದು ಹೇಳಿದರೆ ತಪ್ಪಾಗಲಾರದು. ಪುರಾಣವೆಂದರೆ ಹಳೇ ವಿಷಯಗಳಿಗೆ ಅತಿಯಾಗಿ ಬಣ್ಣ ಕೊಟ್ಟು ಹೊಸತಾಗಿ ಮಾಡುವುದು ಎಂಬುದು ಕೆಲವರ ಅರ್ಥ. ಆದರೆ ಈ ರೀತಿ ಅರ್ಥ ಮಾಡಬಾರದೆಂದು ಈ ಕಾವ್ಯದ ಕೃತಿಕಾರರು "ಲೀಲಾ ಕಾವ್ಯ" ಎಂದು ಹೆಸರಿಟ್ಟಿದ್ದಾರೆ. ಇದು ಯೋಗ್ಯವೂ, ಸಾರ್ಥಕವೂ ಆಗಿದೆ,

ಶ್ರೀ ತಾತನವರ ಚರಿತ್ರೆಯು ಸಚ್ಚಿದಾನಂದ ರಸವನ್ನು ಪ್ರಾಸಾದಿಕವಾಗಿ, ಕಮನೀಯತೆಯಿಂದ ಓದುಗರಿಗೆ ಲಭ್ಯವಾಗುವಂತೆ ಮಾಡಿ ನಿಡುಗಾಲ ನಿಲ್ಲುವಂತೆಯೂ, ಬಾಳಿಗೆ ಬೆಳಕನ್ನು ಕರುಣಿಸಿರುವ ಸತ್ಕವಿಯಿಂದ ಸತ್ಕಾವ್ಯ ದೊರೆಯುವುದು ನಮ್ಮ ಪುಣ್ಯ ವಿಶೇಷವಾಗಿರಬೇಕು". ಉತ್ಪತ್ತಿ, ಪ್ರತಿಭೆ, ಸತತಾಭ್ಯಾಸ ಇವು ಮೂರು ಕವಿಯ ಕಾವ್ಯ ಜೀವನದಲ್ಲಿ ಹಾಸುಹೊಕ್ಕಾದಾಗಲೇ ಸತ್ಕೃತಿ ಉದಯವಾಗುತ್ತದೆಂದು ಪೂಜ್ಯ ಶ್ರೀ ಗುರು ಲಿಂಗೈಕ್ಯ ಪಂ. ನಾ. ಮ. ದೊಡ್ಡಯ್ಯ ಶಾಸ್ತ್ರಿಗಳವರ ಅನುಭಾವದ ಮುತ್ತಿನಂತಹ ಮಾತುಗಳು ಶ್ರೀ ನಾ. ಮ. ಸಿದ್ಧ ರಾಮಯ್ಯನವರಿಗೆ ಅನ್ವಯಿಸುತ್ತವೆಂದು ನನ್ನ ಭಾವನೆ.

ತ್ರಿವಿಧ ದಾಸೋಹ ಮೂರ್ತಿಗಳೂ, ಲಿಂಗ ಪೂಜಾನಿಷ್ಠರೂ, ಶಿವಯೋಗ ಸಂಪನ್ನರೂ, ನಮ್ಮ ನಾಡಿನ ಆರಾಧ್ಯ ದೈವವೆನಿಸಿದ್ದ ಲಿಂಗೈಕ್ಯ ಪರಮ ಪೂಜ್ಯ ಶ್ರೀ ಚನ್ನಬಸವ ತಾತನವರ ಲೀಲಾಕಾವ್ಯ ಹಳತು ಹೊಸದರ ನಯ್ಗೆ ಇದೆ. ಅಲ್ಲಲ್ಲಿ ನೂತನ ಕಾವ್ಯದ ಧ್ವನಿ ಹಾಗೂ ಛಂದೋಲಯಗಳ ಪ್ರಭಾವ ಕಾಣಬಹುದು. ಈ ಕಾವ್ಯದ ಭಕ್ತಿರಸ ಪ್ರಧಾನ ಭೂಮಿಕೆಯಲ್ಲಿ ! ಧಾರ್ಮಿಕ, ನೈತಿಕ ಸಾಮಾಜಿಕ ತತ್ವಗಳ ನಿರೂಪಣೆ ಶಿವಯೋಗಿಗಳ ಸಹಜ ಪವಾಡಗಳ ಪಾವಿತ್ರತೆ, ದಾಸೋಹ, ಕಾಯಕ ಸಮತಾ ಭಾವಗಳ ವಿಷಯ ಹೊಂದಾಣಿಕೆಯ ನೈಪುಣ್ಯತೆಯು ಭಾಮಿನೀ ಷಟ್ಪದಿಯಲ್ಲಿ ಭಾವಗರ್ಭಿತವಾಗಿ ಬಂದಿರುವುದು ಆ ಶಿವಯೋಗಿಗಳ ಮತ್ತು ಶಿವಯೋಗಿಗಳ ನೆರಳಿನೋಪಾದಿಯಲ್ಲಿದ್ದು ಬಾಳಿ ಬೆಳಗಿದ ಲಿಂಗೈಕ್ಯ ಪಂಡಿತ ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರ ಕೃಪಾಶೀರ್ವಾದದಿಂದ ಎಂದು ಹೇಳಬಹುದು.

ಈಗಾಗಲೇ ಹತ್ತಾರು ಕೃತಿಗಳನ್ನು ರಚಿಸಿ ಚಿರಪರಿಚಿತರಾಗಿರುವ ಶ್ರೀ ನಾ ಮ, ಸಿದ್ಧರಾಮಯ್ಯನವರು ಈ ಪವಿತ್ರವೂ, ಪಾರಾಯಣಕ್ಕೆ ಯೋಗ್ಯವೂ ಆಗಿರುವ ಶ್ರೀ ಚನ್ನಬಸವ ತಾತನವರ ಲೀಲಾಕಾವ್ಯವನ್ನು ಓದಿದ ಭಕ್ತರ ಮನದ ಭೀಷ್ಟತೆಗಳು ಸಿದ್ಧಿಸಲೆಂದು ಹಾರೈಸುತ್ತಾ, ಕನ್ನಡ ಸಾಹಿತ್ಯ ಪ್ರಪಂಚಕ್ಕೆ ಶ್ರೀಯುತರಿಂದ ಇಂತಹ ಕಾವ್ಯಗಳು ಹೆಚ್ಚು ಹೆಚ್ಚು ಹೊರಬರಲೆಂದು ಆಶಿಸಿ ಶ್ರೀ ಶಿವಯೋಗಿಗಳು ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ಆಯುರಾರೋಗ್ಯ ಭಾಗ್ಯ ಸಂಪತ್ತನ್ನು ಕೊಟ್ಟು ಕಾಪಾಡಲೆಂದು ಶ್ರೀಪಾದಂಗಳಲ್ಲಿ ಅನನ್ಯ ಭಕ್ತಿಪೂರ್ವಕ ಪ್ರಣಾಮಗಳನ್ನು ಅರ್ಪಿಸಿ ವಿರಮಿಸುವೆನು.

ನಾಗರಹಾಳು, ಸಿರಗುಪ್ಪ ತಾ॥
ಬಳ್ಳಾರಿ ಜಿಲ್ಲಾ
೨–೮–೯೮

—ನಾ. ಮ. ಬಸವರಾಜಯ್ಯ,
ಪ್ರಧಾನೋಪಾಧ್ಯಾಯರು

ನಮಃ ಶ್ರೀ ಗುರುಲಿಂಗ ಜಂಗಮೇಭ್ಯಃ

# ಕೃತಿಕಾರನ ನಲ್ನುಡಿ

ಎನ್ನ ಸದ್ಗುರು ಸ್ವಾಮಿ ಎನಗೆ ಕರುಣಿಸಿದ ಕಾರುಣ್ಯವ
ನಾನೇನೆಂದುಪಮಿಸುವೆನಯ್ಯಾ ?
ಗುರುಲಿಂಗವು ಸಾಕ್ಷಾತ್ ಪರಶಿವನಿಂದ ವಿಶೇಷವು !
ಜ್ಯೋತಿಯಲೊದಗಿದ ಜ್ಯೋತಿಯಂತಾಯಿತ್ತು ;
ದರ್ಪಣದೊಳಗಣ ಪ್ರತಿಬಿಂಬದಂತಾಯಿತ್ತು ;
ಪದಕದೊಳಗಿರಿಸಿದ ರತ್ನದಂತಾಯಿತ್ತು ;
ರೂಪಿಸನೆಳಲಿನ ಅಂತರಂಗದಂತಾಯಿತ್ತು ;
ಕೂಡಲ ಚನ್ನಸಂಗಯ್ಯಾ, ದರ್ಪಣಕ್ಕೆ ದರ್ಪಣವ
ತೋರಿದಂತಾಯಿತ್ತು ಎನ್ನ ಸದ್ಗುರುವಿನುಪದೇಶವೆನಗಯ್ಯಾ

—"ಶ್ರೀ ಚನ್ನಬಸವಣ್ಣನವರು"

ಮೇಲೆ ಹೇಳಿದ ಷಟ್‌ಸ್ಥಲ ಚಕ್ರವರ್ತಿ ಶ್ರೀ ಚನ್ನಬಸವಣ್ಣನವರ ವಚನವು ಭಕ್ತ ಸ್ಥಲದಲ್ಲಿನ ಗುರುಕಾರುಣ್ಯ ಸ್ಥಲದ ಬಗೆಗೆ ವಿಚಾರಮಾಡಿ ನೋಡಿದಾಗ್ಗೆ ಸದ್ಗುರುವಿನ ಅನುಗ್ರಹವು ಕಾರುಣ್ಯ ರೂಪದಲ್ಲಿ ಅನುಗ್ರಹಿಸಿದಾಗ್ಗೆ ಆ ನು ಗ್ರ ಹ ಪಡೆದುಕೊಂಡ ಭ ಕ್ತ ನಿ ಗಾ ಗು ವ ಅವಿರಳಾನಂದದನುಭವದಿಂದ ಗುರುಲಿಂಗವು ಸಾಕ್ಷಾತ್ ಪರಶಿವನಿಂದ ವಿಶೇಷವೆನಿಸಿ ಜ್ಯೋತಿಯಲೊದಗಿದ ಜ್ಯೋತಿಯಂತಾಗಿ ಕನ್ನಡಿಯೊಳಗಿನ ಪ್ರತಿಬಿಂಬದಂತಾಗಿ, ಪದಕದೊಳಿರಿಸಿದ ರತ್ನದಂತಾಗಿ ಸಾಕಾರ ರೂಪಿನ ನೆಳಲಿನ–ಅಂತರಂಗದಂತಾಗಿ ಕೂಡಲ ಚ ನ್ನ ಸ ಂ ಗ ಯ್ಯಾ ನ ಅರುಹಿನ ಕುರುಹಿನ ನಡೆನುಡಿಯಿಂದ ಕನ್ನಡಿಗೆ ಕನ್ನಡಿ ತೋ ರಿ ದ ಂ ತಾ ಗಿ ಸದ್ಗುರುವಿನ ಉಪದೇಶ ತನಗೆ ಸಂಪೂರ್ಣ ಲಭಿಸಿತೆಂದೂ ಶ್ರೀ ಚನ್ನಬಸವಣ್ಣನವರು ಬಹು ಮಾರ್ಮಿಕವಾಗಿ ಹೇಳಿದ್ದಾರೆ. ಈ ವಚನವು ನಮ್ಮ ಪರಮ ಗುರುವಾದ ವಳ ಬಳ್ಳಾರಿ ಶ್ರೀ ತಾತನವರೆಂದೇ ಜಗದ್ವಿಖ್ಯಾತರಾಗಿ ಬೆಳಗಿದ ಶ್ರೀ ಚ ನ್ನ ಬ ಸ ವ ಮಹಾಸ್ವಾಮಿಗಳವರಿಗೆ ಅನ್ವರ್ಥಪೂರ್ಣವಾಗಿದೆ. ೧೯೦೫ನೇ ವ ರ್ಷ ದ ಲ್ಲಿ ಭೂಲೋಕದಲ್ಲಿನ ಜನರ ಕಲ್ಯಾಣಕ್ಕಾಗಿ ಅವತರಿಸಿದ ಕಾರಣಿಕ ಶಿಶು, ತನ್ನ ಬಾಲ್ಯ ಲೀಲೆಗಳಿಂದ ಅನಂತ ಪ ವಾ ಡ ಗ ಳ ನ್ನು ಮಾಡಿ ಕನಕಗಿರಿ ಮಠದ ಶ್ರೀ ಗುರು ಚನ್ನಮಲ್ಲ ಮಹಾಸ್ವಾಮಿಗಳಿಂದ ಅ ನು ಗ್ರ ಹ ಪಡೆದು, ವಳಬಳ್ಳಾರಿ ಮಠದ ಹಾಗೂ ನದೀ ಚಾಗೀಮಠದ ಅಧಿಕಾರಿಗಳಾಗಿ, ಸ್ವಯ ಜಂಗಮರಾಗಿ ಮಠದ ವ್ಯವಸ್ಥೆಗಳನ್ನು ಸುವ್ಯವಸ್ಥೆ ಮಾಡಿ, ಚರಜಂಗಮರಾಗಿ ಚರಿಸಿ ಅಸಂಖ್ಯ ಭಕ್ತ ಕೋಟಿಯನ್ನು ಉದ್ಧರಿಸಿ, ಪರಜಂಗಮರಾದಿ ತಮ್ಮ ಮಠದಲ್ಲಿದ್ದು ಶಿವಾನಂದ

ಲಹರಿಯ ಘನ ನಿಲವಿನಲ್ಲಿ ನಿಂತು, ತ್ರಿವಿಧ ದಾಸೋಹ ಮೂರ್ತಿಗಳಾಗಿ ಸುಮಾರು ೮೭ ವರ್ಷ ದಾಟಿ ೮೮ ವರ್ಷಗಳ ಸಾರ್ಥಕದ ಶಿವ ಬಾಳಬೆಳಕಿನಲ್ಲಿದ್ದು ಕೊನೆಗೆ ಶ್ರೀ ತಾತನವರ ಪ್ರಾಣಲಿಂಗದ ಜ್ಯೋತಿ ಶಿವ ಮಹಾಭಾವ ಲಿಂಗದ ಜ್ಯೋತಿ ಯಲ್ಲಡಗಿ ಮಹಾಜ್ಯೋತಿಯಾಗಿ ಬೆಳಗಿದರು. [ಲಿಂಗೈಕ್ಯ ೧೦-೧೦-೧೯೮೨ ]

ಇಂತಹ ಶ್ರೀ ತಾತನವರ ದಿವ್ಯಚರಿತ್ರೆಯನ್ನು ಭಾಮಿನೀ ಷಟ್ಪದಿಯಲ್ಲಿ ಬರೆದು ಲೋಕದ ಜನರಿಗೆ ಚರಿತ್ರೆಯನ್ನು ಸುಲಭದಲ್ಲಿ ತಿಳಿಯುವಂತೆ ಮಾಡಿ, ಪದಕದೊಳಗೆ ಇರಿಸಿದ ರತ್ನದಂತೆ ಕಾವ್ಯರೂಪದಲ್ಲಿ ಚಿತ್ರಿಸಿ ದರ್ಪಣದೊಳಗಣ ಪ್ರತಿಬಿಂಬದಂತೆ ಚರಿತ್ರೆಯ ಕಥಾ ನಾಯಕನ ಸ್ವಸ್ವರೂಪದ ಸಹಜ ಸಾಕ್ಷಾತ್ಕಾರಕ್ಕೆ ಶ್ರೀ ತಾತನವರ ಘನ ನಿಲವುಕಾವ್ಯದ ನಿಲುಗನ್ನಡಿಯಲ್ಲಿ ನಿಲ್ಲಿಸಿ, ದರ್ಪಣಕ್ಕೆ ದರ್ಪಣವು ಹಿಡಿದಂತೆ ಮಾಡಿ ಎಲ್ಲಾ ಮಾನವ ಜನಾಂಗದವರು ದರ್ಶನ ಮಾಡಿ ಕೊಳ್ಳುವ ಮಹಾಭಾಗ್ಯ ಕಲ್ಪಿಸಿದ ಶಿವಕವಿಯ ಈ ಲೀಲಾ ಕಾವ್ಯವು ಮಹಾ ಜನಗಳು ದರ್ಶನ ಮಾಡಿಕೊಂಡು ಭಕ್ತಿಯ ಆಧಿಕ್ಯದಿಂದ ಆತ್ಮಾನಂದ ಪಡೆದಾಗಲೇ ಕವಿಯ ಕಾವ್ಯವು ಸಾರ್ಥಕತೆಯನ್ನು ಪಡೆಯುವುದು. ಈ ಮಾತನ್ನು ಹುಸಿ ಗೊಳಿಸದೇ ಖುತು ಸತ್ಯವಾಗಿ ಸದ್ಗುರುವಿನೋಪದೇಶಾಮೃತವು ಪ್ರಾಸಾದಿಕವಾಗಿ ಬಂದ ಕಾವ್ಯ ರೂಪಕವು ಸಾರ್ಥಕತೆ ಪಡೆದಿದೆ ಎಂದು ಗುರುಹಿರಿಯರೆಲ್ಲರೂ ಮುಕ್ತ ಮನಸ್ಸಿನಿಂದ ನನ್ನನ್ನು ಆಶೀರ್ವದಿಸಿದ್ದಾರೆ. ಆ ಮಹನೀಯರೆಲ್ಲರಿಗೂ ನನ್ನ ಕೃತಜ್ಞತೆಗಳು.

೧೯೯೯ನೇ ವರ್ಷದಲ್ಲಿಯೇ ನಡೆಯುವ ಪ್ರತಿವರ್ಷ ಪದ್ಧತಿಯಂತೆ ಶ್ರೀ ತಾತನವರ ಪುಣ್ಯತಿಥಿಗೆ ಈ ಪುರಾಣ ಕಾವ್ಯವನ್ನು ಒಳಬಳ್ಳಾರಿ ಮಠದಲ್ಲಿ ಇಡ ಬೇಕಾಗಿತ್ತು. ಈ ಪುರಾಣವನ್ನು ಇಡುವರೆಂಬ ವಿಷಯ ತಿಳಿದು ಬಹುಬೇಗ ಪ್ರಕಟಗೊಳ್ಳಲಿ ಎಂದು ಅವಸರದಲ್ಲಿ ಮುದ್ರಿಸಿದ ಕೆಲವು ಸಂಧಿಗಳಲ್ಲಿ ಆದ ಲೋಪ ದೋಷಗಳಿಗೆ ಒಪ್ಪೋಲೆ ಹಾಕಬೇಕಾದ ಪ್ರಸಂಗಬಂದೊದಗಿತು. ಇನ್ನು ತಿಳಿದೋ ತಿಳಿಯದೆಯೋ ನುಸುಳಿಹೋದ ಶಬ್ದ ದೋಷಗಳನ್ನು ಓದುಗರು ನೇರ್ಪಡಿಸಿ ಕೊಂಡು ಸಹಕರಿಸಿ ಶ್ರೀ ತಾತನವರ ದಿವ್ಯ ಚರಿತಾಮೃತವನ್ನು ಸವಿಯಬೇಕಾಗಿ ವಿನಮ್ರ ಸೂಚನೆ. ಸರ್ಕಾರಿ ಕೆಲಸದ ಬಾಹುಳ್ಯದಲ್ಲಿ, ಸಂಸಾರ ತಾಪತ್ರಯದಲ್ಲಿ ಬೆಂದು ನೊಂದ ಮನಸ್ಸು ಇಂತಹ ಪುಣ್ಯಪುರುಷರ ಭಗವನ್ನಾಮ ಸಂಕೀರ್ತನೆ ಕಾವ್ಯ ರೂಪಕದಲ್ಲಿ ಮಾಡಿ ವ್ಯಕ್ತಿಯ ಉದ್ಧಾರದ ಜೊತೆಗೆ ಸಮಸ್ತ ಜನಗಳ ಲೋಕ ಕಲ್ಯಾಣಕಾರಕ ಕಾರ್ಯ ನೆರವೇರಿಸಿರುವುದು ಉತ್ತಮರ ಲಕ್ಷಣವೆಂದು ತಿಳಿದು ಈ ಕಾವ್ಯ ಬರೆಯಲಾಗಿದೆಯೇ ವಿನಃ ಕೇವಲ ಕೀರ್ತಿ, ಧನದ ಆಸೆಗಾರಿ

ಬರೆವಿಲ್ಲುವು ಓ ದುಗಳಲ್ಲಿ ಕಳಕಳಿಯಿಂದ ನನ್ನ ಆತ್ಮ ನಿವೇದನೆಯ ಒಳತಿರುಳಿನ-ಭಿಪ್ಸೆಯನ್ನು ತಿಳಿಸಲಿಚ್ಛಿಸುತ್ತೇನೆ. ಕಾವ್ಯದಲ್ಲಿ ಬರುವ ಎಲ್ಲಾ ಘಟನೆಗಳು ಸಹಜ ನಿಜಚಿತ್ರಣದಿಂದ ಚಿತ್ರಿಸಲಾಗಿದೆ. ಕೇವಲ ಒಂದೆರಡು ಪ್ರಸಂಗಗಳಲ್ಲಿ ಭಕ್ತರ ಹೆಸರು ನೇರವಾಗಿ ಹೇಳಿದರೆ ನೋವಾದೀತೆಂದು ತಿಳಿದು ಪ್ರಾಚೀನ ಕವಿಗಳು ಅನುಸರಿಸಿದ ಮಾರ್ಗದಂತೆ ಹೆಸರುಗಳನ್ನು ಬದಲುಮಾಡಿ ಅರ್ಥಾನ್ವಯಗೊಳಿಸಿದೆ.

ವೇದಾದಿ ಶಾಸ್ತ್ರಗಳು ಪ್ರಭು ಸಮ್ಮಿತಗಳಾಗಿಯೂ, ಪುರಾಣಾದಿ-ಇತಿಹಾಸ ಗಳು ಸುಹೃತ್ ಸಮ್ಮಿತಗಳಾಗಿಯೂ, ಕಾವ್ಯೋಪದೇಶಗಳು ಕಾಂತಾ ಸಮ್ಮಿತ ಗಳಾಗಿ ಇರುವುದೆಂಬುದು ಪಂಡಿತರ ಹಾಗೂ ಅನುಭಾವಿಗಳ ಅಭಿಮತವಾಗಿದೆ. ಕವಿಪದದ ವ್ಯುತ್ಪತ್ತಿ "ಕವಯತೇ ವರ್ಣಯತೀತಿ ಕವಿಃ" ಎಂದರೆ ವರ್ಣಿಸುವಾತನೇ ಕವಿ. ಆ ಕವಿ ಬರೆದುದೇ ಕಾವ್ಯ. ಈ ಶ್ರೀ ತಾತನವರ ಲೀಲಾ ಕಾವ್ಯದಲ್ಲಿ ಬರುವ ವರ್ಣನೆಗಳೆಲ್ಲವೂ ಭಕ್ತಿಯಿಂದ ಕೂಡಿದವುಗಳಾಗಿವೆ. ಸಮಯೋಚಿತವಾಗಿ ಶೃಂಗಾರ ವರ್ಣನೆ ಬಂದಲ್ಲಿ ಶ್ರೀ ಶಂಕರ ಭಗವತ್ಪಾದರು ವರ್ಣಿಸಿದ ಸೌಂದರ್ಯ ಲಹರಿಯ ದಿವ್ಯ ಭವ್ಯ ಭಗವತ್ ಪ್ರೇಮ ಭಾವದಲ್ಲಿ ಹೇಗೆ ವರ್ಣಿಸಿದೆಯೋ ಅದೇ ಭಾವದಲ್ಲಿ-ನಿಷ್ಕಾಮ ಯೋಗ ಪ್ರೇಮ-ಭಕ್ತಿ ಶಿವ ಶಕ್ತಿ ಪ್ರೇಮದಲ್ಲಿ ವರ್ಣಿಸ ಲಾಗಿದೆ.

ಶ್ರೀ ದಂಡಿಯು ತನ್ನ ಗ್ರಂಥವಾದ 'ಕಾವ್ಯ ದರ್ಶನ'ದಲ್ಲಿ

"ನಗರಾರ್ಣವ ಶೈಲರ್ತು ಚಂದ್ರಾರ್ಕೋದಯ ವರ್ಣನೈಃ
ಉದ್ಯಾನ ಸಲಿಲ ಕ್ರೀಡಾ ಮಧುಪಾನ ರತೋತ್ಸವೈಃ ।
ವಿಪ್ರ ಲಂಭೈರ್ವಿವಾಹೈಶ್ಚ ಕುಮಾರೋದಯ ವರ್ಣನೈಃ
ಮಂತ್ರ ದ್ಯೂತ ಪ್ರಯಾಣಾಜಿ ನಾಯಕಾಭ್ಯುದಯೈರಪಿ ॥
ಅಲಂಕೃತಮಸಂಕ್ಷಿಪ್ತಂ ರಸಭಾವ ನಿರಂತರಂ

(೧-೧೫-೭)

ನಗರ, ಸಮುದ್ರ, ಶೈಲ, ಋತು, ಚಂದ್ರೋದಯ, ಸೂರ್ಯೋದಯ, ಉದ್ಯಾನ, ಜಲಕ್ರೀಡೆ, ಮಧುಪಾನ, ರಥೋತ್ಸವ :-ವಿಪ್ರಲಂಭ (ವಿರಹ) ವಿವಾಹ, ಪುತ್ರೋತ್ಸವ, ಮಂತ್ರಾಲೋಚನೆ, ದ್ಯೂತ, ಪ್ರಯಾಣ, ಯುದ್ಧ ಮತ್ತು ನಾಯಕನ ಅಭ್ಯುದಯ ಹೀಗೆ ಹದಿನೆಂಟು ವರ್ಣನೆಗಳು ಕಾವ್ಯದಲ್ಲಿ ಮುಖ್ಯವಾಗಿ ಇರಬೇಕೆಂದು ಸೂಚಿಸಿದ್ದಾನೆ. ಶ್ರೀ ತಾತನವರ ಲೀಲಾಕಾವ್ಯದಲ್ಲಿ ಈ ಹದಿನೆಂಟು ವರ್ಣನೆಗಳು ಸಮಯೋಚಿತವಾಗಿ ಒಬ್ಬ ವಿರಕ್ತ ಪುಂಗವರಿಗೆ ಹೇಗೆ ಅನ್ವಯಿಸುವು ದೆಂಬುದನ್ನು ಸಾಂಕೇತಿಕವಾಗಿ ಶಬ್ದ ಸಾರ್ಥಕತೆಗೆ ಧಕ್ಕೆ ಬಾರದಂತೆ ವರ್ಣಿಸಿದೆ.

(ಈ ಕಾವ್ಯದಲ್ಲಿ ಬರುವ ಪದಗಳ ವಿವರ ಕಾವ್ಯದ ಕೊನೆಯಲ್ಲಿ ಟಿಪ್ಪಣಿ ರೂಪದಲ್ಲಿ ತಿಳಿಸಲಾಗಿದೆ.) (ಪುಟ. ೪೭)

ಕಾಂತಾ ಸಮ್ಮಿತದಲ್ಲಿ ಕ್ಷಣಿಕ ಸುಖವಿದ್ದರೆ ಈ ಕೆಳಗಿನ ಈಶಾವಾಸ್ಯೋಪನಿಷತ್ ವಾಕ್ಯದಂತೆ

ಕವಿರ್ಮನೀಷೀ ಪರಿಭೂಃ
ಸ್ವಯಂ ಭೂರ್ಯಾಥಾ ತಥ್ಯ ತೋರ್ಥಾನ್ವದಧಾತ್ ಶಾಶ್ವತೀಭ್ಯಃ।"

ಕವಿ ತನ್ನ ಕಾವ್ಯದಲ್ಲಿ ಯಥಾರ್ಥವಾದ ಅರ್ಥಗಳನ್ನು ತನ್ನ ನಿರೂಪಣಾ ಕೌಶಲ್ಯದಿಂದ ನಿಡುಗಾಲ ನಿಲ್ಲುವಂತೆ ಮಾಡಿ ಸತ್ಯಶಿವ ಸುಂದರತೆಯಿಂದ ಸಚ್ಚಿದಾನಂದವನ್ನುಂಟುಮಾಡುವುದರಿಂದ ಈ ಶ್ರೀ ತಾತನವರ ಲೀಲೆ ತಿಳಿಸುವ ಐತಿಹಾಸಿಕ ಘಟನೆಗಳನ್ನು ಅರ್ಥಾನ್ವಯಗಳಿಂದ ಕಾವ್ಯರೂಪಕದಲ್ಲಿ ಚಿತ್ರಿಸಿರುವುದರಿಂದ ಶ್ರೀ ಚನ್ನಬಸವ ಲೀಲಾ ಕಾವ್ಯವೆಂದು ಔಚಿತ್ಯಪೂರ್ಣವಾಗಿ ಹೆಸರಿಡಲಾಗಿದೆ. ಕವಿಯು ಕಥಾನಾಯಕನ ಭವ್ಯ ಹಾಗೂ ದಿವ್ಯಶಕ್ತಿಯು ವ್ಯಕ್ತಿತ್ವದ ಭೂಮಾನುಭೂತಿಯಲ್ಲಿ ಮಿಂದು ಸಹಜ ಸುಂದರದಲ್ಲಿ ಭಾವಾಭಿವ್ಯಕ್ತಿಗೆ ಕುಂದುಬಾರದ ಹಾಗೆ ಚಿತ್ರಿಸುವುದೇ ಕಾವ್ಯವೆನಿಸುವುದು. ಸುಂದರತೆಯು ಜೊತೆಗೆ ಮಾಧುರ್ಯ, ಗಾಂಭೀರ್ಯಗಳು ಮೈಗೂಡಿಕೊಂಡಿರಬೇಕು.

ಶ್ರೀ ತಾತನವರ ಈ ಕಾವ್ಯಕ್ಕೆ ಮುನ್ನುಡಿಯು ಮುಕುಟವನ್ನು ಇರಿಸಿ ರಾಜೋಪಚಾರದಿಂದ ಶ್ರೀ ತಾತನವರಿಗೆ ವಿಧ್ಯುಕ್ತವಾಗಿ ಪೂಜೆಗೈದು ಶ್ರೀ ಕಾವ್ಯಕ್ಕೆ ಕುಂದಣಕ್ಕೆ-ಪರಿಮಳವಿಟ್ಟಂತೆ ಮಾಡಿ ಅಸಂಖ್ಯ ಜನಗಳಿಗೆ ಶ್ರೀಗಂಧದ ಸಿರಿ ಸೊಬಗನ್ನು ಆಘ್ರಾಣಿಸುವಂತೆ, ಪ್ರಾಸಾದಿಕವಾಗಿ ಕರುಣಿಸಿದ ಹಿರಿನೇಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ (ಕಲುಬುರ್ಗಿ-ಗುಲಬರ್ಗಾ) ಶಿವಕವಿಗಳೂ, ಆದ ನನ್ನ ಹಿರಿಯ ಸೋದರರೂ ಆದ ಡಾಕ್ಟರ್ ಶ್ರೀ ಸಿದ್ಧಯ್ಯ ಪುರಾಣಿಕರು, ಐ.ಎ.ಎಸ್., ಬೆಂಗಳೂರು ಇವರಿಗೆ ನನ್ನ ಹಾರ್ದಿಕ ಪ್ರಣಾಮಗಳು.

ಒಳಬಳ್ಳಾರಿ ಶ್ರೀ ತಾತನವರ ಶ್ರೀ ಚನ್ನಬಸವಲೀಲಾ ಕಾವ್ಯಕ್ಕೆ ಶಿವಬಾಳ ಬೆಳಕನ್ನು ನೀಡಿ ವಿಶಿಷ್ಟಾನಂದದಿಂದ ಮನವು ಪ್ರಸನ್ನವಾಗುವಂತೆ ಮಂಗಲಾಶೀರ್ವಾದಗಳು ಕರುಣಿಸಿದ, ಪರಮ ತಪೋಧನರೂ, ಯುಗ ಪ್ರವರ್ತಕರೂ, ಸಮಾಜ ಸುಧಾರಕರೂ, ಶ್ರೀ ತಾತನವರಿಂದ ದಿವ್ಯಾನುಗ್ರಹ ಹೊಂದಿದ ಶ್ರೀ ಶ್ರೀ ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು, ಕೊಟ್ಟೂರು ಸ್ವಾಮಿಗಳ ಸಂಸ್ಥಾನ ಮಠ-ಬಳ್ಳಾರಿ-ಹೊಸಪೇಟೆ-ಹಾಲಕೆರೆ-ನರೇಗಲ್ಲು-ಇವರ ದಿವ್ಯ ಸನ್ನಿಧಿಗೆ ನನ್ನ ಹೃ। ಶಿ। ಪ್ರಣಾಮಗಳು.

ಶ್ರೀ ತಾತನವರ ಒಡನಾಡಿಗಳೂ, ಆತ್ಮೀಯ ದನುಬಂಧದಲ್ಲಿದ್ದವರೂ, ಶಿವಯೋಗಿಗಳೂ ಆದ ಹಾಲ್ವಿಯ ಚರಣಗಿರಿ ಶಿವಯೋಗೀಶ್ವರ ಸಂಸ್ಥಾನ ಮಠಾಧೀಶ್ವರರೂ ಆದ ಶ್ರೀ ಮ. ನಿ. ಪ್ರ. ರುದ್ರಮುನಿ ಮಹಾಸ್ವಾಮಿಗಳು ಶ್ರೀ ತಾತನವರ ಕಾವ್ಯಕ್ಕೆ ಮುಡಿಗನ್ನಡಿಯಿಂದ ಹರಸಿ ಆಶೀರ್ವದಿಸಿದುದಕ್ಕೆ ಅವರ ದಿವ್ಯ ಸನ್ನಿಧಿಗೆ ನನ್ನ ಹೃ। ಶಿ। ಪ್ರಣಾಮಗಳು.

ಒಳಬಳ್ಳಾರಿಯ ಸುವರ್ಣಗಿರಿ ವಿರಕ್ತ ಸಂಸ್ಥಾನ ಮಠಾಧೀಶ್ವರರೂ, ಸಿದ್ಧಪುರುಷರೂ, ಶಿವಯೋಗಿವರೇಣ್ಯರೂ, ತ್ರಿವಿಧ ದಾಸೋಹ ಮೂರ್ತಿಗಳೂ ಆದ ಶ್ರೀ ಮ. ನಿ. ಪ್ರ, ಸಿದ್ಧಲಿಂಗ ಮಹಾಸ್ವಾಮಿಗಳವರು ಮಂಗಲಾಶೀರ್ವಚನಗಳು ಕರುಣಿಸಿ, ಹಾರೈಸಿದ ದಿವ್ಯ ಸನ್ನಿಧಿಗೆ ನನ್ನ ಹಾರ್ದಿಕ ಶಿ। ಸಾ। ಪ್ರಣಾಮಗಳು.

ಶ್ರೀ ತಾತನವರ ಕೃಪೆಯ ಕಂದರಾಗಿ ಬೆಳೆದು ಅವರ ದಿವ್ಯಾನುಗ್ರಹಕ್ಕೆ ಪಾತ್ರರಾಗಿ ಅಡವಿ ಅಮರೇಶ್ವರ ಸುಕ್ಷೇತ್ರದೊಡೆತನವನ್ನು ಪಡೆದುಕೊಂಡು ಅನ್ವರ್ಥನಾಮದಿಂದ ಬೆಳಗುತ್ತಿರುವ ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು ತಮ್ಮ ಮಂಗಲಾಶೀರ್ವಚನಗಳು ಕರುಣಿಸಿದುದಕ್ಕೆ ನನ್ನ ಹೃ। ಶಿ। ಪ್ರಣಾಮಗಳು.

ಕವಿಗುರು, ಗುರುಕವಿ, 'ವಚನಬ್ರಹ್ಮ', ಸಾಹಿತ್ಯ ಸಾರ್ವಭೌಮ, ದಾರ್ಶನಿಕ ಸಾಹಿತ್ಯ ಸಾಮ್ರಾಟ್, 'ಆದ್ಯತನ ಗದ್ಯ ಗೀತಾಚಾರ್ಯ' ಸಂಶೋಧನ ಸುಧಾಕರ, ಭಾರತೀಯ ಭಾಷಾಭೂಷಣ, ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ೧೧೧೮ ಜಗದ್ಗುರು ಡಾ॥ ಶ್ರೀ. ಜ.ಚ ನಿ. ಸನ್ನಿಧಿಯವರ "ನಲ್ನರಕೆ" ಶ್ರೀ ಚನ್ನಬಸವ ಲೀಲಾಕಾವ್ಯಕ್ಕೆ ದೊರೆತದ್ದು ನನ್ನ ಜನ್ಮ ಸಾರ್ಥಕದ ಸುಕೃತವೆಂದೇ ಭಾವಿಸುವೆನು.

ಡಾ॥ ಶ್ರೀ. ಜ.ಚ.ನಿ. ಸನ್ನಿಧಿಯವರು ೩೩೩ ಕೃತಿಗಳನ್ನು ರಚಿಸಿ ಸಂಚಾರ ಪ್ರಚಾರದಲ್ಲಿ ನಡೆ ಹಾಗೂ ನಾಡಿನ ಸೇವೆ ಮಾಡಿರುವ ಮಹಾ ಗುರುವರೇಣ್ಯರೆನಿಸಿದ್ದಾರೆ. ಲಿಂಗೈಕ್ಯ ಪಂ॥ ನಾ. ಮ. ದೊಡ್ಡಯ್ಯ ಶಾಸ್ತ್ರಿಗಳವರು ಹೇಳುವಂತೆ ಶ್ರೀಗಳವರು ನಿಡುಮಾಮಿಡಿಯವರಾಗಿರುವುದರ ಜೊತೆಗೆ ನಡೆಮಾಮಿಡಿಯೂ ಆಗಿದ್ದಾರೆನ್ನುವುದು ಋತುಸತ್ಯವಾದ ಮಾತು. ಶ್ರೀ ಸನ್ನಿಧಿಗೆ ನನ್ನ ಅನಂತಾನಂತ ಶಿ। ಸಾ। ಪ್ರಣಾಮಗಳು.

ತ್ರಿವಿಧ ದಾಸೋಹ ಮೂರ್ತಿಗಳೂ, ಮಹಾ ಶಿವಯೋಗಿಗಳೂ ಆದ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು ಮುರುಘಾಮಠ ಧಾರವಾಡ ಹಾಗೂ ಪರಮ ಪೂಜ್ಯರೂ ಶಿವಯೋಗಿಗಳೂ ಆದ ಶ್ರೀ. ಮ. ನಿ. ಪ್ರ. ನೀಲಕಂಠ ಮಹಾಸ್ವಾಮಿಗಳು ಗಬ್ಬಿ-ಗಲೇದಗುಡ್ಡ. ಶ್ರೀ ಷ॥ ಬ್ರ। ಮಹಾಂತಲಿಂಗ ಶಿವಾ

ಚಾರ್ಯರೂ, ಮಹಾಂತೇಶ್ವರ ಹಿರೇಮಠ, ಆಳಂದ-ನಂದವಾಡಗಿ ; ಶ್ರೀ ಘನ ಮಠೇಶ್ವರ ಸಂಸ್ಥಾನ ಮಠದ ಪೀಠಾಧಿಪತಿಗಳಾದ ಶ್ರೀ. ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು, ಸಂತೇಕೆಲೂರು, ಈ ಎಲ್ಲಾ ಪರಮ ಪೂಜ್ಯ ಶ್ರೀಗಳವರು ಕರುಣಿಸಿದ ಮಂಗಲಾಶೀರ್ವಾದಗಳ ದಿವ್ಯ ಸನ್ನಿಧಾನಂಗಳಿಗೆ ನನ್ನ ಹೃ। ಶಿ। ಪ್ರಣಾಮ ಗಳು.

ಶ್ರೀ ತಾತನವರ ಗದ್ಯ ಕಾವ್ಯಕ್ಕೆ ನಲ್ನುಡಿಯ ನ್ನು ಕರುಣಿಸಿದ ನನ್ನ ಆತ್ಮೀಯರೂ, ನನಗೆ ಕನ್ನಡ ಪ್ರಾಧ್ಯಾಪಕರೂ, ಹಿರಿಯರೂ ಆದ ಡಾಕ್ಟರ್ ಶ್ರೀ ಎಸ್. ಯಂ. ವೃಷಭೇಂದ್ರ ಸ್ವಾಮಿಗಳು, ಎಂ.ಎ., ಪಿ.ಹೆಚ್.ಡಿ. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ನನ್ನ ಹೃ। ಶಿ। ಪ್ರಣಾಮಗಳು.

ನನ್ನ ಆತ್ಮೀಯರೂ, ಸನ್ಮಿತ್ರರೂ, ಮಹಾಪಂಡಿತರೂ, ಘನವಿದ್ವಾಂಸರೂ, ಆದ ಶ್ರೀ. ಶಿ. ವ. ಚನ್ನಬಸವೇಶ್ವರರು ಬಳ್ಳಾರಿ, ಇವರು ಶುಭ ಹಾರೈಕೆಗಳು ಕರುಣಿಸಿದುದಕ್ಕಾಗಿ ನನ್ನ ಹೃ। ಶಿ। ಪ್ರಣಾಮಗಳು.

ನನ್ನ ಹಿರಿಯಣ್ಣನವರೂ ಕಾವ್ಯಕ್ಕೆ ಸಲಹೆಗಳಿಂದ ಪ್ರೋತ್ಸಾಹ ಕೊಟ್ಟು ಶುಭಾಶಯಗಳೊಂದಿಗೆ ತುಂಬುಮನದಿಂದ ಹಾರೈಸಿದ ಶ್ರೀ ನಾ. ಮ. ಬಸವ ರಾಜಯ್ಯನವರಿಗೆ ನನ್ನ ಹಾರ್ದಿಕ ಪ್ರಣಾಮಗಳು.

ಒಳಬಳ್ಳಾರಿ ಶ್ರೀ ತಾತನವರ ಶ್ರೀ "ಚನ್ನಬಸವ ಲೀಲಾಕಾವ್ಯ" ಪ್ರಕಾಶನಕ್ಕೆ ಸಹಾಯ ಮಾಡಿದ ಮಹಾಸ್ವಾಮಿಗಳೂ ಹಾಗೂ ಮಹನೀಯರುಗಳೂ ಈ ಕೆಳಗಿನಂತಿದ್ದಾರೆ.

೧) ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ
ಡಾ॥ ಶ್ರೀ. ಜಗದ್ಗುರು ಚನ್ನಬಸವ ದೇಶೀಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು (ಡಾ॥ ಶ್ರೀ. ಜ. ಚ. ನಿ.) ಬೆಂಗಳೂರು.

೨) ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು, ಶ್ರೀ ಜಗದ್ಗುರು ಕೊಟ್ಟೂರು ಸ್ವಾಮಿ ಮಠ, ಹೊಸಪೇಟೆ–ಬಳ್ಳಾರಿ–ಹಾಲಕೆರೆ.

೩) ಪೂಜ್ಯಶ್ರೀ ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು
ಸುವರ್ಣಗಿರಿ ವಿರಕ್ತ ಸಂಸ್ಥಾನ ಮಠ, ವಳಬಳ್ಳಾರಿ.

೪) ಪೂಜ್ಯಶ್ರೀ ಮ. ನಿ. ಪ್ರ. ರುದ್ರಮುನಿ ಮಹಾಸ್ವಾಮಿಗಳು, ಹಾಲ್ವಿ,

೫) ಪೂಜ್ಯಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು,
ಅಡವಿ–ಅಮರೇಶ್ವರ ಸುಕ್ಷೇತ್ರ.

೭) ಶ್ರೀ ನಾ. ಮ. ಬಸವರಾಜಯ್ಯನವರು, ಪ್ರಧಾನೋಪಾಧ್ಯಾಯರು, ನಾಗರಹಾಳು.

೭) ಶ್ರೀ ಗೌಡರ ನಾಗರೆಡ್ಡಿಯವರು, ಮ. ಪಂ. ಸ., ನಾಗರಹಾಳು

೮) ಶ್ರೀ ಪಲ್ಲೇದ ಪಂಪಾಪತಿಯವರು, ಕುಡತಿನಿ

೯) ಶ್ರೀ ಆರ್. ಆಯ್ಯಪ್ಪನವರ ಮಗ ಮಲ್ಲಿಕಾರ್ಜುನಪ್ಪನವರು, ಸಿರುಗುಪ್ಪ

೧೦) ಶ್ರೀ ಸಿ. ಯಂ. ರೇವಣಸಿದ್ಧಯ್ಯನವರು, ಮಾಜಿ ವಿಧಾನಸಭಾ ಸದಸ್ಯರು, ಸಿರುಗುಪ್ಪ

೧೧) ಶ್ರೀ ಬಿ. ಇ. ರಾಮಯ್ಯನವರು, ಮಾಜಿ ವಿಧಾನಸಭಾ ಸದಸ್ಯರು ಸಿರುಗುಪ್ಪ

೧೨) ಶ್ರೀ ಯಂ. ಶಂಕರರೆಡ್ಡಿಯವರು, ಮಾಜಿ ವಿಧಾನಸಭಾ ಸದಸ್ಯರು ಸಿರುಗುಪ್ಪ

೧೩) ಶ್ರೀ ನಾ. ಮ. ಶ್ರೀಕಂಠಯ್ಯನವರು, ನಾಗರಹಾಳು

೧೪) ಶ್ರೀ ಡಾ॥ ಮಲ್ಲಿಕಾರ್ಜುನಯ್ಯನವರು, ಎಲ್. ಎ. ಎಂ. ಎಸ್., ದೊಡ್ಡಹರಿವಾಣ.

೧೫) ಶ್ರೀ ಯನ್. ಯಂ. ಕಲಿಗಣನಾಥಯ್ಯನವರು, ಶಾಲಾ ಇನ್ಸ್‌ಪೆಕ್ಟರ್ ಬಿ.ಎ., ಬಿ.ಇ.ಡಿ., ಸಿರುಗುಪ್ಪ

೧೬) ಶ್ರೀ ಯನ್. ಯಂ. ಮರುಳಾರಾಧ್ಯರವರು, ಎಂ. ಎ., ಬಿ.ಇ.ಡಿ., ಕೌತಾಳ.

೧೭) ಶ್ರೀಮಂತಿ ನಾ. ಮ. ರೇಣುಕಾದೇವಿ ವಾಮದೇವಯ್ಯನವರು, ಬಿ.ಎ. (ಎಲ್‌ಎಲ್‌ಬಿ.) ಬಳ್ಳಾರಿ

೧೮) ಶ್ರೀ ನಾ. ಮ. ವಿಶ್ವಾರಾಧ್ಯಯ್ಯನವರು (ಬಿ.ಎಸ್ಸಿ.,) ಬಳ್ಳಾರಿ

೧೯) ಶ್ರೀ ನಾ. ಮ. ಪಂಪಾರಾಧ್ಯರು, ಬಿ ಕಾಂ., (ಸಿ.ಎ ) ಬಳ್ಳಾರಿ

೨೦) ಶ್ರೀ ನಾ. ಮ. ಸೋಮನಾಥಯ್ಯನವರು, ಪಿ.ಯು.ಸಿ., ಬಳ್ಳಾರಿ

೨೧) ಶ್ರೀಮಂತಿ ಬಸವಮ್ಮ ದೊಡ್ಡಯ್ಯ ಶಾಸ್ತ್ರಿಗಳು, ನಾಗರಹಾಳು

೨೨) ಶ್ರೀಮಂತಿ ನಾ. ಮ. ಉಮಾದೇವಿ ಸಿದ್ಧರಾಮಯ್ಯನವರು, ಬಳ್ಳಾರಿ

೨೩) ಶ್ರೀ ರೆಡ್ಡಿ ಬಸವನಗೌಡರು, ಭೂಒಡೆಯರು, ನಾಗರಹಾಳು

೨೪) ಶ್ರೀ ಬಿ. ರಾಮಕೃಷ್ಣ ರೆಡ್ಡಿಯವರು, ಮಂ. ಪಂ. ಸ., ಬಿ. ಎಂ. ಸೂಗೂರು

೨೫) ಶ್ರೀ ರೆಡ್ಡಿ ಸಿದ್ಧನಗೌಡರು, ಆಲಬನೂರು

೨೬) ಶ್ರೀ ರೆಡ್ಡಿ ಬಸವನಗೌಡರು, ಆಲಬನೂರು

೨೭) ಶ್ರೀಮತಿ ಬಸವಮ್ಮ ಹಂಪಯ್ಯ ಶಾಸ್ತ್ರಿಗಳು, ಕುಂಟನಹಾಳು

೨೮) ಶ್ರೀ ಗಾಣಿಗರ ಬಸವರಾಜಪ್ಪನವರು, ಬಿ. ಯಂ. ಸೂಗೂರು

೨೯) ಶ್ರೀ ಚಿಂತಕುಂಟೆ ಬಸವನಗೌಡರು, ಸಿರುಗುಪ್ಪ

೩೦) ಶ್ರೀ ಜಿ. ಜಿ. ಗದಿಗೆಪ್ಪನವರು, ಹೊಸಪೇಟೆ

೩೧) ಶ್ರೀ ಬಾವಿ ಬೆಟ್ಟಪ್ಪನವರು, ಅಧ್ಯಕ್ಷರು ಜಿಲ್ಲಾ ಪರಿಷತ್, ಬಳ್ಳಾರಿ

೩೨) ಶ್ರೀ ಕೆ. ಶಿವರುದ್ರಗೌಡರು, ಕುಂಟನಹಾಳು

೩೩) ಶ್ರೀ ಕೆ. ಭೀಮನಗೌಡರು, ಕುಂಟನಹಾಳು

೩೪) ಶ್ರೀಮತಿ ಮಹದೇವಮ್ಮನವರು ಹಂಪಯ್ಯನವರು, ಎ. ಎಂ. ಗದ್ವಾಲ್
ಆಂಧ್ರಪ್ರದೇಶ

೩೫) ಶ್ರೀ ಬಾದರಲಿ ವೆಂಕಟರಾಯರು, ಸಿಂಧನೂರು, ಬಾದರಲಿ

೩೬) ಶ್ರೀಮತಿ ಮತ್ತು ಶ್ರೀ ಜಿ. ಎಸ್. ಕುಮಾರಸ್ವಾಮಿಗಳು,
ಓರಿಯಂಟ್ ಪವರ್ ಪ್ರೆಸ್, ಬೆಂಗಳೂರು–27

೩೭) ಶ್ರೀಮತಿ ಮತ್ತು ಶ್ರೀ ಎ. ಪಶುಪತಿಯವರು, ಬಿ.ಎ.,ಎಲ್.ಎಲ್.ಬಿ.
ಜಂಟಿ ಆಯುಕ್ತರು.
ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು.

೩೮) ಶ್ರೀಮತಿ ಮತ್ತು ಶ್ರೀ ಗಿರಡ್ಡಿಯವರು ಎಂ.ಎ.,
ವಾಣಿಜ್ಯ ತೆರಿಗೆ ಅಧಿಕಾರಿ. ೩ನೇ ವೃತ್ತ, ಬಳ್ಳಾರಿ.

ಮೇಲ್ಕಾಣಿಸಿದ ಮಹಾಸ್ವಾಮಿಗಳೆಲ್ಲರಿಗೂ ನನ್ನ ಅನಂತ ಪ್ರಣಾಮಗಳು. ಮಹನೀಯರೆಲ್ಲರಿಗೂ, ಮಹಿಳೆಯರೆಲ್ಲರಿಗೂ ಶ್ರೀ ತಾತನವರು ಆಯುರಾರೋಗ್ಯ ಭಾಗ್ಯ ಸಂಪತ್ತನ್ನು ಕೊಟ್ಟು ಹರಸಲೆಂದು ನನ್ನ ಪ್ರಾರ್ಥನೆ.

ಈ ಕಾವ್ಯದಲ್ಲಿ ಬರುವ ತಾತ್ವಿಕ, ಸಾಮಾಜಿಕ ಹಾಗೂ ಧಾರ್ಮಿಕ ತತ್ವಗಳ ವಿವೇಚನೆಗೆ ಲಿಂಗೈಕ್ಯ ಸರ್ವದರ್ಶನ ತೀರ್ಥ ಶ್ರೀ ಗುರು ವೈ. ನಾಗೇಶ ಶಾಸ್ತ್ರಿಗಳವರ ದಿವ್ಯ ಮಾರ್ಗದರ್ಶನವನ್ನು ಜೀವನದುದ್ದಕ್ಕೂ ನೆನೆದು ಸದಾ ಸ್ಮರಣೀಯರೆನಿಸಿದ್ದಾರೆ.

ಈ ಕಾವ್ಯವನ್ನು ನನ್ನ ತೀರ್ಥರೂಪರೂ ನನಗೆ ಪರಮಾರಾಧ್ಯರೂ, ಗುರುಗಳೂ ಆದ ಪಂಡಿತ ಶ್ರೀ ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು ಬರೆಯಬೇಕಿತ್ತು. ವೃದ್ಧಾಪ್ಯದ ಅನೇಕ ತೊಂದರೆಗಳಿಂದ ಅದು ಸಾಧ್ಯವಾಗದೇ ಹೋದರೂ ಅವರು ಬರೆದ ಕೆಲವು ಪ್ರಸಂಗ ಪವಾಡಗಳ ಜೊತೆಗೆ ನಾನು ಕಣ್ಣಾರೆ ಕಂಡ ಪ್ರಸಂಗ ಪವಾಡಗಳ ವಿಸ್ತೃತ ವಿಕಾಸವೇ ನನ್ನ ಕಾವ್ಯ ಲೇಖನಿಯಲ್ಲಿ ಅವರ ಕೃಪೆ ಹಾಗೂ ಶ್ರೀ ತಾತನವರ ಪ್ರೇರಣೆ, ದಿವ್ಯಾನುಗ್ರಹದಿಂದ ಸರಾಗವಾಗಿ ಹರಿದುಬಂದು ಭಾಮಿನಿ ಷಟ್ಪದಿಯ ಕಾವ್ಯ ರೂಪಕದಲ್ಲಿ ಪೂರ್ಣಗೊಂಡಿದೆ. ಶ್ರೀ ಶಾಸ್ತ್ರಿಗಳು ನನಗೆ ಪ್ರಾತಃ ಸ್ಮರಣೀಯರು ಆಗಿರುವುದರಿಂದ ಅವರ ದಿವ್ಯ ಸನ್ನಿಧಿಗೆ ನನ್ನ ಹೃ। ಶಿ। ಪ್ರಣಾಮಗಳು.

ನನ್ನ ಕಾವ್ಯಗಳಿಗೆಲ್ಲಾ ಮೆಚ್ಚಿಗೆಯ ಮುನ್ನುಡಿಯನ್ನು ಕರುಣಿಸುತ್ತಾ, ಪ್ರೋತ್ಸಾಹ ಪ್ರೇರಕ ಶಕ್ತಿಗಳಾಗಿ ನಿಂತಿರುವ ಶಿವಕವಿ, ಡಾ॥ ಶ್ರೀ ಸಿದ್ದಯ್ಯ ಪುರಾಣಿಕರು, ಐ.ಎ.ಎಸ್. ಬೆಂಗಳೂರು ಇವರಿಗೆ ಪ್ರತ್ಯೇಕವಾದ ಪ್ರಣಾಮಗಳನ್ನು ಸಲ್ಲಿಸುವೆನು.

ರಕ್ಷಾಪುಟದ ಶಿರೋನಾಮೆಯ ರಚನೆ ಅಂದವಾಗಿ ಮಾಡಿಕೊಟ್ಟ ಕಲಾಕೋವಿದ ಶ್ರೀ ಬಿ. ರಾಜಕುಮಾರ್, ಡಿಸೈನ್ ಕ್ರಿಯೇಟರ್ಸ್, ಗಾಂಧಿನಗರ–ಬೆಂಗಳೂರು ಇವರಿಗೆ ನನ್ನ ಅಭಿನಂದನೆಗಳು ಸಲ್ಲುತ್ತವೆ.

ಈ ಗ್ರಂಥವನ್ನು ಸುಂದರವಾಗಿ ಮುದ್ರಿಸಿಕೊಟ್ಟ ಓರಿಯಂಟ್ ಪವರ್ ಪ್ರೆಸ್ಸಿನ ಮಾಲೀಕರಾದ ಶ್ರೀ ಜಿ. ಯಸ್. ಕುಮಾರಸ್ವಾಮಿಗಳು ಇವರಿಗೆ ನನ್ನ ಹಾರ್ದಿಕ ಅಭಿನಂದನೆಗಳು ಸಲ್ಲುತ್ತವೆ.

ಉತ್ತಮೋತ್ತಮ ಸಾಹಿತ್ಯ ಸೇವೆಗೆ ಹರಗುರು ಚರಮೂರ್ತಿಗಳ ಹಾಗೂ ಗಣ್ಯವ್ಯಕ್ತಿಗಳ ಕೃಪೆ ಹಾಗೂ ರಸಿಕ ಹೃದಯಿಗಳ ಅನುಗ್ರಹವೂ ಸದಾ ಇರಲೆಂದು ಭಗವಂತನನ್ನು ಪ್ರಾರ್ಥಿಸಿ ವಿರಮಿಸಲಾಗಿದೆ.

ಸತ್ಯಂ ಶಿವಂ ಸುಂದರಂ

ನಾ.ಮ. ಸಿದ್ಧರಾಮಯ್ಯ

ಶ್ರೀ ಗುರು ಬಸವ ಲಿಂಗಾಯ ನಮಃ

ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು, ವಿರಕ್ತ ಮಠ
ಅಡವಿ ಅಮರೇಶ್ವರ ಕ್ಷೇತ್ರ
ಮಾನವಿ ತಾಲ್ಲೂಕು, ರಾಯಚೂರು ಜಿಲ್ಲೆ

# ಶುಭ ಸಂದೇಶ

। ಪರಮ ತಪಸ್ವಿಗಳು, ತ್ರಿವಿಧ ದಾಸೋಹ ಮೂರ್ತಿಗಳೂ, ದೀನ ಬಂಧುಗಳೂ, ಕಾಡನ್ನು ನಾಡನ್ನಾಗಿ ಮಾಡಿದ ಮಹಾಮಹಿಮರು ಆದಂಥ ರಾಯಚೂರು ಜಿಲ್ಲೆಯ, ಮಾನ್ವಿ ತಾಲೂಕಿನಲ್ಲಿರುವ ಶ್ರೀ ಅಡವಿ ಅಮರೇಶ್ವರ ಕ್ಷೇತ್ರದ ಕರ್ತೃಗಳೂ ನಮ್ಮ ಗುರುವರ್ಯರಾದ ಲಿಂಗೈಕ್ಯ ಶ್ರೀ ಮ.ನಿ.ಪ್ರ. ಚನ್ನಬಸವ ತಾತನವರೂ, ಸುವರ್ಣಗಿರಿ ವಿರಕ್ತ ಮಠ, ಒಳ ಬಳ್ಳಾರಿ (ತಾ॥ ಸಿಂಧ ನೂರು, ಜಿಲ್ಲಾ : ರಾಯಚೂರು) ಇಂಥ ಮಹಾತ್ಮರ ದಿವ್ಯ ಚರಿತಾಮೃತವನ್ನು "ಶ್ರೀ ಚನ್ನಬಸವ ಲೀಲಾ ಕಾವ್ಯ" ಎಂಬ ಗ್ರಂಥವನ್ನು ಶ್ರೀ ನಾ. ಮ. ಸಿದ್ಧರಾಮಯ್ಯನವರು ರಚಿಸಿ ಅದರಲ್ಲಿ ಶ್ರೀ ತಾತನವರ ದಿವ್ಯ ಲೀಲೆಗಳನ್ನು ಜನರ ಹೃದಯ ಮಂದಿರದಲ್ಲಿ ನೆಲೆಗೊಳ್ಳುವಂತೆ ವಿವರಿಸಿದ್ದಾರೆ. ಇವರು ರಚಿಸಿದ ಶ್ರೀ ತಾತನವರ ಗ್ರಂಥವು ಲೋಕದ ಜನರನ್ನು ಮುಕ್ತಿ ಮಾರ್ಗಕ್ಕೆ ಹಚ್ಚುವ ಸುಸಂಸ್ಕೃತಿಯ ನಡೆನುಡಿಗಳನ್ನು ಕಲಿಸುವಂಥಹ ಒಂದು ದಾರಿ ದೀಪವಾಗಿದೆ.

ಶ್ರೀ ನಾ. ಮ. ಸಿದ್ಧರಾಮಯ್ಯನವರು ಬಳ್ಳಾರಿ ಜಿಲ್ಲೆಯ ಸಿರುಗುಪ್ಪ ತಾಲೂಕಿನ ನಾಗರ ಹಾಳು ಗ್ರಾಮದವರಾಗಿ, ಪಂಡಿತ ಶ್ರೀ. ನಾ. ಮ. ದೊಡ್ಡಯ್ಯ ಶಾಸ್ತ್ರಿಗಳವರ ಕರಸಂಜಾತರಾಗಿ ಕಂಗೊಳಿಸಿ ಮನೆತನಕ್ಕೆ ತಕ್ಕ ಘನತೆ, ಗೌರವಗಳಿಂದ ಕವಿಗಳಾಗಿ, ಶಿವಾನುಭವಿಗಳಾಗಿದ್ದಾರೆ. ಸರ್ಕಾರದ ಉದ್ಯೋಗ ದಲ್ಲಿದ್ದರೂ, ಧಾರ್ಮಿಕ ಕಾರ್ಯಗಳಲ್ಲಿ ಉತ್ಸುಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಇಂಥಹ ಧಾರ್ಮಿಕ ಕೃತಿಗಳನ್ನು ರಚಿಸುತ್ತಿರುವುದು, ಶಿವಾನುಭವ ಗೋಷ್ಠಿಗಳಲ್ಲಿ ಭಾಗವಹಿಸಿ, ಪ್ರವಚನದ ನೈಪುಣ್ಯದ ಶೈಲಿಯನ್ನು ನೋಡಿದಾಗ ಲಿಂಗೈಕ್ಯ ಶ್ರೀ ಮ. ನಿ. ಪ್ರ. ಒಳ ಬಳ್ಳಾರಿ ಚನ್ನ ಬಸವ ಮಹಾಸ್ವಾಮಿಗಳವರ ಅನುಗ್ರಹವು ಈ ಕವಿಗಳಿಗೆ ಸಂಪೂರ್ಣವಾಗಿ ಆಗಿದೆಯೆಂದು ನಮ್ಮ ಅಂತರಾತ್ಮ ನುಡಿಯುತ್ತಿದೆ, ಇದರಂತೆ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ಶ್ರೀ ತಾತನವರು ಇನ್ನು ಅನೇಕಾನೇಕ ಧಾರ್ಮಿಕ ಗ್ರಂಥಗಳನ್ನು ರಚಿಸುವ ಮಹಾಶಕ್ತಿಯನ್ನು ಕರುಣಿಸಲೆಂದು ಹಾರ್ದಿಕವಾಗಿ ಹಾರೈಸುತ್ತೇವೆ.

ಅಡವಿ ಅಮರೇಶ್ವರ ಕ್ಷೇತ್ರ | ಶ್ರೀ ಶಾಂತಮಲ್ಲ ಮಹಾಸ್ವಾಮಿಗಳು

೨-೮-೮೯

# ಶುಭ ಹಾರೈಕೆ

The Indian mind holds that the Rishi, the thinker, the seer of spiritual truth is the best guide not only of the religious and moral, but the Practical life. The seer, the Rishi is the Natural Director of Society; so the Rishis he attributes the ideals and guiding infusions of his civilisation. Even today he is very ready to give the name to anyone who can give a spiritual truth which helps his life or a formative idea and inspiration which influences religion, ethics, society, even politics.

This is because the Indian believes that the ultimate truths are the truths of the spirit and that truths of the spirit are the most fundamental and most effective truths of our existence, powerfully creative of the inner salutarily reformative of the outer life.

— "Sri AUROBINDO"

ಭಾರತ ದೇಶದ ನೀತಿ, ರಾಜನೀತಿ, ಸಂಘ.ಸಂಸ್ಥೆ, ಸಹಕಾರ, ಆಚಾರ-ವಿಚಾರ, ಧರ್ಮ, ಧಾರ್ಮಿಕ ದರ್ಶನ ಎಲ್ಲವೂ ವೇದಾಗಮ ಮಾರ್ಗಾನುಗಾಮಿಗಳಾದ ಋಷಿಪರಂಪರೆಯಿಂದ ಪೂರ್ವಾನುಗತವಾಗಿ ಅಂದಿನಿಂದ ಇಂದಿನ ತನಕ ತರಂಗ ತರಂಗೋದ್ಧೃತವಾಗಿ ಹರಿದು ಬಂದಿರುವ ಹಾಗೆಯೇ ಎಂದೆಂದಿಗೂ ಹರಿಯುತ್ತಲೇ ಇರುವ ದಿವ್ಯ ಭವ್ಯ ಸಜೀವ ಸ್ರೋತಸ್ಸು. ಋಷಿ ಮುನಿಗಳೇ ನಮ್ಮ ಜೀವನದ ಜೀವನಾಡಿ; ನಮ್ಮ ಬಾಳಿನ ಬೆಳಕು ! ನಮ್ಮ ಬದುಕಿನ ಮೂಲಾಧಾರ. ಈ ಮಾತು ಹೊಸತೇನೂ ಅಲ್ಲ.

ತಮ್ಮ ಪುಣ್ಯ ಪ್ರಭಾವದಿಂದ ಈ ನಾಡನ್ನು ಬೆಳಗಿದ ಋಷಿ ಸದೃಶ ಮಹಾನ್ ವ್ಯಕ್ತಿತ್ವದ ಮಹಾಪುರುಷರಲ್ಲಿ ನಾವೆಲ್ಲರೂ ಕಂಡಂತೆ, ಕಂಡಂತೆ ಮಾತ್ರವಲ್ಲ ಮನಗಂಡಂತೆ ಪೂಜ್ಯ ಪಾದರಾದ ಶ್ರೀ ಒಳ ಬಳ್ಳಾರಿಯ ಶ್ರೀ ಚನ್ನಬಸವ ತಾತನವರೊಬ್ಬರು. ಅವರ ದಿವ್ಯ ಪ್ರಭಾವಕ್ಕೆ ಒಳಗಾಗದವರಿಲ್ಲ. ಅವರ ಮಹತ್ವಕ್ಕೆ ಮಣಿಯದವರಿಲ್ಲ. ಅವರ ಮೌನ ಹಿತೋಪದೇಶಕ್ಕೆ ಕಿವಿಗೊಡದವರಿಲ್ಲ. ಸದಾ ಅಂತರ್ಮುಖಿಗಳಾಗಿದ್ದ ಅವರ ಮುಖಾವಲೋಕನ ಮಾತ್ರದಿಂದ, ಆತ್ಮ ದರ್ಶನದ ಅಂತಸ್ತಿಗೇರದವರಿಲ್ಲ. ಅವರ ಪೂಜಾಫಲವನ್ನು ಉಣ್ಣದವರಿಲ್ಲ; ಅವರ ದಿವ್ಯ

ದರ್ಶನಾಶೀರ್ವಾದಗಳ ಪ್ರಭಾವದಿಂದ ಪುನೀತರಾಗದವರಿಲ್ಲ. ಒಂದಲ್ಲದೊಂದು ರೀತಿಯಲ್ಲಿ ಅವರ ನೆರವನ್ನು ಪಡೆದು ಕೃತಜ್ಞರಾಗದವರಾಗಲೀ, ಒಂದಲ್ಲಡೊಂದು ರೀತಿಯಲ್ಲಿ ಅವರ ಸನ್ನಿಧಾನ ಕರ್ತೃತ್ವ ಶಕ್ತಿಯಿಂದ ತಮಗೆ ತಾವೇ ರೂಪುಗೊಳ್ಳು ತ್ತಿದ್ದ ಮಹತ್ವಪೂರ್ಣ ಪುಣ್ಯ ಕಾರ್ಯಗಳಲ್ಲಿ ನೆರವಾಗಿ ಕೃತಾರ್ಥರಾಗದವರಾಗಲೀ ಯಾರು ಇಲ್ಲ.

ಇಂಥಹ ಚರಿತ್ರಾರ್ಥರಾದ ಶ್ರೀ ತಾತನವರ ದಿವ್ಯ ಲೀಲಾಮಯ ಇತಿಹಾಸ ವನ್ನು ಪೌರಾಣಿಕ ಕಥಾ ಲಹರಿಯ ಭಾಮಿನೀ ಷಟ್ಪದಿಯ ನೂತನ ರೂಪಕದಲ್ಲಿ ನನ್ನ ಸನ್ಮಿತ್ರರಾದ ಶ್ರೀ ಸಿದ್ಧರಾಮಯ್ಯನವರು ಬರೆದಿರುವುದು ನನಗೆಷ್ಟೋ ಮುದಾವಹವಾದ ಮಾತು. ಕಷ್ಟಪಟ್ಟು ಬರೆದದ್ದು ಮಾತ್ರವಲ್ಲದೇ ತಾವು ಬರೆದದ್ದನ್ನು ತಾವೇ ಪ್ರಯಾಸ–ಪರಿಶ್ರಮಗಳಿಂದ ಪ್ರಕಾಶ ಪಡಿಸುವ ಸಾಹಸ ಕಾರ್ಯವನ್ನು ಸಾಧಿಸಿ, ಸಿದ್ಧಹಸ್ತರಾಗಿ ಪ್ರಸಿದ್ಧಿಯಾಗಿದ್ದಾರೆ. ಇದು ಸಣ್ಣ ಮಾತಲ್ಲ; ಸೇವಾ ಸೌಭಾಗ್ಯದ ಘನತೆ, ಚಿಕ್ಕಂದಿನಿಂದಲೂ ಈ ಶ್ರೀ ತಾತನವರ ಲೀಲಾ ಕಾವ್ಯದ ಕರ್ತ ಶ್ರೀ ನಾ. ಮ. ಸಿದ್ಧರಾಮಯ್ಯನವರು, ಒಳಬಳ್ಳಾರಿ ಶ್ರೀ ಚನ್ನಬಸವ ಮಹಾ ಶಿವಯೋಗಿಗಳವರ ಗುಣೌದಾರ್ಯ ಗಾಂಭೀರ್ಯ, ಮಹತ್ವಗಳ ಹಿರಿಮೆ–ಗರಿಮೆ ಗಳನ್ನು ಕಂಡುಂಡವರು ; ಅವರ ಪ್ರೀತಿಯ ಪೀಯೂಷವನ್ನುಂಡು ಬೆಳೆದವರು : ಅವರು ಕರುಣೆಯಿಂದ ಕೈ ಹಿಡಿದೆತ್ತಿದಾಗ ಮೇಲೆದ್ದು, ಮೇಲ್ಮೆಯನ್ನು ಕಂಡವರು. ಆದರೆ ಶ್ರೀ ನಾ. ಮ. ಸಿದ್ಧರಾಮಯ್ಯನವರಂತೆ ತಮ್ಮ ಅಭಿಮಾನದ ಆರಾಧ್ಯ ದೈವಕ್ಕೆ ವಾಗ್ವೈಭವದ ಭೂಮಾನ ಭೂತಿಯಲ್ಲಿ ಎಂದೂ ಪೌರಾಣಿಕ ಪ್ರಬಂಧ ರಚನಾ ಪೂರ್ವಕವಾದ ಭಾಮಿನೀಷಟ್ಪದಿಯ ಕಾವ್ಯ ರೂಪಕದ ಅಪೂರ್ವ ಸೇವೆಯನ್ನು ಇಷ್ಟೊಂದು ಉತ್ಸಾಹದಿಂದ ಮಾಡಿದವರಿಲ್ಲ. ಇಲ್ಲವೆಂದರೆ ತಪ್ಪಾಗಲಿಕ್ಕಿಲ್ಲ.

ಶ್ರೀ ನಾ. ಮ. ಸಿದ್ಧರಾಮಯ್ಯನವರ ಪುಣ್ಯದ ಇನ್ನೊಂದು ಮುಖವೆಂದರೆ ಲಿಂಗೈಕ್ಯ ಶ್ರೀ ಪಂಡಿತ ದೊಡ್ಡಯ್ಯ ಶಾಸ್ತ್ರಿಗಳವರು. ಶ್ರೀ ಸಿದ್ಧರಾಮಯ್ಯನವರಿಗೆ ತೀರ್ಥರೂಪರಾಗಿ ಭವ್ಯ ಭಾಗ್ಯದೇವತೆಯೇ ಆಗಿದ್ದರು.

ಶ್ರೀ ದೊಡ್ಡಯ್ಯ ಶಾಸ್ತ್ರಿಗಳು ಅಂದಿನ ಪುರಾಣ ಪ್ರವಚನ ಪ್ರಪಂಚದ ಅನಭಿಷಿಕ್ತ ಸಾಮ್ರಾಟರಾಗಿದ್ದವರು. ಶ್ರೀ ದೊಡ್ಡಯ್ಯ ಶಾಸ್ತ್ರಿಗಳನ್ನು ಒಂದೇ ಒಂದು ನುಡಿಮುತ್ತಿನಿಂದ ಅಭಿವರ್ಣಿಸುವುದಾದರೆ ಅವರೊಬ್ಬ ದೊಡ್ಡ ಮನುಷ್ಯರು, ಉತ್ತಮ ಶೀಲ ಸಂಪನ್ನರು. ಶ್ರೀ ಶಾಸ್ತ್ರಿಗಳ ನಿರಾಳ ನಿರಾಡಂಬರ ಜೀವನ ಸರಳ ವ್ಯಕ್ತಿತ್ವವು ಇತರರನ್ನು ಪ್ರಭಾವಗೊಳಿಸುವಷ್ಟು ಪರಿಶುದ್ಧ ಹಾಗೂ ಪ್ರಬುದ್ಧ ವಾಗಿತ್ತು. ಇಂಥಹ ಶಾಸ್ತ್ರಿಗಳ ಕೃಪೆಯಲ್ಲಿ ಬೆಳೆದು ಬಂದವರಾದ ಶ್ರೀ ನಾ. ಮ.

ಸಿದ್ಧರಾಮಯ್ಯನವರು ಗುರು ಹಾಗೂ ತೀರ್ಥರೂಪದವರನ್ನು ಕುರಿತು ಶ್ರೀ ಶಾಸ್ತ್ರಿಗಳಷ್ಟೇ ಸರಳವಾದ ಮಾತುಗಳಲ್ಲಿ ಬರೆದಿರುವ ಈ ಕೆಳಗಿನ ಪದ್ಯವನ್ನು ಉದಾಹರಿಸಬಹುದು.

ಸರಳತೆಯು ಸಾಕಾರರೂಪವ
ಧರಿಸಿ ಜಗದೊಳು ಬಂದ ತೆರನಲಿ
ಅರಿವು ಆಚಾರದಲಿ ಜೀವನ ಶಿವಮಯದಿ ತುಂಬೀ
ಗುರು ಘನತೆ ನಡೆ ನುಡಿಗಳೆಲ್ಲವು
ಗುರು ಲಿಂಗ ಜಂಗಮರು ಮೆಚ್ಚುವ
ಶರಣ ಗುಣ ಮಣಿ ತತ್ವ ಚಿಂತಾರತ್ನವಾಗಿರುತಾ

(ಪುಟ ೬೬, ಪದ್ಯ ೨)

ಕೈ ಕುಂದುರಿದ ಕವಿಗಳು ಬರೆದಿರುವ ಹಾಗಿರುವ ಇಂತಹ ಅರ್ಥಾನ್ವಯದ ನುಡಿ ಕಾರದ ಬಿಡಿಮುತ್ತುಗಳು ಇಲ್ಲಿ ಅಲ್ಲಲ್ಲಿ ಎಷ್ಟೋ ಇರುವುದನ್ನು ರಸಿಕರು ಕಂಡು ನಲಿಯಬಹುದು. ಇನ್ನು ಶ್ರೀ ತಾತನವರಾದ ಶ್ರೀ ಚನ್ನಬಸವ ಶಿವಯೋಗಿಗಳಿಗೆ ಅರ್ಥಾನ್ವಯದ ನಾಮ ಸಾರ್ಥಕದ ಘನತೆಯ ಪದ್ಯವೊಂದನ್ನು ಇಲ್ಲಿ ಉದಾಹರಿಸುವುದು ಯಥಾ ಯೋಗ್ಯವಾಗಿದೆ.

ಹೊನ್ನು ಹೆಣ್ಣುಗಳಾಸೆಯಿರದಲೆ
ಚನ್ನ ಚಲುವಿನ ವಟುವನೋಡುತ
ಚನ್ನಬಸವಾಯೆಂದು ಕರೆದಭಿನಾಮವನುಯಿಡು ತಾ
ಚನ್ನ ನಡೆ ನುಡಿ ಜ್ಞಾನ ನಿಧಿಯಾ
ಚನ್ನಬಸವ ದೇಶಿಕರ ಹರಸಿ
ಸನ್ನಿಧಿಗೆ ಹೆಸರನ್ನು ತರುತಲಿ ಜಗದಿ ಬೆಳಗೆಂದೂ

(ಪುಟ ೪೧, ಪದ್ಯ ೧೧)

ಭಕ್ತಿ ರಸ ಪ್ರಧಾನವಾದ ಈ ಕಾವ್ಯದಲ್ಲಿ ಇಂಥಹ ನುಡಿ ಮುತ್ತುಗಳು, ಬಳ್ಳಾರಿಯ ಸರ್ವದರ್ಶನ ತೀರ್ಥ ಪಂಡಿತ ಶ್ರೀ ನಾಗೇಶ ಶಾಸ್ತ್ರಿಗಳವರ ಪ್ರಭಾವ ಪ್ರಕಾಶದಲ್ಲಿ ಬೆಳಗಿದವರಾದ್ದರಿಂದ ವೀರಶೈವ ತತ್ವ ಶಾಸ್ತ್ರದ ವಿಷಯಗಳೂ ಸಹಾ ತುಂಬಿ ತುಳುಕುತ್ತಿವೆ. ಶ್ರೀ ತಾತನವರ ಶ್ರೀ ಚನ್ನಬಸವ ಲೀಲಾ ಕಾವ್ಯವು, ಕಾವ್ಯದೃಷ್ಟಿಯಿಂದ ಕಮನೀಯತೆಯಿಂದ ಕಂಗೊಳಿಸಿ, ಶಿವಯೋಗಿಗಳವರ ಇತಿಹಾಸದಿಂದ, ಧಾರ್ಮಿಕ, ನೈತಿಕ ಹಾಗೂ ತಾತ್ವಿಕತೆಗಳೆಲ್ಲವನ್ನು ಒಳಗೊಂಡು ಒಳಬಾಳನ್ನರಿಯುವ ಒಂದು ಸತ್ಕೃತಿಯೆಂದು ಮನದುಂಬಿ ಹೇಳಿದರೆ ಅತಿಶಯೋಕ್ತಿಯಾಗಲಾರದು.

ಕವಿ ಹೃದಯ ಗುರು ಗದ್ದುಗೆಯನ್ನೇರಿ ವಿರಾಜಿಸುವ ಇಬ್ಬರು ಮಹಾಪುರುಷರ ಮಹೋತ್ಕೃಷ್ಟ ವ್ಯಕ್ತಿತ್ವವನ್ನು ತಮ್ಮೀ ಕಾವ್ಯ ಕೃತಿಯಲ್ಲಿ ಚಿತ್ರಿಸಿ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಕೃತಾರ್ಥರಾಗಿದ್ದಾರೆ. ಶ್ರೀ ತಾತನವರ ಮತ್ತು ಶ್ರೀ ಶಾಸ್ತ್ರಿಗಳ ಆತ್ಮಶ್ರೀ – ಸಾಯುಜ್ಯ ಪದವಿಯಿಂದ ಅವಲೋಕಿಸಿ, ನಲಿದೊಲಿದು ಆಶೀರ್ವದಿಸುವಂತೆ ಕಾವ್ಯ ರೂಪಕದಿಂದ ಭಗವನ್ನಾಮ ಸಂಕೀರ್ತನೆ ಮಾಡಿ ಧನ್ಯರಾಗಿದ್ದಾರೆ. ಶ್ರೀ ನಾ. ಮ. ಸಿದ್ಧರಾಮಯ್ಯನವರಿಗೆ ನಮ್ಮೆಲ್ಲರ ಹಾರ್ದಿಕ ಅಭಿನಂದನೆಗಳನ್ನರ್ಪಿಸಬೇಕಾದದ್ದು ಕರ್ತವ್ಯದಿಂದ ವಿಹಿತವೇ ಆಗಿದೆ. ಸನ್ಮಿತ್ರ ಶ್ರೀ ಸಿದ್ಧರಾಮಯ್ಯನವರಿಗೆ ಶ್ರೀ ತಾತನವರ ಕೃಪೆ ಸದಾ ಇರಲೆಂದು ಹಾರೈಸುವೆನು.

ಬಳ್ಳಾರಿ
ದಿನಾಂಕ : ೫–೮–೮೯

(ಶಿವ ಶ್ರೀ)
— ಶಿ. ವ. ಚನ್ನಬಸವೇಶ್ವರರು

# ಅರ್ಪಣೆ

ವೀರಶೈವೇತಿಹಾಸದಲ್ಲಿ ಯುಗಪ್ರಭೆಯಾಗಿ ಬೆಳಗಿದ,
ಕಾರಣಿಕ ಶಿವಯೋಗಿಗಳೂ, ಪರಮಪೂಜ್ಯರೂ ಆದ

## ಶ್ರೀ ಶ್ರೀ ಶ್ರೀ
## ಹಾನಗಲ್ಲ ಕುಮಾರಮಹಾಸ್ವಾಮಿಗಳು

ಇವರ ದಿವ್ಯ ಸನ್ನಿಧಿಗೆ

ಭಕ್ತಿಪುರಸ್ಸರವಾಗಿ

ಅರ್ಪಿಸಿದೆ

೧೯೬೮

—

ನಮಃ ಶ್ರೀ ಗುರುಲಿಂಗ ಜಂಗಮೇಭ್ಯಃ

ಒಳಬಳ್ಳಾರಿ ತಾತ

# ಶ್ರೀ ಚನ್ನಬಸವ ಲೀಲಾಕಾವ್ಯ

"ಭಾಮಿನೀ ಷಟ್ಪದಿ"



ಕನಕಗಿರಿ ಲಿಂಗೈಕ್ಯ ಶ್ರೀ ಮ. ನಿ. ಪ್ರ ಚನ್ನಮಲ್ಲ ಮಹಾಸ್ವಾಮಿಗಳು
( ಶ್ರೀ ತಾತನವರ ಗುರುಗಳು )



ಪೂಜಾಲೋಲರಾಗಿ ಶ್ರೀ ತಾತನವರು

( ಶ್ರೀ ಮ. ನಿ. ಪ್ರ. ಚನ್ನಬಸವ ಮಹಾಸ್ವಾಮಿಗಳು )



ವಳಬಳ್ಳಾರಿ ಮಹಾತಪಸ್ವಿ ಶ್ರೀ ತಾತನವರಿಂದ ದಿವ್ಯಾನುಗ್ರಹ ಪಡೆದ
ಹಂಪೆ – ಹೇಮಕೂಟ ಸಿಂಹಾಸನಾಧೀಶ್ವರರಾದ

ಶ್ರೀ ಶ್ರೀ ಶ್ರೀ ಜಗದ್ಗುರು ಸಂಗನಬಸವ ಮಹಾಸ್ವಾಮಿಗಳು
ಜಗದ್ಗುರು ಕೊಟ್ಟೂರು ಸ್ವಾಮಿಗಳ ಸಂಸ್ಥಾನಮಠ
ಹೊಸಪೇಟೆ – ಬಳ್ಳಾರಿ – ಹಾಲಕೆರೆ



ಈಗಿನ ತ್ರಿವಿಧ ದಾಸೋಹಮೂರ್ತಿ ವಳಬಳ್ಳಾರಿ
ಶ್ರೀ ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು



ಅಡವಿ ಅಮರೇಶ್ವರ ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು



ನದಿಚಾಗಿಯ ಶ್ರೀ ಮ. ನಿ. ಪ್ರ. ತೋಂಟದಾರ್ಯ ಮಹಾಸ್ವಾಮಿಗಳು



ವಳಬಳ್ಳಾರಿ ಮಠದ ಮಹಾದ್ವಾರ



ಶ್ರೀ ತಾತನವರ ಗದ್ದುಗೆಯ ಒಳನೋಟ



ವಳಬಳ್ಳಾರಿ ಮಠದ ಹೊರನೋಟ



ಶ್ರೀ ತಾತನವರ ಗದ್ದುಗೆಯ ಹೊರನೋಟ



ವಳಬಳ್ಳಾರಿಯಲ್ಲಿನ ದಾಸೋಹ ಮಂಟಪದ ಹೊರನೋಟ



೧೧ನೇ ಸಂಧಿ, ಪುಟ ೧೩೪, ಅಡವಿ ಅಮರೇಶ್ವರದಲ್ಲಿ
ಶ್ರೀ ತಾತನವರಿಂದ ಲಿಂಗಪ್ರತಿಷ್ಠೆ



೧೩ನೇ ಸಂಧಿ, ಪ್ರಸಂಗ–೯, ಪುಟ ೧೮೯,
ಗೋರೇಬಾಳ್ಲಿನ ಶ್ರೀ ಶರಣಬಸವೇಶ್ವರ ದೇವಸ್ಥಾನ ಶ್ರೀ ತಾತನವರಿಂದ ಆದದ್ದು



ಪ್ರಸಂಗ ೧೪, ಪುಟ ೨೦೯,

ನಾಗರಹಾಳಲ್ಲಿ ಶ್ರೀ ದೊಡ್ಡಯ್ಯ

ಶಾಸ್ತ್ರಿಗಳ ಸನ್ಮಾನ.

ಶ್ರೀ ತಾತನವರ ದಿವ್ಯ ನೇತೃತ್ವದಲ್ಲಿ



೧೬ನೇ ಸಂಧಿ, ಪ್ರಸಂಗ ೭,

ಪುಟ ೧೭೫.

ನಾಗರಹಾಳಿನ

ನಾಗರೆಡ್ಡಿಯವರ ಗೃಹದಲ್ಲಿ

ಶ್ರೀ ತಾತನವರು



೨ನೇ ಸಂಧಿಯಲ್ಲಿ ತಾವನ್ಕೆಲ್ಲೂರಿನ ಪಟುಗಲ್ಲು ಬಸವ

೬ನೇ ಸಂಧಿಯಲ್ಲಿ (ಪುಟ ೫೪) ಶರಭ ಸಾಳ್ವಾವತಾರದ ದೃಶ್ಯ



೧೨ನೇ ಸಂಧಿ, ಪ್ರಸಂಗ ೧೦, ಪುಟ ೧೯೭
ಆಡವಿ ಅಮರೇಶ್ವರದಲ್ಲಿ ಕಲ್ಪಭಸ್ಮದ ನಿರ್ಮಾಣದಲ್ಲಿ
ಗೋಪೂಜೆ ಹಾಗು ಶ್ರೀ ತಾತನವರಿಂದ ಉದ್ಘಾಟನೆ



# ವಳಬಳ್ಳಾರಿಯಲ್ಲಿ ನಡೆದ ವಜ್ರಮಹೋತ್ಸವದ – ಪಟ್ಟಾಧಿಕಾರದ ಭಾವಚಿತ್ರಗಳು



ಶ್ರೀ ನಾಗಭೂಷಣ ಶಾಸ್ತ್ರಿಗಳು, ಶ್ರೀ ನಾ. ಮ. ಸಿದ್ಧರಾಮಯ್ಯನವರು,
ಶ್ರೀ ಬಿ. ಸಿ. ಜವಳಿಯವರು ಹಾಗೂ ಶ್ರೀ ಪ್ರೊ. ಭೂಸನೂರು ಮಠರವರು



ಪಟ್ಟಾಧಿಕಾರದ ಸಮಯದಲ್ಲಿ ಶ್ರೀ ತಾತನವರ ಜೊತೆಯಲ್ಲಿ
ನೂತನ ಶ್ರೀಗಳು ಹಾಗು ಹಾಲ್ವಿ ಶ್ರೀಗಳು



ವಜ್ರಮಹೋತ್ಸವದ ಮಹಾಸಭಾ ಮಂಟಪ



ಬಳಬಳ್ಳಾರಿ – ವಜ್ರಮಹೋತ್ಸವದಲ್ಲಿ

ಶ್ರೀ. ಪಂ|| ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು ಭಾಷಣ ಮಾಡುತ್ತಿರುವುದು




ವಜ್ರಮಹೋತ್ಸವದಲ್ಲಿ ಕವಿಗಳು ಭಾಷಣ ಮಾಡುತ್ತಿರುವುದು



ಹೊನ್ನಳ್ಳಿಯಿಂದ – ಒಳಬಳ್ಳಾರಿಗೆ ಬರುವ ಭಕ್ತರನ್ನು
ತುಂಗಭದ್ರಾ ನದಿಯಲ್ಲಿ ದಾಟಿಸುವ ಅಂಬಿಗ



ವಳಬಳ್ಳಾರಿ – ವಜ್ರಮಹೋತ್ಸವದಲ್ಲಿ
ತುಂಗಭದ್ರಾ ತೀರದಲ್ಲಿ – ದಾಸೋಹಕ್ಕೆ ನೆರೆದ ಭಕ್ತವೃಂದ



ಅಡ್ಡಪಾಲಕೋತ್ಸವದಲ್ಲಿ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು



ಅಡ್ಡಪಾಲಕೋತ್ಸವದಲ್ಲಿ ಶ್ರೀ ಶಾಂತಮಲ್ಲ ಮಹಾಸ್ವಾಮಿಗಳು



೧೨ನೇ ಸಂಧಿ, ಪ್ರಸಂಗ ೧೦, ಪುಟ ೯೪
ಜಗದ್ಗುರು ಶ್ರೀ ಸಂಗನಬಸವ ಮಹಾಸ್ವಾಮಿಗಳವರ ಪಟ್ಟಾಧಿಕಾರದಲ್ಲಿ
ಶ್ರೀ ತಾತನವರಿಂದ ದಿವ್ಯಾನುಗ್ರಹ ಪಡೆದಾಗ



೧೫ನೇ ಸಂಧಿ, ವಳಬಳ್ಳಾರಿಯ – ದಾಸೋಹ ಮಂಟಪದ ಉದ್ಘಾಟನಾ ಮಹೋತ್ಸವದಲ್ಲಿ
ಕವಿಗಳು ಭಾಷಣ ಮಾಡುತ್ತಿರುವುದು



## ಬಳ್ಳಾರಿಯಲ್ಲಿನ ಗಾಂಧಿನಗರದ
## ಶ್ರೀ ನಾ. ಮ. ಸಿದ್ಧರಾಮಯ್ಯನವರ ನೂತನ ಗೃಹಪ್ರವೇಶವಲ್ಲಿ
## ಶ್ರೀ ತಾತನವರು



ಶ್ರೀ ತಾತನವರ ಸನ್ನಿಧಿಯಲ್ಲಿ, ಪಂ|| ಶ್ರೀ ದೊಡ್ಡಯ್ಯ ಶಾಸ್ತ್ರಿಗಳ ಜೊತೆಯಲ್ಲಿ ಕವಿಗಳು



ಶ್ರೀ ತಾತನವರಿಗೆ ಕವಿಗಳು ಕಾಣಿಕೆ ಕೊಡುತ್ತಿರುವುದು



ಗೃಹದ ಮಹಾದ್ವಾರದಲ್ಲಿ ಶ್ರೀ ತಾತನವರ ಜೊತೆಯಲ್ಲಿ
ಶಾಸ್ತ್ರಿಗಳು, ಕವಿಗಳು, ಚಿ|| ಸೋಮನಾಥ



ಶ್ರೀ ತಾತನವರನ್ನು ಬೀಳ್ಕೊಡುವ ಸಮಯದಲ್ಲಿ

## ಶಿವಕವಿ - ಪಂಡಿತ ಶ್ರೀ ನಾ. ಮ. ಸಿದ್ಧರಾಮಯ್ಯನವರು ಮಾಡಿದ ಧಾರ್ಮಿಕ ಸೇವೆಯ ಬಗ್ಗೆ ವಿಹಂಗಮ ನೋಟ



ಬಳ್ಳಾರಿಯಲ್ಲಿನ ರಾಘವ ಕಲಾ ಮಂದಿರದಲ್ಲಿ ನಡೆದ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ
ಶ್ರೀ ನಾ. ಮ. ಸಿದ್ಧರಾಮಯ್ಯನವರು



ಹೊಸಪೇಟೆಯಲ್ಲಿನ ಕೊಟ್ಟೂರು ಸ್ವಾಮಿಗಳ ಮಠದಲ್ಲಿ ಕವಿಗಳು
ಧಾರವಾಡದ ಶ್ರೀ ಮಹಾಂತ ಶಿವಯೋಗಿಗಳ ಸನ್ನಿಧಾನದಲ್ಲಿ ಕೊಟ್ಟೂರು ಜಗದ್ಗುರುಗಳು)



ಜಗದ್ಗುರು ಕೊಟ್ಟೂರು ಸ್ವಾಮಿಗಳ ಪಟ್ಟಾಧಿಕಾರದ ಸಮಯದಲ್ಲಿ
ಕವಿಗಳು ಭಾಷಣ ಮಾಡುತ್ತಿರುವುದು



ಪಂ|| ಶ್ರೀ ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು
ಬಳ್ಳಾರಿ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಷಣ ಮಾಡುತ್ತಿರುವುದು



ಹೊಸಪೇಟೆಯಲ್ಲಿ ನಡೆದ ಧಾರ್ಮಿಕ ಕಾರ್ಯದಲ್ಲಿ
ನವಕಲ್ಯಾಣ ಮಠದ ಶ್ರೀ ಕುಮಾರಸ್ವಾಮಿಗಳ ಜೊತೆಯಲ್ಲಿ ಕವಿಗಳು



ಬೆಂಗಳೂರಿನ ಮಹಂತಿನ ಮಠದಲ್ಲಿ
ಶ್ರೀ ರಂಭಾಪುರಿ ಜಗದ್ಗುರುಗಳ ಸನ್ನಿಧಿಯಲ್ಲಿ – ಕವಿಗಳು



ಹೊಸಪೇಟೆಯಲ್ಲಿ ಜಗದ್ಗುರು ಕೊಟ್ಟೂರು ಶ್ರೀಗಳ ಪಟ್ಟಾಧಿಕಾರ ಮಹೋತ್ಸವದಲ್ಲಿ
ಶ್ರೀ ಪಂ॥ ದೊಡ್ಡಯ್ಯ ಶಾಸ್ತ್ರಿಗಳು ಭಾಷಣ ಮಾಡುತ್ತಿರುವುದು



ಸಿರುಗುಪ್ಪೆಯಲ್ಲಿ ಶ್ರೀಶೈಲ ಜಗದ್ಗುರುಗಳ ಸನ್ನಿಧಿಯಲ್ಲಿ ಕವಿಗಳು



ಮಹಾಬಲಿಪುರದ ಕಡಲ ತೀರದಲ್ಲಿ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು



ಹೊಸಪೇಟೆ ಕೊಟ್ಟೂರು ಸ್ವಾಮಿಯ ಮಠಕ್ಕೆ
ಮರಿದೇವರನ್ನು ಆರಿಸುವ ಬಗ್ಗೆ ನಡೆದ ಸಭೆಯಲ್ಲಿ ಕವಿಗಳು



ರಾಷ್ಟ್ರಕವಿ ಕುವೆಂಪು ರವರ ಜೊತೆಯಲ್ಲಿ

ಕವಿಗಳು ಹಾಗೂ ಚಿರಂಜೀವಿ ಸೋಮನಾಥ



ಅಡವಿ ಅಮರೇಶ್ವರನ ಗುಡಿಗೋಪುರದ ಮುಂಭಾಗದಲ್ಲಿ
ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾಸ್ವಾಮಿಗಳು – ಅಡವಿ ಅಮರೇಶ್ವರ ಸುಕ್ಷೇತ್ರ



ವಿ ಶ್ರೀ ನಾ. ಮ. ಸಿದ್ಧರಾಮಯ್ಯನವರ – ಬಳ್ಳಾರಿಯಲ್ಲಿನ ವೀರಭದ್ರೇಶ್ವರ ನಿಲಯದಲ್ಲಿ
ಧಾರವಾಡದ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳ ದಿವ್ಯಸನ್ನಿಧಿಯಲ್ಲಿ
ಕುಟುಂಬದವರು ಮತ್ತು ಬಂಧು – ಮಿತ್ರಾದಿಗಳು.



ಶ್ರೀ ಅಡವಿ ಅಮರೇಶ್ವರ – ದಿವ್ಯಕ್ಷೇತ್ರ



ಅಡವಿ ಅಮರೇಶ್ವರದಲ್ಲಿ ಡಾ|| ಶ್ರೀ ಸಿದ್ಧಯ್ಯ ಪುರಾಣಿಕರು – ಬೆಂಗಳೂರು ಇವರಿಗೆ ಶ್ರೀ ತಾತನವರ ದಿವ್ಯ ನೇತೃತ್ವದಲ್ಲಿ ಘನ ಸನ್ಮಾನ



ಅಡವಿ ಅಮರೇಶ್ವರ ಕ್ಷೇತ್ರದಲ್ಲಿ ರಥೋತ್ಸವ



ಕವಿ ಶ್ರೀ ಸಿದ್ಧರಾಮಯ್ಯನವರ ವೀರಭದ್ರೇಶ್ವರ ನಿಲಯದಲ್ಲಿ (ಬಳ್ಳಾರಿಯಲ್ಲಿನ)
ಪೂಜ್ಯ ಶ್ರೀ ಮ. ನಿ. ಪ್ರ. ಮಹಾಂತ ಸ್ವಾಮಿಗಳು ಧಾರವಾಡ–
ಪೂಜ್ಯ ಶ್ರೀ ಮ. ನಿ. ಪ್ರ. ನೀಲಕಂಠ ಮಹಾಸ್ವಾಮಿಗಳು ಗುಬ್ಬಿ – ಗುಳೇದಗುಡ್ಡ

ನಮಃ ಶ್ರೀ ಗುರುಲಿಂಗ ಜಂಗಮೇಭ್ಯಃ

ಒಳಬಳ್ಳಾರಿ ತಾತ

# ಶ್ರೀ ಚನ್ನಬಸವ ಲೀಲಾ ಕಾವ್ಯ

## "ಭಾ ಮಿ ನೀ ಷ ಟ್ಪ ದಿ"

## ಮಂಗಲಾಚರಣೆ (ಪೀಠಿಕಾ ಸಂಧಿ)

೧

ವೀರಗಣಗಳವೊಡೆಯನಾಗಿಹ
ಭೂರಿ ಗಣಪನ ಸಿದ್ಧಿ ಕೃಪೆಯೊಳು
ಮಾರ ಹರ ಕರುಣೋದಯದಿತಾ ಕಾವ್ಯ ರಚಿಸುವನೂ
ಚಾರು ಶ್ರೀಗುರುರೇಣುಕಾರ್ಯರ
ವೀರ ಶ್ರೀಗುರು ವೀರಭದ್ರನ
ಧೀರಕವಿ ಶ್ರೀ ಸಿದ್ಧರಾಮೇಶ್ವರನುನುತಿಸುವನೂ

೨

ಹೆತ್ತ ತಾಯಿಗೆ ಮಿಗಿಲುಯೆನಿಸಿಹ
ಹೊತ್ತುಕೊಂಡಿಹ ಭೂಮಿತಾಯಿಯ
ಚಿತ್ತದೊಲವಿನ ಬಾಳು ಸಾರ್ಥಕವಾಗಿ ಜಗದೊಳಗೇ
ಎತ್ತಿ ಬೆಳೆಸುವ ಆದಿಮಾತೆಯು
ಮುತ್ತಿನಂತಹ ಮಾತು ಕಲಿಸು
ಮತ್ತೆ ಮರೆಯಲು ಬಹುದೆ ಯೀಜಗದಮ್ಮ ವಿಶ್ವದೊಳೂ

೩

ದೊಡ್ಡ ಕವಿತಾಶಕ್ತಿ ಪಡೆದಿಹ
ದೊಡ್ಡ ಶರಣರು ಆಗಿ ಬೆಳೆದಿಹ
ದೊಡ್ಡ ಗುರು ದೊಡ್ಡಾರ್ಯರಾಗಿಹ ನನ್ನ ಪಡೆದಪ್ಪಾ
ದೊಡ್ಡ ಗುಣ ಪಡೆದಂಥ ಧೀರರು
ದೊಡ್ಡ ವೈದಿಕ ಶಾಸ್ತ್ರ ಕೋವಿದ
ದೊಡ್ಡ ದೇವರ ಹಂಪೆಯಾಳ್ದನ ಕೃಪೆಯ ಕವಿ ಕಂದಾ

೪

ಏನು ಹೇಳುವೆ ಎಂತು ಬರೆಯುವೆ
ನೀನು ಶ್ರೀ ತಾತನ ಚರಿತ್ರವ
ಬಾನಿನೆತ್ತರ ಬೆಳೆದ ಒಳಬಳ್ಳಾರಿ ತಾತನನಾ
ಭಾನು ತೇಜದ ವೀರ ವಿರತನು
ತಾನೆ ಒಡೆಯನು ಚನ್ನ ಬಸವನು
ಜ್ಞಾನನಿಧಿತಾ ಕನಕಗಿರಿ ಶ್ರೀವಿರತ ಮಠದೊಡೆಯಾ

೫

ಪೂತ ಚಿನ್ಮಯ ಗಾತ್ರನಾಗಿಹ
ತಾತ ನಾ ಶ್ರೀ ಚನ್ನಬಸವನು
ಮಾತು ಮನದಾಚೆಯಲಿಯಿರುವಾ ಪರಮ ಶಿವಯೋಗೀ
ತಾತನೊಲುಮೆಯ ದಿವ್ಯ ಚರಿತೆಯ
ತಾತಕೃಪೆಯಲಿ ಕಾವ್ಯ ರಚಿಸುವೆ
ಓತು ಏಂದಲಿ ರಚಿಸಿ ಹಾಡುವೆ ಭಕ್ತಿಭಾವದೊಳೂ

೬

ರಾಜ ಮಹರಾಜರ ಚರಿತ್ರವ
ರಾಜ ವಿಭವದಿ ಬರೆಯುಬಹುದು
ರಾಜ ಋಷಿಗಳು ಬರೆದ ಕಥನವ ಮತ್ತೆ ಬರೆದಿಹರೂ
ಭೋಜರಾಜನ ಕಾಳಿದಾಸನು
ರಾಜ ಅರಿಕೇಸರಿಯ ಪಂಪನು
ರಾಜಭೋಗದಿ ರಾಜಯೋಗವ ತಿಳಿಸಿ ಕೃತಿಗಳಲೀ

೭

ಅರ್ಥದಾಶೆಗೆ ಕಾವ್ಯಬರೆಯದೆ
ಆರ್ಥಕಾಮದಿ ತನುವ ಮಾರದೆ
ವ್ಯರ್ಥಗೊಳಿಸದೆ ಜನ್ಮ ಸಾರ್ಥಕದಮರ ಕೃತಿಗಳಲೀ
ಅರ್ಥ ಪದಗಳು ಬೇರೆಯಾಗದೆ
ಅರ್ಥ ಪದಗಳು ಕೂಡಿಕೊಂಡಿಹ
ದರ್ಥ ಪದಗಳ ಸಾರ್ಥಕತೆಯನು ಸಾಂಬನಲಿ ಕಂಡೂ

೮

ಪರಮ ರಸಿಕದ ಚಕ್ರಿ ಹರಿಹರ
ವರ ಮಹಾಕವಿ ರಾಘವಾಂಕನ
ವರ ಷಡಕ್ಷರಿ ಕವಿಗಳೆಲ್ಲರ ಭಜಿಸಿ ಭಕ್ತಿಯಲೀ
ಹರಿವ ಮನವನು ನಿಲಿಸುವಂಥಹ
ಬೆರೆತು ಶಿವಯೋಗದೊಳು ಕೂಡುವ
ಪರಮ ತತ್ವವ ತಿಳಿಸುವಂಥಹ ಕೃತಿಗಳೇ ಧನ್ಯಾ

೯

ಎನ್ನ ಬುದ್ಧಿಗೆ ಹೊಳೆದ ಪರಿಯಲಿ
ಎನ್ನ ಹೃದಯದಲಿರಿಸಿಕೊಳ್ಳುತ
ಚನ್ನ ಬಸವನ ದಿವ್ಯಲೀಲೆಯ ಕಾವ್ಯದೊಳು ಹಾಡೀ
ಮುನ್ನಿನಾ ಶರಣರನು ನೆನೆಯುತ
ಬನ್ನದಿಂದಲಿ ಬೆಂದ ಜೀವರಿ
ಗಿನ್ನು ಕರುಣಿಸು ಶಾಂತಿ ಸುಖಗಳಯೆಂದು ಬೇಡುವೆನೂ

೧೦

ಬೇಡಿದರೆ ಸದು ಭಕ್ತಿ ಕೇಳುವ
ನೀಡಿದರೆ ನೆನಪಿರದೆಯಿರುವಾ
ರೂಢಿಯೊಳಗುತ್ತಮದ ಮನವನು ಕರುಣಿಸೆನಗೆಂದೂ
ಜೋಡು ಕೈಗಳು ಮುಗಿದು ಮೃಡನಿಗೆ
ಹಾಡಿ ಹೊಗಳುತ ಭಕ್ತಿ ಭಾವದಿ
ಕೂಡಿ ನಲಿಯುತ ಯೆನ್ನ ಆತ್ಮಾನಂದದಲಿ ಸುಖಿಸೀ

೧೧

ಹರನ ರೂಪದ ಚನ್ನಬಸವರು
ಹಿರಿಯ ಶಿವಕಳೆಯಿಂದ ಶೋಭಿಸಿ
ತಿರೆಯ ಕೆಲಸವ ಮುಗಿಸಿ ಪರಮನ ಕೂಡಿಕೊಂಡಿಹನೂ
ಚರವರೇಣ್ಯರ ಪೂರ್ಣ ಚರಿತೆಯು
ಧರೆಯ ಜನಗಳು ತಿಳಿದು ಶಾಂತಿಯು
ಪರಮ ಕೃಪೆಯಲಿ ಪಡೆಯಲೆಂದೀಕಾವ್ಯ ರೂಪಕವೂ

ಪೀಠಿಕಾಸಂಧಿ ಸಂಪೂರ್ಣಂ

ಅಂತುಸಂಧಿ ೧ ಕ್ಕಂ ಪದ ೧೧ ಕ್ಕಂ ಮಂಗಳಂ

# ಎರಡನೆಯ ಸಂಧಿ

**ಸೂಚನೆ :–**

**ಇಳೆಯ ಜನರುದ್ಧಾರಕಾಗಿಯೇ**
**ಇಳೆಯೊಳುದಯಿಸಿದೋರ್ವಗಣವರ**
**ತಳೆದು ಷಟುಗಲ್ಲಯ್ಯ ರೂಪದಿ ಶಿವನ ಆಜ್ಞೆಯೊಳೂ**

೧

ಗುರುಲಿಂಗ ಜಂಗಮದ ಪೂಜೆಯ
ಪರಿವಿಭೂತಿಯ ರುದ್ರನೇತ್ರದಿ
ವರಷಡಕ್ಷರ ಮಂತ್ರದಿಂದಲೆ ಪೂಜೆ ಸಾಧನೆಯೋಳ್
ಪರಮ ಪಾದೋದಕ ಪ್ರಸಾದವ
ಹರನ ಯೋಗದಿ ಪಡೆದುಕೊಳುತಲಿ
ಪರಮದಷ್ಟಾವರಣವೇ ಅಂಗವಾಗಿರುತಾ

೨

ಪಂಚ ಆಚಾರಗಳು ಬಿಡದಲೆ
ಪಂಚ ಪ್ರಾಣದಿ ನೋಡಿಕೊಳುತಲಿ
ಪಂಚ ಇಂದ್ರಿಯ ಸುಖವನಳಿಸಿಯೆ ಲಿಂಗಗುಣ ಬೆಳಸೀ
ಪಂಚಕ್ಲೇಶಗಳನ್ನು ಕಳೆಯುತ
ಪಂಚಭೂತಗಳೊಡೆಯ ಕೃಪೆಯುಲಿ
ಹಂಚಿನಲಿ ಹುರಿದಾಶೆ ಬೀಜಗಳೆಲ್ಲ ಜಗದೊಳಗೇ

೩

ಮೂರು ಮಲಗಳನಳಿಸಿ ತನ್ನಲಿ
ಮೂರು ಲಿಂಗಗಳನ್ನು ನಿಲಿಸುತ
ಮೂರು ಲಿಂಗಗಳಿಷ್ಟು ಪ್ರಾಣಾಭಾವ ಪೂಜೆಯೊಳೂ
ಆರು ಸ್ಥಲಗಳು ಆತ್ಮವಾಗಿ
ಚಾರು ತರವಾಗಿರುವ ಷಟ್‌ಸ್ಥಲ
ಮೀರಿನಿಂತಿಹ ವೀರಶೈವರ ಭಕ್ತಿಯೋಗದೊಳೂ

೪

ಬೀದಿ ದೀಪಗಳಂತೆ ಹೊಳೆಯುವ
ಮೋದಗೊಳಿಸುವ ದುಂಡು ಮುಖಗಳು
ಬೀದಿಯಲಿ ಸಾಲಾಗಿಹೋಗುವ ರುದ್ರಕನ್ಯೆಯರೂ
ವೇದ ಘೋಷವ ಮಾಡ್ವ ಋಷಿಗಳು
ನಾದದಲಿ ಕಿನ್ನರರು ನಲಿವರು
ಊದಿ ನಡೆದರು ಕೊಂಬು ಕಹಳೆಗಳಿಂದ ಗಣವರರೂ

೫

ತಳಿರು ತೋರಣ ಹೂವಿನಂದರ
ಬೆಳೆದು ಹಬ್ಬಿದ ಸುರಲತೆಗಳಾ
ನಲಿವಿನಂದದಿ ತಬ್ಬಿಕೊಂಡವೂ ಸುರತರುಗಳೆಲ್ಲಾ
ಬೆಳಗುವಾರತಿ ಹಿಡಿದು ನಡೆಯುವ
ನಳಿನ ಮುಖಿಗೆರಗುತ್ತ ಬರುವಾ
ಅಳಿಗಳಾ ಸಂಕುಳಕೆ ಆಯಿತು ಭ್ರಮರನಿರಶನವೂ

೬

ಚಲುವಿನಿಂ ರಾಜಿಸಿತು ಶಿವಪೂರ
ಚಲುವಿನಿಂ ಕೂಡಿಹರು ದಿವಿಜರು
ಚಲುವಿನಿಂ ಕೈಮುಗಿದು ನಿಂತಿಹ ರುದ್ರಗಣವರರೂ
ಹಲವು ಗಣವರರಿಷ್ಟದಂತೆಯೆ
ಒಲಿದು ಸಾಂಬನು ಕೃಪೆಯಗೈಯುತ
ಬಳಿಕ ಗಣನೋರ್ವನನು ಕಳುಹಿದ ಲೋಕ ಮೋಕ್ಷತೆಗೇ

೭

ಇಳೆಯೊಳುದಯಿಸುವಂಥ ಗಣವರ
ಒಳಿತು ಮಾಡಲು ಬರುವ ಗುರುವರ
ತೊಳಗಿ ಬೆಳಗುವ ಪರಮ ತಪದೊಳು ವೀರಶಿವಯೋಗೀ
ನಿಲುಕಡೆಯುಯಿಲ್ಲದಲೆ ವಾರಿಧಿ
ಸೆಳೆದು ತೆರೆಗಳು ಯೇರಿಯುಳಿದವು
ಫಲವು ರತ್ನಗಳನ್ನುಯಿಯಾಯುಲು ಚರವರೇಣ್ಯನಿಗೇ

೮

ಸುರರು ಅಸುರರಿಗಿರುವ ಆಶೆಯು
ವಿರತ ಯೋಗಿಗೆ ವೃಂಟೆ ಜಗದೊಳು
ಪರಮ ತಪಸಿನ ಮೂರ್ತಿಯಾದಾವರ ತಪೋಧನರೂ
ಪರಮ ರತ್ನಗಳೀವ ವನಧಿಯ
ಗುರುತರದ ಕಾಣಿಕೆಗೆ ಮಣಿಯದ
ಗುರುವಿನಾ ಗಾಂಭೀರ್ಯನೋಡಿ ಸಮುದ್ರ ಮುದ್ರೆಯೊಳೂ

೯

ಶ್ರೀರಜತಗಿರಿಯಂತೆ ಶೋಭಿಪ
ವೀರಚರಿತೆಯ ರಾಯಚೂರಿನ
ವೀರ ತಾಲೂಕಾದ ಮಾನ್ವಿಯ ಪಾವನ್ಕಲ್ಲೂರೂ
ಧಾರುಣಿಯೊಳತಿ ಪಾವನಾಗಿಪ
ಚಾರು ಶ್ರೀವಟುಗಲ್ಲು ಬಸವನು
ಚಾರು ಶೈಲಾಗ್ರದಲಿ ಮೆರೆದನು ನಂದಿರೂಪದೊಳೂ

೧೦

ಕಾರಣಿಕ ವಟುಗಲ್ಲು ಬಸವನ
ಪಾರಮಹಿಮಾ ರೂಪಘನದೊಳು
ಮಾರ ಹರಕೃಪೆಯಿಂದ ಕೂಡಿದ ಗಣವರನೆ ಧನ್ಯಾ
ಭೂರಿ ಸನ್ನಾಹದೊಳು ಬಂದಾ
ಆರು ಋತುಗಳ ರಾಜನೆನಿಸಿದ
ಚಾರು ರೂಪದೊಸಂತ ಬಂದನು ರಮ್ಯಭೂತಲಕೇ

೧೧

ವಿವಿಧ ಗಿಡಗಳು ಹೂವು ಬಿಟ್ಟವು
ವಿವಿಧ ಪುಷ್ಪಗಳರಳಿ ನಿಂತವು
ವಿವಿಧ ರಾಗದಿ ಹಾಡಿ ಕೋಗಿಲೆ ಮಧುರ ಕಂಠದೊಳೂ
ಬುವಿಯ ಜೀವಿಗಳೆಲ್ಲ ನಲಿವರು
ಭವದ ದುಃಖದ ತಾಪ ಮರೆಯಲು
ತವಕದಲಿ ಕೋಲ್ಮಿಂಚಿನಾಸುಖಕೆಳಸಿ ಯಿಳೆಯೊಳಗೇ

೧೨

ಭವದ ಬಂಧನದಿಂದ ಕೂಡಿದ
ಸವಿನಯದ ಸಂಸಾರದಿಂದಲಿ
ಸುವಿಮಲದ ದಂಪತಿಗಳಾ ವೀರಮ್ಮ ಬಸವಯ್ಯಾ
ಅವರು ಮಕ್ಕಳ ಭಾಗ್ಯಕಾಗಿಯೆ
ಬುವಿಯು ಪಟಗಲು ಬಸವಪೂಜೆಯು
ಅವಿಕಲಾನಂದದಲಿ ಮಾಡುತ ಕೂಡಿಸಲಿವಿನಲೀ

೧೩

ಬುವಿಯು ಪಟಗಲು ಬಸವನಿಂದಲಿ
ಶಿವನ ಕರುಣೋದಯದ ತೇಜವೂ
ತವಕದಲಿ ಕೂಡಿತ್ತು ತಾವೀರಮ್ಮ ಗರ್ಭದೊಳೂ
ಭವದ ದುಃಖವ ಕಳೆವಗಣವರ
ಅವನಿಯೊಳು ಖ್ಯಾತಿಯನು ಪಡೆಯುವ
ಶಿವರಹಸ್ಯದಿ ಪುಣ್ಯಗರ್ಭವ ತಾನು ಧರಿಸಿಹಳೂ

೧೪

ವೀರಮಾತೆಯು ಸುಕೃತ ಗರ್ಭದಿ
ವೀರಶ್ರೀ ಗುರು ಪಿಂಡ ಬೆಳೆದುದು
ವೀರ ಷಡಕ್ಷರ ಮಂತ್ರ ಪಠಿಸುತ ಗುಪ್ತಭಕ್ತಿಯೊಳೂ
ಭಾರಿಗರ್ಭದ ಗುರುವುಪಿಂಡವು
ಸಾರಿ ಸಾರಿಗು ಓದಿಕೊಳ್ಳುವ
ವೀರಜನನಿಯುದ್ವಾರ ಶಿವಕಥೆ ಕೇಳಿಸುಖಿಸುತಲೀ

೧೫

ಹಿರಿಹಿಗ್ಗಿದಾ ಬಸವಯ್ಯ ತಾ
ಪರನ ಕರುಣೋದಯದಿ ನಲಿದನು
ಸರಳ ನಡತೆಯು ತನ್ನ ಮಡದಿಯು ಗರ್ಭತಾ ಕಂಡೂ
ಸರಸರನೆ ಶ್ರೀಮಂತ ಕಾರ್ಯವ
ವರಭಕ್ತರೊಡಗೂಡಿ ಮಾಡುವ
ಭರದಿ ಕಾರ್ಯವ ಸಜ್ಜುಗೊಳಿಸಿದ ತನ್ನ ಮಠದೊಳಗೇ

೧೬

ಕನಕ ಜರೆ ಪೀತಾಂಬರುಡಿಸಿಯೆ
ಕನಕಗಿರಿ ತೇಜದೊಳು ಹೊಳೆವಾ
ಕನಕ ಬಣ್ಣದ ವೀರಮಾತೆಯು ತೊಳಗಿ ಬೆಳಗುತಲೀ
ಕನಕಗಿರಿ ಗುರುಕೃಪೆಯ ಪಡೆಯುವ
ಅನುಪಮದ ಮಹತೇಜ ಪಿಂಡವ
ಅನುನಯದಿ ಹೊತ್ತಿರುವ ವಕ್ಷಸ್ಥಳವೂ ತಾವುಬ್ಬೀ

೧೭

ಸರಳ ಸಂಭ್ರಮ ದಿವ್ಯಮನದಲಿ
ಸರಳ ಮುತ್ತೈದೆಯರು ಕೂಡಿಯೇ
ಹರಸಿ ವುಡಿಯನು ತುಂಬಿ ಸೀಸೆಯನಿಟ್ಟು ಬೆಳಗಿದರೂ
ವರಗಣಾರಾಧನೆಯ ಮಾಡುವ
ಪುರದ ಭಕ್ತಾದಿಗಳ ಸೇವೆಗೆ
ಹರಗುರು ಚರಮೂರ್ತಿ ಪುಂಗವರೆಲ್ಲ ತಾವ್ ತಣಿದೂ

೧೮

ಎಳೆಯ ಮಾವಿನ ಕಾಯಿ ತಿನ್ನದೆ
ಇಳಿಯ ಮಣ್ಣಿನ ಹರಳು ಮುಕ್ಕದೆ
ಹೊಳೆವ ಮೃಡ ಮೈಬೆಳಗು ಆದ ವಿಭೂತಿತಾ ಸವಿದೂ
ಇಳೆಯ ಸ್ತ್ರೀಯರ ಸಹಜ ಬಯಕೆಯ
ನಳಿಸಿ ರುಚಿಗಳಿಗೆಳಸದಾಕೆಯು
ಬೆಳೆವ ಪಿಂಡಕೆ ಪೊಗ್ಗಿದೂಟವ ತಾನು ಮಾಡುತಲೀ

೧೯

ಮಂದಗಜಗಮನದಲಿ ನಡೆಯುತ
ಒಂದು ಸಮತೂಕದಲಿಯಿರುತಲಿ
ಮುಂದೆ ಬರುವ ವಿಭೂತಿ ಪುರುಷನ ಸಮತೆಯೋಗದೊಳೂ
ಮುಂದೆ ಅಳಿಸುವ ಮೂರು ಮಲಗಳ
ನಿಂದು ಸೂಚಿಸಿ ವಳಿತ್ರಯದಲಿ
ಚಂದದೊಳು ತಾ ಹೊತ್ತಗರ್ಭವು ಹಿಗ್ಗಿ ಹಿರಿದಾಗೀ

೨೦

ತೋರಕುಚಗಳ ಭಾರದಿಂದಲಿ
ಕ್ಷೀರಧಾರೆಯ ಝುರಿಗಳೊಂದದಿ
ವೀರ ಮಾತೆಯು ತಾಯಿಯಾಗುವ ಸೂಚನೆಗಳಾಗೀ
ಚಾರು ಶಿವಯೋಗಮೃತ ಕುಡಿಯುವ
ಕಾರಣಿಕ ಶಿಶು ಹಾಲು ಕುಡಿಯದೆ
ಮೀರಿನಿಲ್ಲುವನೆಂದು ಕುಚಗಳ ಮುಖವೂ ಕಪ್ಪಿಟ್ಟೊ

೨೧

ತಮ್ಮ ಮುಖ ಕಾಂತಿಯನು ನೋಡುವ
ಬೊಮ್ಮ ಸೃಜಿಸಿದ ಕೈಯಗನ್ನಡಿ
ಅಮ್ಮ ಕಂಡಳು ಪೂರ್ಣಚಂದ್ರನ ತಂಪು ಬೆಳಕಿನೊಳೂ
ತಮ್ಮ ಮಠದಂಗಳದೊಳಿರುತಲಿ
ತಮ್ಮ ಹೂದೋಟದಲಿ ಚಲ್ಲಿದ
ಒಮ್ಮನದಿ ಸುಖಿಸುತ್ತ ತಾನಾ ಚಂದ್ರ ಬೆಳಕಿನೊಳೂ

೨೨

ಹಿಂದಿನಿಂದಲಿ ಬಂದ ಪತಿಯಾ
ನಂದದಿಂದಲಿ ಯಿರುವಸತಿಯಳ
ಚಂದದಿಂದಲಿ ಅರಳಿನಿಂತಿಹ ಚಂದ್ರಮುಖ ಕಂಡೂ
ಬಂದ ಪತಿಗಮನವನು ಕಂಡಾ
ಅಂದ ಮುಖವನು ನಾಚಿ ತಗ್ಗಿಸಿ
ಚಂದ ಕರಕಮಲಗಳ ಯುಗಳದಿ ಮುಚ್ಚಿಕೊಳ್ಳುತಲೀ

೨೩

ಮುಚ್ಚಿದಾ ಕರಕಮಲ ಸರಿಸುತ
ಮೆಚ್ಚಿ ನೋಡಿದ ಚಂದ್ರ ಮುಖವನು
ನಿಚ್ಚಳದಿ ಹೊಳೆಯುತ್ತಲಿರುವಾ ಚಂದ್ರ ಪ್ರತಿಬಿಂಬಾ
ಬೆಚ್ಚನಾ ಕೈಗಳನು ಹಿಡಿಯುತ
ಬೆಚ್ಚನಾ ಮನೆಯೊಳಗೆ ನಡೆಸುತ
ಬೆಚ್ಚಗಿನ ಶಾಲನ್ನು ಹೊದಿಸುತ ನಿದ್ರೆ ಮಾಡಿಸುತಾ

೨೪

ಸತಿಪತಿಗಳಪ್ರತಿಮ ಭಕ್ತಿಯು
ಹಿತವುಯೆನಿಸಿದ ಶಿವನ ಮೆಚ್ಚುಗೆ
ಸುತನು ಪಡೆವಾಬಯಕೆ ಸ್ವಪ್ನದಿ ಕಂಡು ನಿದ್ರೆಯೊಳೂ
ಅತಿಶಯದ ಆನಂದದಿಂದಲಿ
ಸತಿಸಾಧ್ವಿ ವೀರಮ್ಮ ಜಾಗ್ರುದಿ
ಪತಿಗೆ ತಿಳಿಸುತ ಸುತನು ಪಡೆಯುವ ಭಾಗ್ಯಬೆಳಕಾಗೀ

೨೫

ಬೆಳಗು ಜಾವದಿ ಕಂಡ ಕನಸದು
ಇಳೆಯೊಳಗೆ ಋತು ಸತ್ಯವಾಗುವ
ಸುಳುಹಿನಿಂ ಚಿತ್ರಭೆಯೊಳುದಯದ ರವಿಯು ತಾಸಾಕ್ಷೀ
ನಳಿನ ಮುಖಿಗರು ಹಿದನು ತತ್ವದ
ಒಳ ತಿರುಳ ಜ್ಞಾನವನು ನೀಡುತ
ಹೊಳೆವ ಹೊಂಗಿರಣಗಳ ಕಂದನ ಬಯಸಿದಾಪತಿಯೂ

೨೬

ಹೀಗಿರುತ್ತಿರಲೊಂದು ದಿನ ತಾ
ಮಾಗಿ ಬಿಸಿಲನು ಕಾಸಿ ಕುಳಿತಿಹ
ಮಾಗಿ ಮನಸಿನ ವೀರಮಾಂಬೆಯು ಸತಿಯು ಬಳಿ ಬಂದೂ
ತಾಗಿ ಕುಳಿತನು ಸನಿಹದಲ್ಲಿಯೆ
ಭೋಗಿ ಪಬ್ಬಕೆ ಹಂಪೆಗೋಗಲು
ಯೋಗಮನದಲಿ ವೊಪ್ಪಿದಾ ಬಸವಯ್ಯ ಸತಿಗೂಡೀ

೨೭

ಮರುದಿನ ತಾವ್ ಹಂಪೆಗೋದರು
ಹರುಷದಿಂದಲಿ ಕ್ಷೇತ್ರನೋಡುತ
ಹರುಷಗೊಡುವಾ ಗಂಡು ಮೆಟ್ಟಿನ ಪುಣ್ಯಕ್ಷೇತ್ರವದೂ
ಹರವರಿದ ಕರುನಾಡದೇಶದ
ಸಿರಿಸೊಬಗು ತರುಲತೆಗಳೆಲ್ಲವೂ
ಥರತರಧ ಅತಿಮಧುರ ಫಲಗಳ ತುಂಬಿ ಬೀಗುತಲೀ

೨೮

ನವಪರಾಗದಿ ಘಮಿಸುವಂತಹ
ವಿವಿಧ ಜಾತಿಯ ಪತ್ರೆಸುಮಗಳು
ಅವನಿಯೊಳು ಉದ್ಯಾನವನವದು ಶೋಭಿಸಿಯೆ ಜಗದೀ
ಬುವಿಯ ಬಾನ್ ಹಕ್ಕಿಗಳ ಕಲರವ
ಸುವಿಮಲದ ಸರಸಿನೊಳುಯಿರುವಾ
ನವನವೀನದ ಜಲಕ್ರೀಡೆಯನಾಡ್ವಹಂಸಗಳೂ

೨೯

ಮಾಮರದ ಯೆಳೆಚಿಗುರು ತಿನ್ನುವ
ಮಾಮರದ ಫಲರಸವ ಕುಡಿಯುುವ
ಕೋಮಲದ ಕೋಗಿಲೆಗಳಾ ಮಧುಪಾನದಿಂ ಕೂಡೀ
ರಾಮ ಗಿಳಿಗಳು ಗುಟುಕು ಕೊಡುವಾ
ಕಾಮದೇರನು ಯೆಳೆವ ಗಿಳಿಗಳು
ಹೇಮ ಕೊಟದಿ ಕೂಡಿ ಭವ್ಯದ ಪ್ರೇಮ ದೇವರೊಳೂ

೩೦

ಚೆಲುವ ಕರುನಾಡಿನೊಳು ತುಂಬಿದ
ಹಲವು ಬಗೆಯಾ ಲೋಹಕಡವರ
ಹಲವು ಜಲಸಂಪತ್ತಿನೊಳುತಾ ತೊಳಗಿ ಬೆಳಗುವವೂ
ಮಲೆಯ ಸಿರಿಸೊಬಗಿನೊಳು ಮೆರೆಯುುವ
ಕಲಕಂಠ ಕಲಹಂಸ ನಲಿಯುುವ
ಚೆಲುವ ಸಿರಿಗನ್ನಡದ ನಾಡಿನೊಳಿರುವ ಜನಧನ್ಯಾ

೩೧

ರಸ ಋಷಿಗಳಿದ್ದಂಥ ನಾಡಿದು
ಜಸವಡೆದ ವರಕವಿಗಳುರುವೀ
ವಸುಧೆಯದು ಸ್ವರ್ಗವದು ಯೆನಿಸಿಹ ಶರಣ ಧರ್ಮದೊಳೂ
ಅಶನವಶನಕ್ಕೆಂದು ಕೊರತೆಯು
ವಸುಮತಿಯೊಳಿರದಂಥದೇಶವು
ಹಸನು ಮನಸಿನಜೀವಿಗಳಿಗಿದು ಭವ್ಯ ಭಾರತವೂ

೩೨

ಸ್ವಾಮಿಗಳಿಗಿದು ಮಾರ್ಗ ಜ್ಯೋತಿಯು
ಕಾಮಿಗಳಿಗಿದು ನೀತಿಗನ್ನಡಿ
ವಾಮ ಮಾರ್ಗದ ಕಾಮುಕರಿಗಿದು ಸಿಂಹಸದ್ಶನವೂ
ಭಾಮೆಯರಿಗಿದು ಕಾಮಧೇನುವು
ಕೋಮುವಾರಿನ ಭೇದ ತೋರದ
ಭೂಮ ಶ್ರೀ ತಾತನ ಚರಿತ್ರೆಯು ಕಾವ್ಯಲೀಲೆಯಿದೂ

೩೩

ದೇಹವೆಂಬುವ ಚಲುವ ತೇರೊಳು
ದೇಹಿಯೆಂಬುವ ಆತ್ಮ ನಿರುತಿರೆ
ನೇಹದೊಳು ನಿಜಮರವಣಿಗೆ ತಾಭಾವದೊಳು ಕೂಡೀ
ಮೋಹಭಾವದಿ ಜಗದಜನಗಳು
ಮೋಹನೆಪದಲಿ ಮೂರ್ತಿ ಪೂಜಿಸಿ
ಬಾಹುಬಲಶಕ್ತಿಯೊಳು ತೇರಿನ ಮಣಿಯುತಾವೆಳೆದೂ

೩೪

ಜಗದಿ ಉತ್ಸವದರ್ಥ ತಿಳಿಯದೆ
ಜಗದಥಳುಕಿಗೆ ಮಾರು ಹೋಗುತ
ಜಗದಗುರುತೇರರ್ಥ ಸಡಿಲಿಸಿ ಕಾಮ್ಯಭಾವದೊಳೂ
ನಗರದೊಳು ವಿಶ್ರಮಿಸಿ ವಿರಹದಿ
ಹಗಲು ಗನಸನು ಕಂಡು ರಮಿಸುತ
ಬಗೆಬಗೆಯ ವೇಷದಲಿತಾವ್ ಕುಣಿಕುಣಿದು ಧರೆಯೊಳಗೇ

೩೫

ಲೋಕಸೃಷ್ಟಿಯ ಬದಲುಗೊಳಿಸದೆ
ಲೋಕ ದೃಷ್ಟಿಯ ಹಸನುಗೊಳಿಸುತ
ಏಕ ಸಂಸಾರದಲಿ ರಮಿಸುವ ಜನಗಳೇ ಧನ್ಯಾ
ನಾಕನರಕಳಿಲ್ಲೆಯಿರುವುವು
ಕಾಕು ಮನಜೀವನವನಡೆಸದೆ
ಲೋಕ ಕಲ್ಯಾಣದೊಳು ಜೀವನಸವೆಸಿ ಸಾರ್ಥಕದೀ

೩೬

ಪ್ರೇಮದಿಂದಲಿ ಜನಿಸಿಹುದು ಜಗ
ಪ್ರೇಮದಿಂದಲಿ ಯಿರುವಿಕೆಯು ನಿಜ
ಪ್ರೇಮದೊಳು ಲಯ ಹೊಂದುವವು ಬ್ರಹ್ಮಾಂಡ ಕೋಟಿಗಳೂ
ಪ್ರೇಮಿಯಗಲಿದ ವಿರಹಸುಖವದು
ಪ್ರೇಮಿಗಳು ಸುಖಕಿಂತ ಮಿಗಿಲೂ
ಪ್ರೇಮ ದೇವರ ಕಡೆಗೆ ತಿರುಗಲು ನಿರಂಜನರೂಪಾ

೩೭

ಪುಷ್ಕಳದಿ ಹರಿವಂಥ ಗಂಗೆಯು
ಪುಷ್ಕಳದವರ ತುಂಗಭದ್ರೆಯು
ಪುಷ್ಕಳದಿ ದಂಪತಿಗಳೀರ್ವರು ಮಿಂದು ಭಕ್ತಿಯೊಳೂ
ಪುಷ್ಕರದ ಹೂ ಪತ್ರೆಯಿಂದಲಿ
ನಿಷ್ಕಲಂಕನು ವಿರೂಪಾಕ್ಷನ
ನಿಷ್ಕಲಂಕದ ಪೂಜೆ ಸಲಿಸಿಯೆ ಬಂದ ಸತಿಸಹಿತಾ

೩೮

ಬಗೆಬಗೆಯ ಹೂಗಳಿಗೆ ಹಾರುವ
ಬಗೆಯ ಮಧು ಸಂಚಯಕೆ ದುಂಬಿಯು
ಬಿಗಿಯಿರದ ವಿಕಾರಜೀವನ ಭ್ರಮಣೆಯಲಿ ಕೂಡೀ
ಬಿಗಿಯಿರದ ಸ್ವಚ್ಛಂದ ಜೀವನ
ಜಗದ ನಗೆಯಲಿ ಕೊನೆಯ ಕಾಣುತ
ಜಗದೇವ ಮೆಚ್ಚದ ಬಾಳೆ ಗೋಳಾಗೀ ಜಗದೊಳೂ

೩೯

ಜಗದೊಳಗೆ ಮೃಗಪಕ್ಷಿ ಜಂತುಗ
ಳಗಣಿತದಿ ನಡೆಸುವವು ಜೀವನ
ಸೊಗಸುಯಿಲ್ಲದೆ ಕೂಡಿರವು ಪಶುತ್ವಭಾವದಲೀ
ಜಗದ ಜನರಿಗೆ ಧರ್ಮ ನಡೆತೆಗೆ
ಜಗದೊಳಿರುವ ವಿವಾಹ ಪದ್ಧತಿ
ಜಗದೊಡೆಯ ಶಿವಮಹಾದೇವನ ಕೃಪೆಯು ವೈದಿಕದೀ

೪೦

ಹೆಣ್ಣಿನಿಂದಲಿ ಯಿಹ ಪರದ ಸುಖ
ಹೆಣ್ಣು ಸೃಷ್ಟಿಗು ಪಾಧಿಯಾದಳು
ಹೆಣ್ಣಿನಿಂದಲಿ ಲೀಲೆ ಮಾಡಿಯುಮಾಪತಿಯು ತಾನೂ
ಅಣ್ಣಗಳು ತಾವೆಂದು ಹೇಳುತ
ಹೆಣ್ಣಿಗಾಗಿಯೆ ಮಣ್ಣು ಮುಕ್ಕುತ
ಬಣ್ಣ ಬಯಲಾದಾಗ ಶುನಕಗಳೆನಿಸಿ ಜಗದೊಳಗೇ

೪೧

ವೀರಮಾಂಬೆಯು ಬಸವಲಿಯ್ಯರ
ಸಾರ ಸಂಸಾರದೊಳು ಸಂಭ್ರಮ
ಪೂರಿತದ ಸಮರಸದ ಜೀವನ ಶಿವಮಯದಿ ಕೂಡೀ
ಸೂರಿ ಪತಿಯನು ಪಡೆದ ಸತಿಯಳು
ಚಾರು ಶ್ರೀ ವಟುಗಲ್ಲು ಬಸವನ
ಪಾರ ಮಹಿಮೆಯು ಪುಣ್ಯಗರ್ಭದಿ ತೊಳಗಿ ಬೆಳಗುತಲೀ

೪೨

ತವರ ಮನೆಯನು ಬಿಟ್ಟ ಹೆಣ್ಣದು
ಜವದಿ ಗಂಡನ ಮನೆಗೆ ಬರುತಲಿ
ತವರು ಕೀರ್ತಿಯ ಬೆಳಸಿ ಗಂಡನ ಮನೆಯ ಬೆಳಗುತಲೀ
ಅವರು ಕೊಡುವ ಸಕಲ ಕಾಟವ
ಶಿವಮಯದ ಭಾವದಲಿ ಮರೆಯುತ
ಸವಿನಯದ ತಾಳ್ಮೆಯಲಿ ನಡೆಯುವ ಹೆಣ್ಣೇ ಉತ್ತಮಳೂ

೪೩

ಉತ್ತಮದ ವೀರಮ್ಮ ಸತಿಯಳು
ಉತ್ತಮದ ಬಸವಯ್ಯ ಗೂಡಿಯೆ
ಉತ್ತಮೋತ್ತಮ ಜೀವನವು ತಾ ಶಿವಮಯದಿ ಕೂಡೀ
ಕುತ್ತು ತಾರದೆ ಪತಿಯ ಮನೆಗಾ
ಹೆತ್ತವರ ಗುಣಗಾನ ಮಾಡುತ
ಚಿತ್ತವೇಕಾಗ್ರದೊಳು ನಿಲಿಸುತ ಬಾಳಿನೆಚ್ಚರದೀ

೪೪

ಎಂಟು ತಿಂಗಳು ಗರ್ಭವತಿಗಾ
ನೆಂಟರಿಪ್ಪರು ಗುರುಗಳಿಂದಲಿ
ಎಂಟು ವಿಧದರ್ಚನೆಯು ಲಿಂಗದ ಧಾರಣೆಯು ಮಾಡೀ
ಬಂಟ ಭಕ್ತರು ನಲಿದು ನುಡಿದರು
ಜಂಟಿಯಾಗಿಯೆ ಹರಕೆ ಹೊತ್ತಿಹ
ಉಂಟು ಬಸವಯ್ಯನಿಗೆ ಗಂಡೊಂದಾಗುವುದು ದಿಟವೂ

೪೫

ನಮಕದಿಂದಲಿ ತ್ಯಾಗಸಿದ್ಧಿಯು
ಚಮಕದಿಂದ ಪ್ರಸಾದ ಭೋಗ
ನಮಕ ಚಮಕವೆ ವೇದದೊಳಗಿನ ಸಾರವಾಗಿಹುದೂ
ಪುಮಕಾರವಿರದಾ ರುದ್ರ ಜಪ
ಸುಮನಶ್ರೀ ಬಸವಯ್ಯಾ ಮಾಡಿಸಿ
ವಿಮಲಶ್ರೀ ವಟಗಲ್ಲು ಬಸವಗೆ ರುದ್ರದಭಿಷೇಕಾ

೪೬

ವೀರಶೈವನ ಭಕ್ತಿಯೋಗವು
ವೀರವರ ತತ್ವವದು ತಿಳಿಸುತ
ವೀರತ್ಯಾಗಿಯ ಭೋಗವೇ ತಾ ಪ್ರಸಾದವಾಗಿಹುದೂ
ವೀರಶೈವರು ಪುರುಷ ಸೂಕ್ತದಿ
ಸಾರಿ ಭಜಿಸುತ ಪರಮಪುರುಷನ
ಪಾರಮಹಿಮ ವಿರಾಟ್ ರೂಪನ ಪುರುಷಸೂಕ್ತದಲೀ

೪೭

ಒಂದುದಿನ ಹೊಂಬಣ್ಣ ಬೆಳಕಲಿ
ಚಂದವಾದ ಸುವರ್ಣಗಿರಿಯದು
ಸುಂದರದ ಸೂರ್ಯೋದಯದ ಪ್ರಭೆಯಿಂದ ಕಂಗೊಳಿಸೀ
ಮುಂದೆ ಹಸುರಿನ ಹುಲ್ಲುಗಾವಲು
ಬಿಂದು ದೂಮರದಿಂದ ಕೂಡಿಯೆ
ಒಂದೊಂದು ಹನಿಯಲಿ ರವಿಯ ಬಿಂಬವು ತೋಳಗಿ ಬೆಳಗೀ

೪೮

ಇದಕು ಮಿಗಿಲೆನಿಸಿರುವ ತೇಜದ
ಸದುಹೃದಯ ವೀರಮ್ಮ ಸತಿಯಳ
ಪದನ ಸುಕೃತದ ಗರ್ಭದಿಂದಲಿ ಉದಯಿಸಿತು ಶಿಶುವೂ
ಕದಪಿನೊಳು ಕೈಯಿಟ್ಟು ಕೊಂಡಿಹ
ಚದುರ ಮುಖಪದು ಅರಳಿನಿಂತಿಹ
ಹದುಳ ಹಸುಳೆಯು ದೂರದೃಷ್ಟಿಗೆ ಬಿಸಿಗದಿರ ಸಾಕ್ಷೀ

೪೯

ಧರೆಯ* ವಿಶ್ವಾವಸುವ ವರ್ಷದಿ
ಪರಮ ವೈಶಾಖದಲಿ ಜನಿಸಿತು
ಗುರುತರದ ಗುರುವಾರದಿಂದಲಿಯಿಳೆಯೊಳಗೆ ಶಿಶುವೂ
ಪರಶುದ್ಧ ಪರಿ ಶುದ್ಧದಿಂದಲಿ
ಸುರುಚಿರದ ಘನ ಶಿಶುವು ತೇಜದಿ
ಪರಶಿವನ ಅವತಾರವೆತ್ತಿಯೆ ಬಂದಿತೋಧರೆಗೇ !

೫೦

ಶೂಲಪಾಣಿಯ ದಿವ್ಯ ತೇಜದ
ಶೀಲ ಸೊಬಗಿನ ಶಿಶುವನೋಡಿಯೇ
ಶೂಲಗಿತ್ತಿಯು ಸಾರಿದಳು ಗಂಡೆಂದು ಧರೆಯೊಳಗೇ
ಮೇಲು ನೋಟದಿ ನೋಡಿ ಜಗವನು
ಜೋಲಿ ಹೊಡೆಯದೆ ಸಮತೆಯೋಗವ
ಪಾಲಿಸುವದೆಂತೆಂದು ಚಿಂತಿಸಿ ಶಿಶುವು ಮೌನದಲೀ

೫೧

ಪರಮನನು ಪ್ರಾರ್ಥಿಸುವ ಶಿಶುವಿಗೆ
ಹರನು ಗಿರಿಜೆಯ ಸಹಿತ ಹರಸಿದ
ತ್ರಿರೆಯ ಜನರನು ರಕ್ಷಿಸುವ ಮಹಶಕ್ತಿ ತುಂಬಿದನೂ
ಪರಮ ಸಾಂಬನ ಶಕ್ತಿಯಿಂದಲಿ
ಪರಮ ಶಿಶು ಚೈತನ್ಯ ಪಡೆದಿಹ
ಹರಹರಾ ಮಹದೇವನೆಂದಳು ತಾಗ ಶಿಶು ಚೀರೀ

---

*೧೯೦೫ನೇ ವರ್ಷ

೫೨

ಅಳುವ ಕಂದನ ಕಂಡು ಹಿಗುತ
ಬಳಿಯಲಿಹ ವೀರಮ್ಮ ತಾಯಿಯು
ಪೊಳೆವ ಶಿಶುವನು ನೋಡಿದಾ ಪಡೆದಪ್ಪ ಹರುಷದಲೀ
ಇಳಿದು ಬಂದಿಹ ಶಿವನ ತೇಜವು
ಇಳೆಯೊಳಿಹ ಶಿಶುವನ್ನು ಕೂಡಿದೆ
ಬಳಿಕ ಮೇಲಿನ ಕಾರ್ಯವೆಲ್ಲವ ತಂದೆ ಮಾಡಿಸಿದಾ

೫೩

ಪಾಮನ್ಕೆಲ್ಲೂರ್ ವಿರತ ಮಠದ
ಧಾಮದೊಡೆಯರುಯೆನಿಸಿ ಶ್ರೀಗುರು
ಭೂಮಶ್ರೀ ಮಹಲಿಂಗಯತಿಗಳ ದಿವ್ಯ ಸಮ್ಮುಖದೀ
ನೇಮದೊಳು ಪುತ್ರೋತ್ಸವನುತವೆ
ಪ್ರೇಮದಲಿ ಮಾಡುತ್ತಯಿಳೆಯೊಳು
ಸ್ವಾಮಿಯಾಗುವ ದಿವ್ಯ ಶಿಶುವಿಗೆ ಲಿಂಗ ಕಟ್ಟಿದರೂ

೫೪

ವಿಮಲ ತೊಟ್ಟಿಲ ಕಟ್ಟಿ ಊರಿನ
ಕಮಲ ಮುಖಿಯರು ಹಾರ ಹಾಕುತ
ಅಮಿತ ಆನಂದದಲಿ ಶಿಶುವನು ತೊಟ್ಟಿಲಕೆ ಹಾಕೀ
ವಿಮಲ ಹೆಸರುಗಳಿಂದ ಕರೆಯುತ
ತಮವ ಕಳೆಯುವ ಭವ್ಯ ಶಿಶುವನು
ವಿಮಲ ವಟುಗಲ್ಲಯ್ಯನೆಂಬಭಿನಾಮದಿಂ ಕರೆದೂ

೫೫

ಪರಮ ಪಾವನ ತೀರ್ಥವೆನ್ನುತ
ಗುರುವಿನಾ ಪಾದೋದಕವು ತಾ
ಗುರು ಮಠದ ಬಸವಯ್ಯ ಸೇವಿಸಿ ಪತ್ನಿಯೊಡಗೂಡೀ
ಪರಗಣಾರಾಧನೆಯ ತೃಪ್ತಿಯು
ನೆರೆದ ಜನಗಳ ಕೂಡಿ ಮಾಡಿದ
ಶರಣ ಶ್ರೀ ಬಸವಯ್ಯನೇ ತಾ ಧನ್ಯ ಜಗದೊಳಗೇ

ಎರಡನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೨ ಕ್ಕಂ ಪದಗಳು ೬೭ ಕ್ಕಂ ಮಂಗಳಂ

# ಮೂರನೆಯ ಸಂಧಿ

**ಸೂಚನೆ :-**

**ಧರೆಯೊಳೊಟುಗಲ್ಲಯ್ಯ ಬಾಲ್ಯದ**
**ಹರಿ ಪರಿಯ ಲೀಲೆಗಳ ಮಾಡುತ**
**ಹರುಷದಲಿ ತಾ ಊರು ಕಾಲೆಯ ಓದು ಮುಗಿಸುತಲೀ**

೧

ಶ್ರೀಗುರವೇ ಕೊಡು ಮಹದ ಶಕ್ತಿಯು
ರಾಗ ರಹಿತನೆ ದುಷ್ಟ ಶಿಕ್ಷಕ
ತ್ಯಾಗ ಪೂರ್ವದ ಭೋಗಿಜನಗಳ ಶಿಷ್ಟರಕ್ಷನೂ
ಭೋಗದೊಳು ಮೈಮರೆದು ಮದದಿಂ
ಬೇಗಿ ಶಿವನನು ಬಿಟ್ಟು ಮಾಡಿದ
ಯಾಗದಲಿ ದಕ್ಷನ ಶಿರಸ್ಸನು ತರಿದ ವೀರೇಶಾ

೨

ಕಂದನನು ನೋಡುತ್ತ ಹಿಗ್ಗುವ
ಚೆಂದದಿಂ ಮೆಣ್ಣೆಯನು ಹಚ್ಚುತ
ಚೆಂದ ಕಿವಿಗಳಿಗರಳೆಯಿಡುವಾ ತಾಯಿ ವೀರಮ್ಮಾ
ಚೆಂದ ಕರಮೈ ನಯದಿ ನೀವುತ
ಸಂಧಿ ಮೊಣ ಕಾಲ್ಗಳನು ವೊತ್ತುತ
ಬಂಧುರದ ಬಾಹುಗಳಲೆತ್ತಿಯೆ ಮೈಯ ತೊಳೆವುದಕೇ

೩

ಅನುಭೂತಿಯಿಂ ಕಾಲ್ಮೇಲೆ ತಾ
ನನುಪಮದ ಶಿಶುವನ್ನೂ ಹಾಕಿಯೆ
ಕನಕ ಬಣ್ಣದ ಮಗುವಿಗಾಕೆಯು ಬಿಸಿನೀರನೆರೆದೂ
ಕನಗು ಬಿಡುವುದಕಾಗಿ ತಾನಾ
ತನಯುಗ್ಗೆಚ್ಚುತ ಸೀಗೆ ಪುಡಿಯ
ನನುನಯದಿ ತಿಕ್ಕುತಲಿ ಮಗವಿಗೆ ಮತ್ತೆ ನೀರೆರೆದೂ

೪

ಪರಿಶುದ್ಧ ವಸನದಿ ಮೈವೊರಸಿ
ವರ ವಿಭೂತಿಯು ಪುಡಿಯು ಸವರುತ
ಪರಮ ಶಿಶುವಿನ ಹಣೆಗೆ ತಾನೆ ವಿಭೂತಿ ಧರಿಸುತಲೀ
ಕೊರಳಲಿರುವಾಯಿಷ್ಟ ಲಿಂಗವ
ಸರಳದಲಿ ತಾ ಪೂಜೆಯು ಮಾಡಿಯೆ
ತರಳನಾ ಮುಖ ಮೈಗಳಿಗೆ ತಾ ಧೂಪಹಿಡಿಯುತಲೀ

೫

ಹಸುಳೆಯನು ತೊಡೆ ಮೇಲೆ ಮಲಗಿಸಿ
ಸಸಿನೆಯಿಂದಲಿ ಮೊಲೆಯ ಕೊಡುತಲಿ
ಹಸುಳೆ ಮುಂಗುರುಳನ್ನು ನೇವರಿಸುತ್ತ ತೂಪಿರಿದೂ
ಕೊಸರಿ ನೋಡುತ ಕುಚಗಳೆರಡೂ
ಹೊಸತನದ ಮುಖ ಚಂದ್ರವೆಂದೂ
ತುಸು ವಗಲದಾ ಚಕ್ರವಾಕದ ಕುಚಗಳಾಗಿರುತಾ

೬

ಜೊಂಪು ನಿದ್ರೆಯಲಿರುವ ಕಂದನ
ಇಂಪು ಗಾನದಿ ತೂಗಿ ತೊಟ್ಟಿಲು
ತಂಪುಗಾಳಿಗೆ ಕಣ್ಣು ಮುಚ್ಚುತ ನಿದ್ರೆಯೊಳು ಶಿಶುವು
ಹೆಂಪು ಶಿವಧ್ಯಾನದಲಿ ಮಲಗಿದ
ರಂಪ ಮಾಡದ ದಿವ್ಯ ಶಿಶುವದು
ಹೊಂಪುಳಿಯು ತಾನಾಗಿ ನೋಡ್ವರ ಕಣ್ಗೆ ಹಬ್ಬವದೂ

೭

ನೆರಮನೆಯ ಗೌರಮ್ಮ ಬಂದಾ
ಗುರಪತ್ನಿ ವೀರಮ್ಮ ಪಡೆದಿಹ
ಹರನೆ ಶಿಶು ರೂಪದಲಿ ಮಲಗಿರುವಂಥ ಮಗು ಕಂಡೂ
ಸಿರಿಮೊಗದ ಗುರು ಪತ್ನಿಗೆರಗುತ
ಪರರ ನೋಟದಿ ಕಣ್ ಕಿಸುರ್
ವರಶಿಶುವಿಗಾಗದಂತೆಯು ಕರಿಚುಕ್ಕಿಯಿಡಿರೆಂದೂ

೮

ಬೆಳಗಿನಾ ಪೂಜೆಯನು ಮುಗಿಸಿದ
ಬಳಿಕ ಗುರುಬಸವಯ್ಯ ಬರಲಾ
ನಳಿನ ಪಾದಕೆ ಯೆರಗಿ ತಿಳಿಸುತ ಬಂದ ಕಾರ್ಯವನೂ
ಕಳೆದು ಹೋದಾ ಯೆಮ್ಮೆಯದು ತಾ
ಬಳಿಕೆರಡು ದಿನದಲ್ಲಿ ಬರುವುದು
ಹಲುಬದಿರು ಗೌರಮ್ಮಯೆಂದಾ ಬಸವಯ್ಯ ಹೇಳೀ

೯

ಊರ ಗೌಡನ ಮಗನ ಲಗ್ನದ
ಭಾರಿ ಪೌರೋಹಿತ್ಯಕಾಗಿಯೆ
ಭಾರಿ ಜರಿ ಪೇಟವನು ಸುತ್ತಿಯೆ ಹೋದ ಬಸವಯ್ಯಾ
ಭಾರಿ ಹಿತ ಬಂಧುಗಳು ಕೂಡಿದ
ಭಾರಿ ಸಂಭ್ರಮದಿಂದ ನಡೆದಿಹ
ಭಾರಿ ಮದುವೆಯ ಕಾರ್ಯ ಮಾಡಿಸಿದಂಥ ಪರಮಗುರೂ

೧೦

ಕಣ್ಣು ಬಿಡುತಲಿ ಸುಮ್ಮನಿರುತಲಿ
ಬಣ್ಣದಾಗಿಳಿ ಪಟವ ನೋಡುತ
ಸಣ್ಣ ಕರ ಮುಷ್ಟಿಯಲಿ ನಲಿದು ವಿರಕ್ತ ಭಾವದೊಳೂ
ಹುಣ್ಣಿಮೆಯ ಚಂದಿರನ ತೆರನಲಿ
ಬಣ್ಣ ಬಣ್ಣದ ಬಗೆಯುಯಿರದಲೆ
ತಣ್ಣನೆಯ ಗಾಳಿಯಲಿ ನಗುವಾ ಕಾರಣಿಕ ಶಿಶುವೂ

೧೧

ಸಗುಣ ಶಿವಕಳೆಯಿಂದ ಶೋಭಿಪ
ನಗುವ ಮಗುವನು ಯೆತ್ತಿಕೊಳ್ಳುತ
ಜಗವ ಮೆಚ್ಚಿಸುವಂಥ ಲಕ್ಷಣ ಬಸವಯ್ಯ ಕಂಡೂ
ಜಗದೊಡೆಯನಾಗುವನೋ ಮೇಣ್
ಯುಗ ಪ್ರವರ್ತಕನಾಗುವನೋ
ಮಗನ ಶ್ರೀಹಸ್ತವನು ಸಾಮುದ್ರಿಕದಿ ತಾ ನೋಡೀ

೧೨

ಎವೆಯು ಯಿಕ್ಕದೆ ನೋಡ್ವ ಮಗುವದು
ಛವಿಯ ಗೊಡುವಾಮುದ್ದು ಕಂದನ
ರವಿಯ ತೇಜದಿ ಬೆಳಗುವಾ ರುದ್ರಾಕ್ಷಿ ನೋಟದೊಳೂ
ಬುವಿಯಲಾಗುವ ಸರ್ವಕಾರ್ಯಗ
ಳವಿರತದಿ ತಾ ಸಾಕ್ಷಿತೆರನಲಿ
ಭವಿಗಳುದ್ಧಾರಕ್ಕೆ ಬಂದಿಪಯಃರಡನೆಯ ಶಿವನೂ

೧೩

ದಿನಗಳುರುಳಲು ಮೈಯನುರುಳಿಸಿ
ಬಿನದಿ ಮುಂಗೈಗಳನುವೂರುತಾ
ಅನುಪಮದ ಶಿವಕಳೆಯ ಮುಖವನುಯೆತ್ತಿನೋಡುವುದೂ
ಅನತಿ ದೂರದಲಿರುವ ಗಂಟೆಗೆ
ಅನುಕ್ರಮದಿ ನಡೆದಂಬೆಗಾಲೊ
ಳನುರೂಪವಟಗಲ್ಲು ಬಸವನು ಧರ್ಮ ರೂಪದಲೀ

೧೪

ಮೊದಲ ಹೆಜ್ಜೆಗಳಿಡುತ ಧರೆಯಲಿ
ಮೊದಲ ನುಡಿಗಳನಾಡುತಲಿ ತಾ
ಮೊದಲ ಹಲ್ಗಳುಮೂಡಿಯಿರುತ ಪ್ರಸಾದ ಭೋಗದೊಳೂ
ಮೊದಲ ನಡೆ ನುಡಿ ಕಲಿಸಿದಂಥಹ
ಮೊದಲ ದೇವರುಯೆನಿಸಿದಂಥಹ
ಮುದದಿ ಯುಣಿಸುತ ಬೆಳಸಿದುಂತಹ ವೀರಮ್ಮ ತಾಯೀ

೧೫

ತದನಂತರ ಮಗುವಿಗ್ಯೆದುವರು
ಷದಲಿ ವಿಜಯದ ದಶಮಿದಿನದಲಿ
ಉದಯದೊಳಭ್ಯಂಗ ಸ್ನಾನವ ಮಾಡ್ಸಿ ಮಗುವಿಂಗೇ
ಪದಪಿನಿಂ ಪೂಜೆಯನು ಮುಗಿಸಿದ
ಪದನದೊಳುಯಿರುವಂಥ ಮಗುವನು
ಸದರದಿಂ ಕರೆದೊಯ್ದು ಶಾಲೆಗೆ ಹಾಕಿಶುಭದಿನದೀ

೧೬

ಉಸುಗಿನಲಿ ಓಂಕಾರ ಬರೆಯುತ
ಸಸಿನೆಯಿಂ ತೋರ್ ಬೆರಳುಹಿಡಿದಾ
ಜಸವಡೆದ ಮಗುವಿಂಗೆ ಗುರುಗಳು ತಿದ್ದಿಸುತ ಮುದದೀ
ಹಸನು ಮನಸಿನ ಮುಗ್ಧ ಮಗುವದು
ಬಿಸುಗಣ್ಣ ಕೃಪೆಯಲಿ ತಿದ್ದುತಾ
ಹೊಸ ಹುರುಪಿನಲಿ ಅದರ ಅರ್ಥವ ಕೇಳಿ ಗುರುಗಳನಾ

೧೭

ಬಾಲಕನ ಕುಶಲಾಗ್ರ ಬುದ್ಧಿಗೆ
ಶಾಲೆಗುರುಗಳು ಮೆಚ್ಚಿ ಹೇಳಿದ
ಲೀಲೆ ಮಾಡುವ ಪಾರ್ವತಿ ಪರಮೇಶ್ವರರುಯೆಂದೂ
ಆಲಿಸಿದ ಅದರರ್ಥ ಮಗುವದು
ಲೀಲೆಯಲಿ ತಾಯೆದ್ದು ಬಂದಿತು
ಆಲಿಂಗನವ ಮಾಡುತ್ತ ಗುರುಗಳಿಗೆರಗಿತಾಗಾ

೧೮

ಹಿಡಿದೆತ್ತಿ ಮುದ್ದಿಸುತ ಮಗುವನು
ಮೃಡನ ತೇಜದಲಿರುವ ಕಂದನ
ಪಡೆದಂಥ ಬಸವಯ್ಯಸ್ವಾಮಿಯೆ ಧನ್ಯರೆಂದಗುರೂ
ಹುಡುಗರೆಲ್ಲರಿಗಿಂತ ಮೇಲೀ
ಹುಡುಗ ವಟುಗಲ್ಲಯ್ಯ ಜಾಣನು
ಎಡೆಬಿಡದೆ ಕಲಿತೋದಿದನು ತಾ ಊರ ಶಾಲೆಯಲೀ

೧೯

ಅಮರ ಕೋಶವ ಶತಕ ಸಾರವ
ವಿಮಲದಾವರ ರಾಜಶೇಖರ
ಅಮರ ಕೃತಿಯಾ ಶಬರಶಂಕರ ಲೀಲೆಗಳ ಓದೀ
ಅಮಮದೇನಾಶ್ಚರ್ಯಶಿವತಾ
ನುಮೆಯು ಕೂಡಲು ಜಗದ ಲೀಲಾ
ಉಮೆಯುನಗಲಿದ ಶಿವನು ತಾ ಸ್ವಯಂಭೂವೆನಿಸುತಲೀ

೨೦

ಇನಿತು ವಿಭವವದ ಓದು ಕರಗತ
ವೆನಿಸಿದರು ತಾ ಹೊರಗೆ ತೋರಿಸ
ದೆನಿತು ಗರ್ವವ ಪಡದಲಿರುಪಾಸರಳ ಶಿವರೂಪೀ
ವಿನಯವಿದ್ದರೆ ಚಲುವು ಬುಧರಿಗೆ
ವಿನಯದಿಂದಲಿ ಶಿವನವೊಲುಮೆಯು
ಯೆನುತ ತಾಯ್ತಂದೆಗಳು ಹಿಗ್ಗುತ ಮಗನ ವಿಭುದತೆಗೇ

೨೧

ಒಂದು ದಿನ ಮುಂಗಲಿಯಾಬಣವೆ
ವೊಂದರ ಸನಿಹದಿ ನಾಗರಹಾ
ವೊಂದರೊಳು ಕಾದಾಡುವುದು ಕಂಡಾಗ ಜನಸೇರೀ
ಸಂದಿನೊಳು ತಾ ಬಂದು ನಿಂತಿಹ
ಚಂದ ಮೊಗದಾವಟುಗಲ್ಲಯ್ಯನ
ಅಂದು ನೋಡಿದಾ ಹಾವು ಮುಂಗಲಿ ಸೆಣಸುವುದು ಬಿಡುತಾ

೨೨

ಬಂದು ತಾವಾ ಬಾಲಕನ ಕಾ
ಲ್ಮುಂದೆ ನಿಲ್ಲುತ ಸ್ನೇಹಭಾವದಿ
ವಂದಿಸುವರೀತಿಯಲಿ ನಿಂತಿಹಾ ಪ್ರಾಣಿಗಳ ನೋಡೀ
ಅಂದು ಬೆರಗಾಗುತ್ತ ಜನರಾ
ನಂದದಿಂದಲಿ ಹೊಗಳಿಯೆತ್ತುತ
ಚಂದವಟುಗಲ್ಲಯ್ಯ ಹುಡುಗನ ಲೀಲೆಯನು ಕಂಡೂ

೨೩

ಇದನು ಕೇಳಿದ ತಂದೆತಾಯ್ಗಳು
ಮುದದಿ ವಿಸ್ಮಯ ಪಡುತಲಾಗಾ
ಹದುಳ ಮಗನಾ ಭಾವಿಜೀವನ ಕಂಡು ಚಿಂತಿಸುತಾ
ವಿಧವಿಧದೊಳಾಡ್ಕೊಳ್ಳ ಜನಗಳು
ವಿಧವಿಧದಿ ಬಣ್ಣಿಸುವಜನರನು
ಸಧುಹೃದಯಿ ಬಸವಯ್ಯ ಸಾಂತ್ವನದಿಂದ ಕೇಳುತಲೀ

೨೪

ಮರುದಿನದಿ ಬಸವಯ್ಯ ತಾನಾ
ವಿರತ ಮಠದಾ ಬಸವಲಿಂಗಾ
ವರಗುರು ಸನ್ನಿಧಿಗೆ ಹೋಗಿಯೆ ತಿಳಿಸಿ ವಿಷಯವನೂ
ಪರಮ ಶಿವಯೋಗದಲಿಬೆಳಗುವ
ಚರವರೇಣ್ಯನ ಕಳೆಯಲಿರುವಾ
ಪರಮ ಪುತ್ರನು ಮಠದಲಿರಲೆಂದುಸುರಿದರು ಮಠದೀ

೨೫

ಗುರುಗಳಾಜ್ಞೆಗೆ ತಾಯಿವೊಪ್ಪದೆ
ಗುರು ಮಠದ ಸೇವೆಯನು ಮಾಡುತ
ವರಪುತ್ರ ತಾ ಮನೆಯಲ್ಲಿಯೆಯಿರಹೇಳಿಸಂತೈಸೀ
ಗುರುವಿನಾ ಸೇವೆಯನು ಮಾಡುವ
ಗುರುತರದ ಕಿಂಕರದ ಭಾವದಿ
ಹರನ ಕರುಣೋದಯದಿ ಬೆಳೆಯುತ ದಿವ್ಯಲೀಲೆಯೊಳೂ

ಮೂರನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೩ ಕ್ಕಂ ಪದಗಳು ೭೧ ಕ್ಕಂ ಮಂಗಳಂ

# ನಾಲ್ಕನೆಯ ಸಂಧಿ

**ಸೂಚನೆ :–**

ಗುರು ಚನ್ನಮಲ್ಲಿಶಿವಯೋಗಿಗಳ
ಉರುತರದಾಜ್ಞೆಯನುವೊಪ್ಪುತ
ಭರದಿವಟುಗಲ್ಲಯ್ಯನರ್ಪಿಸಿದಂಥ ಬಸವಯ್ಯಾ

೧

ಸತಿಸುತಾದಿಗಳ್ವಿಷಯಿಗಳಾ
ಅತಿಚಿಂತೆಯೊಳು ಕವಿದ ಮೋಡವು
ಮತಿಯ ಮಂಕಿನ ಮಂಜು ತಾರವಿಗುರುವಿನಿಂಕರಗೀ
ಹಿತದಿ ಸಹಬಾಳ್ವೆಯನು ಮಾಡುವ
ಹಿತದಿ ಬೋಧಿಪ ಧರ್ಮ ಸೂಕ್ಷ್ಮವ
ಗತಿಮತಿಗೆ ಸದ್ಗತಿಯು ಕೊಡುವಾಪರಮುನಿಗೆ ಶರಣೂ

೨

ಪಾಮನದ ಕೆಲ್ಲೂರು ಭಕ್ತರ
ಕಾಮಿತಾರ್ಥದ ಬಿನ್ನಹಕೆ ತಾ
ಭೂಮ ಗುರು ಶ್ರೀ ಚನ್ನಮಲ್ಲಸ್ವಾಮಿಗಳೇ ಬಂದೂ
ಸಾಮರಸ್ಯದಿ ವಿರತ ಮಠದೊಳು
ಸೋಮಧರ ಕಳೆಯಿಂದ ಹೊಳೆಯುವ
ರಾಮಣೀಯಕ ಹುಡುಗ ವಟುಗಲ್ಲಯ್ಯನನು ಕಂಡೂ

೩

ಕನಕಗಿರಿಯ ಸುವರ್ಣಗಿರಿಯಾ
ದಿನಕರನ ಪ್ರಭೆಯಲ್ಲಿ ಬೆಳಗುವ
ಅನಘ ಶ್ರೀ ಗುರುವಿರತಮಠದೊಡೆಯಾಗಿ ಬೆಳಗುತಲೀ
ಚಿನುಮಯ ಶ್ರೀ ಚನ್ನಮಲ್ಲಸ್ವಾ
ಮಿನಯದಲಿ ಬಸವಯ್ಯ ಕರೆಸಿಯೆ
ಘನಮನದಿ ಮಗನನ್ನು ಮಠಕರ್ಪಿಸಲು ಕೇಳಿದರೂ

೪

ಅಭಿಜಾತ ಪುತ್ರನನರ್ಪಿಸಲು
ಅಭಿರಾಮ ಶಿವತೇಜದಲಿಯಿರು
ವಭಿದಾನದಿಂ ಕೀರ್ತಿಯನು ಪಡೆದವನಗಲಲಿರದೇ
ಅಭಿಘಾತವಾದ ಕಳತ್ರಕರು
ಣಭಿ ಭವಿಸುತಲಿ ಬಸವಯ್ಯ ತಾ
ನಭಿಮಾನತೆಗೆ ಕಿವಿಗೊಟ್ಟುಸತಿ ಮನವೊಲಿಸಲೆಳಸೀ

೫

ಮುದದಿಂದ ಬೆಳೆದಂಥಮಗುವನು
ಸದುಹೃದಯಿ ವೀರಮ್ಮ ಸತಿಯುಳು
ಎದೆಗುರುದೇಂ ಮರೆಯಲಿಳೆಯೊಳಗೆ ಬಿಟ್ಟಿರಲು ಮಗನಾ
ಉದಿತ ಮಂತ್ರಾಲೋಚನೆಯಾ
ಹದುಳದೊಳು ಬಸವಯ್ಯ ಮಾಡುತ
ಹದನದಲಿ ಸತಿ ಸಾಧ್ವಿಗರುಹಿದ ಗುರುವಿನಾಣತಿಯಾ

೬

ಧರೆಯೊಳಗೆ ಥರಥರನೆ ನಡುಗುತ
ಬರಸಿಡಿಲು ಹೊಡೆದಂತೆಯಾಗುತ
ಗುರುವಿನಾಣತಿಕೇಳಿದಾ ವೀರಮ್ಮ ಸತಿಯುಳಿಗೇ
ತರಳನ ಮುಖವಿಡಿದ ತಾಯಿಗಾ
ತರಣಿ ಕಡು ತಾಪವದು ಆಗಲು
ತರಳ ಪರಮನ ರೂಪವೆನ್ನುತ ಹಿಂದೆ ಸರಿಯುತಲೀ

೭

ಅಕಟಕಟ ವಿಧಿಯಾಟವೇನೋ
ಸಕಲಲೋಕವ ನಡೆಸುವಂಥಹ
ಅಕಳಂಕ ಹರನೀನಾಡುವ ದ್ಯೂತ ಕಾರ್ಯದೊಳಗೇ
ಸಕಲ ಜೀವಿಗಳಾಗಿ ಕಾಯ್ದುಳು
ಮುಕುತಿದೊರೆಯುವ ಪರಿಯ ತಿಳಿಸುವ
ಸಕಲ ಕಾರಣನಾದ ಹರನೆ ಗುರುರೂಪಧಿ ಬಂದೂ

೮

ಲೋಕಕಲ್ಯಾಣವನು ಮಾಡಲು
ಏಕಮೇವಾದ್ವಿತೀಯ ನೆನಿಸುತ
ನಾಕವನೆಯಿಳೆಯೊಳಗೆ ಮಾಡುವ ಕಾರಣಿಕ ನೀನೂ
ಲಾಕುಳವನೀಹಿಡಿದು ಯೋಗದಿ
ಲೋಕದೊಳಗಿರುವಂಥ ಜನರನು
ಏಕಸ್ಥಿರ ಮನದೆತ್ತಿ ಹರಸುತ ಬಾಳುಶಿವಕಂದಾ

೯

ಸುಖದುಃಖದಶ್ರುಗಳ ಮಿಶ್ರದಿ
ನಖಶಿಖಾಂತದಿವೊಮ್ಮೆ ನೋಡುತ
ನಿಖಿಲವನು ಬಲ್ಲಂಥ ಮಗನನು ದೂರದಿಂಹರಸೀ
ಮುಖವ ನೋಡುತ ಹಿಗ್ಗಿಮನದೊಳು
ನಿಖರ ಮನದೊಳಗಿರುವ ಸತಿಯುಳ
ಸುಖಮೊಗದ ತಾವರೆಗೆ ತಾ ಬಸವಯ್ಯರವಿಯಾಗೀ

೧೦

ಕೊನೆಯ ಕಣ್ಣೀರನ್ನು ಬತ್ತಿಸಿ
ಜನನಿಜನಕರ ಕಂಡುವೊಂದಿಸಿ
ತನಯ ತನ್ನವರೊಡನೆ ಬಂದನು ಸ್ವಾಮಿಗಳ ಮಠಕೇ
ಅನುಪಮದ ಮಗನನ್ನು ಅರ್ಪಿಸಿ
ಅನುನಯದಿ ಗುರುಗಳಿಗೆ ವೊಂದಿಸಿ
ಘನದ ಶ್ರೀ ಗುರುವರನ ಕರುಣೆಗೆ ಪಾತ್ರರಾಗುತಲೀ

೧೧

ಚನ್ನಮಲ್ಲಸ್ವಾಮಿ ಕೃಪೆಯಲಾ
ಚನ್ನಹುಡುಗನ ಮೈಯದಡವುತ
ಚನ್ನಸತಿ ವೀರಮ್ಮ ಜೊತೆಯಲಿ ಬಸವಯ್ಯನ್ಹರಸೀ
ಜೊನ್ನ ತಂಪಿನ ನಗುವ ಮೊಗವದು
ಇನ್ನು ನೆನಸದೆ ಪೂರ್ವ ಚರಿತೆಯು
ಸನ್ನಿಹಿತ ಶಿವಯೋಗ ಕನಸನು ಕಂಡು ಪರಮನಲೀ

೧೨

ಚಟುವಟಿಕೆಯ ವಿಲಕ್ಷಣದ ಮಗು
ವಟುವು ರೂಪವ ಧರಿಸಿ ನಿಂತಿಹ
ವಟುವು ಮನಸನು ಕಲ್ಲುಮಾಡುತನ್ವರ್ಥನಾಮದೊಳೂ
ದಿಟದಿ ಪೂರ್ವಾಶ್ರಯವನಿರಶನ
ಪಟುತರದಿ ಪಲ್ಲಟವಗೊಳಿಸುತ
ಘಟದಿ ಮಠಗಳು ಬೆಳಗಬೇಕೆಂದುದಯಿಸಿದವಟುವೂ

೧೩

ಮಗುವ ಮಠಕರ್ಪಿಸಿದ ತಾಯ್ತಂ
ದೆಗಳ ತ್ಯಾಗಕೆ ಹೊಗಳಿಹರಸುತ
ನಿಗಮಗೋಚರದಂತೆಯಿರುವಾವಟುವಿಗೊಂದಿಸು ತಾ
ನಿಗದಿಯಲಿ ಮಹಸ್ವಾಮಿಯಾಗುವ
ಅಗಣಿತದ ಶಿವಯೋಗಿಯಾಗುವ
ಜಗದಿ ಮೆರೆಯುವನೆಂದು ಜನಗಳು ಹರುಷದಲಿ ಕೂಡೀ

೧೪

ಗುರುಗಳ ತ್ರಿಕಾಲ ಜ್ಞಾನದಿ
ಉರುತರದ ವಟುವನ್ನೂ ಆರಿಸಿ
ಗುರುತರ ಹೊಣೆಯನ್ನು ತಿಳಿದ ತ್ರಿಭಾಷೆ ಪಂಡಿತರೂ
ಹರನ ಕರುಣೋದಯದಿ ಬೆಳಗುವ
ಮೆರೆವ ಚರವರನನ್ನು ಪಡೆದಿಹ
ಗುರುವೆ ಶ್ರೀ ಚನ್ನಮಲ್ಲಸ್ವಾಮಿಯು ಧನ್ಯಜಗದೊಳಗೇ

೧೫

ಊರ ಭಕ್ತರು ಮುದದಿ ಕೂಡಿಯೆ
ಭೂರಿಗಣಗಳ ಪ್ರಸ್ತಮಾಡುತ
ಭೂರಿದಕ್ಷಿಣೆ ಕೊಟ್ಟು ಪಾಮನ್ನೆಲ್ಲೂರು ಜನಧನ್ಯಾ
ಓರಗೆಯ ಹುಡುಗರನುನೋಡುತ
ಸಾರೆಹೋಗಿ ಸಂತೈಸುತೆಲ್ಲರ
ಮೋರೆ ನೋಡುತ ಮನದಿ ಮಿಡುಕುತ ವಟುವು ಚಿಂತಿಸಿದಾ

೧೬

ಆಗಲಿ ಹೋಗಲಿಬೇಕು ತಾಯ್ತಂ
ದೆಗಳ ಜೊತೆಯಲಿ ಮಿತ್ರರೆಲ್ಲರ
ಯುಗ ಪ್ರವರ್ತಕನಾಗಿ ಮೆರೆಯುವ ವೀರಶಿವಯೋಗೀ
ಬಗೆಬಗೆಯ ರೀತಿಯಲಿ ನೋಡಿದ
ಬಗೆಯ ಘಟ್ಟಿಯ ಮಾಡಿಕೊಂಡನು
ಜಗದಿ ಜನಗಳ ಕ್ಷೇಮಕಾಗಿಯೆ ಸ್ವಾಮಿಯಾಗುವನೂ

೧೭

ಯೆನ್ನುವಾ ಭಾವದಲಿ ನಿಂತಿಹ
ಸನ್ನಿಧಾನದ ಆಜ್ಞೆಯಂತೆಯೆ
ಸನ್ನದ್ಧದಲಿ ಹತ್ತಿ ಎತ್ತಿನ ಬಂಡಿಯಲಿ ಕುಳಿತಾ
ಸನ್ನೆ ಕೈಮಾಡುತ್ತ ಹೇಳಿದ
ತನ್ನ ತಂದವರನ್ನು ನೋಡುತ
ಬಿನ್ನವಿಸಿ ಹರನಲ್ಲಿ ಪಡೆದವರ್ಮ್ಮಕುತಿಗಾವಟುವೂ

೧೮

ಗುರು ಜೊತೆಗೆ ಪ್ರಯಾಣ ಮಾಡಿದ
ತರಳನಗಲಿಕೆ ಹೃದಯ ಭಾರದಿ
ತರ ತರದ ಭಾವದಲಿ ಮಿದುಕುತ ಕಣ್ಣನೊರಸುತಲೀ
ಸರಳ ಮಾರ್ಗದಿ ನಡೆಯುತಲಿತಾ
ಸರಗಂಟೆ ಕೊರಳಿನ ಕೋಡಣಸು
ಸರಗೊಂಡೆಗಳ ಧರಿಸಿರುವ ಜೂಲೆತ್ತಿನಾ ಬಂಡೀ

೧೯

ಮೆಲ್ಲ ಮೆಲ್ಲನೆ ಮೈಯತೊನೆಯುತ
ಮೆಲ್ಲ ಮೆಲ್ಲನೆ ಗೋಣು ಹಾಕುತ
ಸಲ್ಲಲಿತ ಬಾಲಗಳನೆತ್ತುತ ಬಂಡಿಯೆಳೆದೋಡೀ
ಮೆಲ್ಲನೆ ಮರೆಯಾಗ್ವ ಬಂಡಿಯಾ
ಯೆಲ್ಲ ಜನಗಳು ನೋಡೆನೋಡುತ
ಎಲ್ಲೆದಾಟುವವರಗೆ ಕಳುಹಿಸಿ ಹಿಂತಿರುಗಿವೂರಿಗೇ

೨೦

ತೊನೆದು ಓಡುವ ಎತ್ತುಗಳ ತಾ
ಕನಕಗಿರಿಗಭಿಮುಖವ ಮಾಡಿಯೆ
ಕನಕ ಕೋಡಣಸುಗಳ ಗಗ್ಗರಿ ನಾದದಲಿ ನಡೆದೂ
ಮಿನುಗಿ ಹೊಳೆಯುವ ಜೂಲುಗನ್ನಡಿ
ಇನನ ಬೆಳಕಲಿ ತೊಳಗಿ ಬೆಳಗುವ
ಮನಸಿ ಜಾರಿಯ ಕೃಪೆಯ ಕಂದನ ಹೊತ್ತ ಎತ್ತುಗಳೂ

೨೧

ಮೊದಲೆ ವಿಷಯವ ತಿಳಿದ ಜನಗಳು
ಸದು ಹೃದಯದಲಿ ಯಿದಿರುಗೊಳ್ಳುವ
ಸದಯಗುರು ಜೊತೆಯಿರುವ ವಟುವನು ಬಂಡಿಯಿಂದಿಳಿಸೀ
ಮುದದಿ ಗುರುವಿನ ತೋಳು ಹಿಡಿಯುತ
ಹದುಳದಲಿಯಿಳಿಸುತ್ತ ವಂದಿಸಿ
ಚದುರ ವಟುವಿನ ಜೊತೆಗೆ ಗುರುಗಳ ಕರೆದೊಯ್ದು ಮಠಕೇ

ನಾಲ್ಕನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೪ ಕ್ಕಂ ಪದಗಳು ೧೧೨ ಕ್ಕಂ ಮಂಗಳಂ

# ಐದನೆಯ ಸಂಧಿ

**ಸೂಚನೆ :–**

ಗುರು ಸೇವೆ ಸಂತಸದಿ ಮಾಡುತ
ಗುರು ಕರುಣೆ ದೃಢ ಭಕ್ತಿ ಪಡೆಯುತ
ವರಶಕ್ತಿಯಿಂ ವೀರಶೈವರ ಗ್ರಂಥಗಳ ನೋಡೀ

೧

ಓಂನಮೋ ಸಿದ್ಧಿಗಣನಾಯಕ
ಓಂನಮೋ ಬುದ್ಧಿ ಪ್ರದಾಯಕ
ಓಂನಮೋ ಸಿದ್ಧಿ ಬುದ್ಧಿಗಳನೀವ ಗಣಗಳೊಡೆಯಾ
ಓಂನಮೋ ಜ್ಞಾನ ಪ್ರದೀಪನೆ
ಓಂನಮೋ ಕ್ರಿಯಾ ಪ್ರದೀಪನೆ
ಓಂನಮೋ ಜ್ಞಾನ ಕ್ರಿಯೋಭಯತ್ಮನೆ ರಕ್ಷಿಸೂ

೨

ಬೆಳಗಿನಾ ಜಾವದಲಿ ಯೇಳುತ
ತೊಳೆದು ಮುಖವನು ಭಸ್ಮ ಧರಿಸಿದ
ಬಳಿಕ ಗುರುಗಳ ಪಾದಕೆರಗಿಯೆ ಪತ್ರೆತರಲೆಳಸೀ
ಇಳೆಯೊಳುದಯದ ಪೂರ್ವದಿಶೆಯಲಿ
ನಳಿನಸಖ ಕಂಗೊಳಿಸಿ ಕಿರಣದಿ
ಬೆಳಗಿ ಪ್ರಕೃತಿಯ ಚೇತನಕೆ ರವಿ ಸಾಕ್ಷಿಯ ಕಂಡೂ

೩

ಘನದಿ ಬೆಳೆದಿಹ ಪತ್ರೆಗಿಡವನು
ಮನವು ನೆಮ್ಮದಿಯಿಂದ ನೋಡುತ
ನೆನೆದು ಯಿಬ್ಬನಿಯಿಂದ ದಳಗಳು ತೊಳಗಿ ಬೆಳಗುತಲೀ
ತೊನೆವ ರೆಂಬೆಗಳನ್ನು ಹಿಡಿಯುತ
ತನುವು ಪುಳಕದಿ ಬಿಡಿಸಿದಳಗಳ
ನನುನಯದಿ ಪ್ರತೆಯನು ಬುಟ್ಟಿಗೆ ಹಾಕಿಕೊಳ್ಳುತಲೀ

೪

ತೋಟದೊಳಗಿಹ ಪುಷ್ಪಗಳ ತಾ
ನೋಟದಿಂ ಹಿರಿಹಿಗ್ಗುತಲಿ ತಾ
ಬೇಟ ಭಾವದಿ ಬಿಡಿಸಿ ಪುಷ್ಪಾರ್ಚಯವ ಮಾಡುತಲೀ
ಮಾಟದಂತೆಯು ಮನವನಿರಿಸುತ
ಕೂಟವದುವೇ ಧರ್ಮ ರೂಪದಿ
ಮಾಟಕೂಟಗಳೆರಡು ಓತ ಪ್ರೋತದಿಂ ಕೂಡೀ

೫

ವಿರತಗುರುವಿಗೆ ಸೇವೆ ಮಾಡುವ
ವರದಿಷ್ಟಲಿಂಗದ ಪೂಜೆನೋ
ಡುರುತರ ಗುರು ಕ್ರಮದ ಪೂಜೆಯು ಕಂಡು ಹಿಗ್ಗುತಲೀ
ಗುರುವ ದಿವ್ಯದ ಪಾದತೊಳೆಯುತ
ಗುರುವ ಶ್ರೀ ಪಾದಗಳ ಪೂಜಿಸಿ
ಗುರುವ ಪಾದೋದಕ ಪ್ರಸಾದವ ಪಡೆದುಕೊಳ್ಳುತಾ

೬

ನಿಜಗುಣರ ಶಾಸ್ತ್ರಗಳ ನೋಡುತ
ನಿಜಧರ್ಮವನು ಗುರುವಿಂದ ತಿಳಿದು
ನಿಜದ ನಿಲವಿನ ಗುರುವಿನೊಲುಮೆಗೆ ಪಾತ್ರನಾಗುತಲೀ
ನಿಜದಿ ಬೆಳಗುವ ನೀತಿ ಕೃತಿಗಳ
ನಿಜಭಾವದಿಂ ಅಭ್ಯಸಿಸಿದಾ
ನಿಜಬೋಧೆಯ ಸಿದ್ಧಾಂತ ಶಿಖಾಮಣಿ ಕೇಳಿನಲಿದೂ

೭

ವೀರಶೈವದ ಧರ್ಮ ತಿರುಳಿನ
ಸಾರ ಸವಿಯುತ ಗುರುವ ಕೃಪೆಯಲಿ
ಪಾರಮಾರ್ಥದ ವಿದ್ಯೆಯೇ ತಾ ವಿದ್ಯೆಯೆಂದೆನಿಸೀ
ಮೇರುಕೃತಿಗಳ ನೋಡಿದರು ತಾ
ವಿಾರಿ ಮರೆಯದೆ ಭಕ್ತಿ ಭಾವದಿ
ಮಾರಹರ ಯೋಗವನೆ ಬಯಸಿದ ವಟುವು ಕಿಂಕರದೀ

೮

ಇನಿತು ಪಾಂಡಿತ್ಯವನು ಪಡೆದಿಹ
ಯೆನಿತು ತೋರದೆ ಬಾಹ್ಯದೊಳಗಾ
ಮನವು ಘನದೊಳು ನಿಲಿಸಿದಾತ ಸಮತ್ವಯೋಗದೊಳೂ
ವಿನಯದಿಂದಲಿ ಶಿವನವೊಲುಮೆಯು
ವಿನಯ ವಿದ್ಯೆಕೆ ಭೂಷಣವು ತಾ
ವಿನಯ ವಟುವಿನ ವಿಭುದತೆಗೆತಾ ಗುರುವು ಮೆಚ್ಚುತಲೀ

೯

ವರಶೈವಸಿದ್ಧಾಂತದೊಳಗಿಹ
ವರಷಡಧ್ವದ ತತ್ವ ಮಾರ್ಗವು
ವರವೀರಶೈವರು ವೊಪ್ಪಿದರು ಮಾರ್ಗ ಬೇರಾಗೀ
ಪರಮ ತತ್ವ ವಿವೇಚನೆಯುತಾ
ಸರಳಷಟ್‌ಸ್ಥಲ ಮಾರ್ಗದಿಂ
ದಿರುವಂಥ ಮುವತ್ತಾರು ಸ್ಥಲಗಳು ಭಾಗಮಾಡೀ

೧೦

ಲಿಂಗದಾ ಹನ್ನೊಂದು ತತ್ವವ
ಅಂಗದಿಪ್ಪತ್ತೈದು ತತ್ವವ
ಮಂಗಲದಿ ಭಾಗವನು ಮಾಡಿಯೆ ತತ್ವಬದ್ಧದೊಳೂ
ಲಿಂಗ ಅಂಗದ ತತ್ವಕೂಡಿಸಿ
ಲಿಂಗ ಅಂಗದ ಸಾಮರಸ್ಯದಿ
ತುಂಗ ತತ್‌ತ್ವಂ ಅಸಿ ಪದಗಳ ಸಮನ್ವಯವಾಗೀ

೧೧

ಗುರುಲಿಂಗ ಜಂಗಮ ಶಿವನಾಗಿ
ಗುರು ತತ್ವ ಬೋಧೆಯನು ಮಾಡುತ
ವರಲಿಂಗ ಪೂಜೆಯೋಳ್ ನಡೆತಿದ್ದಿ ಜಂಗಮದೀ
ಪರಿಕಿಸಲು ತಾ ಲಿಂಗದಾಮುಖ
ವರ ಜಂಗಮವು ಯೆಂದೆನಿಸಿದಾ
ಪರಿ ತಿಳಿದು ನೀಡುತ ಧನ್ಯದಾ ವೀರಶೈವದಲೀ

೧೨

ಲಿಂಗ ಸಿದ್ಧಿಯೆ ಲಿಂಗಾಚಾರ
ಲಿಂಗವೊಪ್ಪಿದ ನಡೆಸದಾಚಾ
ರಂಗ ಭೇದ ಬುದ್ಧಿಯಾಚರಿಸಿ ಶಿವಾಚಾರವದೂ
ಲಿಂಗವಂತರ ಧರ್ಮದ್ರೋಹಕೆ
ಅಂಗ ಗುಣದಲಿ ಮನವುಯೆಳೆಸಿಹ
ಅಂಗದುರ್ಗುಣನಾಶವೇ ತಾಗಣಾಚಾರವದೂ

೧೩

ಚತುರನಾಚಾರಗಳ ಪೂರ್ಣದಿ
ಅತಿಗರ್ವವನು ತಾನು ತೋರಿಸಿ
ಅತಿಗಮಿಸಿ ನಡೆಯದಾ ಕಿಂಕರವೆ ಭೃತ್ಯಾಚಾರಾ
ಅತಿಜಾಗರದ ನಡೆಯಿಂದ ತಾ
ನತಿಶಯದ ದಾಸೋಹ ಭಾವದಿ
ಹಿತದಿ ಪಂಚಾಚಾರ ಪ್ರಾಣಗಳಾಗಿ ನಡೆಯುತಲೀ

೧೪

ಗುರುಲಿಂಗ ಜಂಗಮ ಪೂಜೆಯಾ
ವರಮೂರ್ತಿಗಳು ತಾವೆನಿಸಿಕೊಂ
ಡಿರುತ ವಿಭೂತಿ ಮಂತ್ರ ರುದ್ರಾಕ್ಷಿ ಸಾಧನೆಯೋಳ್
ವರದ ಪೂಜಾಮೂರ್ತಿಯಿಂದಲಿ
ದೊರೆತ ಪಾದೋದಕ ಪ್ರಸಾದ
ಭರಿತದಿಂದಷ್ಟಾವರಣವೇ ಅಂಗವಾಗಿರುತಾ

೧೫

ಸದುಭಕುತಿಯಾಚಾರ ಭಕ್ತನು
ಸದುವೀರವ್ರತಿ ಮಹೇಶ್ವರನು
ಸದಯದಿಂದ ಪ್ರಸಾದ ಪಡೆದವ ಪ್ರಸಾದಿಯಾಗೀ
ಇದೆ ಲಿಂಗಮಯ ಪ್ರಾಣಲಿಂಗಿಯು
ಸದಮಲದಾ ವಿಶುದ್ಧ ಶರಣನು
ಸದರದಲಿ ಸಮರಸವ ಪಡೆವುದೆ ಐಕ್ಯಲಕ್ಷಣವೂ

೧೬

ಜಗವು ಮಿಥ್ಯವುಯೆಂದು ತಿಳಿಯದೆ
ಜಗವು ಸತ್ಯವು ಶಿವನ ಲೀಲೆಯು
ಜಗದ ಭೋಗವು ವಿಷಯ ರೂಪದಿ ಹೇಹವಾಗಿಹುದೂ
ಬಗೆಯೆ ಕೇವಲ ದ್ವೈತವಲ್ಲವು
ಸೊಗಸು ಶಕ್ತಿ ವಿಶಿಷ್ಟಾದ್ವೈತವು
ಜಗದ ಭೋಗ ಪ್ರಸಾದ ರೂಪವೆ ಉಪಾದೇಯವೂ

೧೭

ನೀಗಿ ಮಲತ್ರಯ ಬಂಧಗಳನು
ಸಾಗಿ ಲಿಂಗತ್ರಯವನಳಿಸುತ
ಯೋಗ ಶಿವಯೋಗದಲಿ ನಿಲ್ಲುತ ಸಾಮರಸ್ಯದಲೀ
ಭೋಗ ಕ್ರಮ ಷಟ್‌ಸ್ಥಲದಾ
ಮಾರ್ಗ ತತ್ವಬದ್ಧದಿ ಹೇಳಿದ
ಯೋಗವೆ ಶಿವಯೋಗ ಲಿಂಗದ ಭೋಗೋಪಭೋಗವೂ

೧೮

ಒಂದು ದಿನವೇಕಾಂತದಲಿತಾ
ಚಂದ ನಿಜಗುಣ ಶಿವಯೋಗಿಯಾ
ನಂದದಾ ಕೈವಲ್ಯಪದ್ಧತಿಯ ಕಾವ್ಯವನುವೋದೀ
ಅಂದು ಮನಸಿನ ವಿಷಯಕಲುಕುತ
ಕುಂದುಗೊಳಿಸುವ ಕರಣಗಳ ಜೊತೆ
ಚಂದ ಯುದ್ಧವಮಾಡಿತಾ ವೈರಾಗ್ಯ ಕಡೆ ತಿರುಗೀ

೧೯

ಶರಣರೊಚನಗಳನ್ನು ನೋಡುತ
ಗುರುತರದ ಸಾರವನು ಸವಿಯುತ
ಗುರುರೂಪದಾ ಮುಪ್ಪಿನ ಷಡಕ್ಷರಿ ಕವಿನೆನೆಯುತಾ
ಕರಣಗಳ ಪಳಗಿಸುತ ವಿಜಯದಿ
ವಿರತಿ ಭಾವವು ಬಲಿತು ಬೆಳೆಯಲು
ಗುರುವಿನೊಲುಮೆಗೆ ಪಾತ್ರನಾದ ವಟುವು ಪ್ರಬುದ್ಧದಲೀ

೨೦

ಹೊಳೆವ ದೇಹದ ಕಾಂತಿಯಿಂದಲಿ
ತೊಳಗಿ ಬೆಳಗುವ ಮುಖದ ಶಾಂತಿಯು
ತೊಳಲುವಂಥಹ ಮನವ ಸ್ಥಿರದಲಿ ನಿಲಿಸಿದಯೋಗೀ
ನಳಿನ ಮುಖಿಯರ ಮನವ ಕದಲದ
ತಿಳಿನೀರ ಶುಭ್ರದ ಕಳೆಯಲಿರು
ವಳಿ ಮನವದಳಿಸುತ್ತ ಶಿವಸೌಂದರ್ಯದಿಂ ಕೂಡೀ

೨೧

ಅರಿವೇ ಗುರು ಅನುಭವವೆ ಲಿಂಗ
ಪರಮಾನಂದವೇ ಜಂಗಮವು
ಹರನು ಲಿಂಗದ ರೂಪವೆಂದೇ ತಿಳಿದು ಪೂಜಿಸುತಾ
ವರದಿಷ್ಟಲಿಂಗವ ನಗಲದಲೆ
ಕೊರಳಲಿ ಧರಿಸಿ ಪೂಜಿಸಿ ಭಕ್ತಿ
ಪರವಶದಲ್ಲಿಯಿರುತಲಿ ಕೊನೆವರೆಗೆ ಪೂಜಿಸುತಾ

೨೨

ಗುರುವೆ ದೀಕ್ಷಾ ಮೂರ್ತಿಯೆನಿಸಿಹ
ವರಲಿಂಗವೆ ಪೂಜಾಮೂರ್ತಿಯು
ವರಜಂಗವನೇತಾ ಭೋಗಮೂರ್ತಿಯಾಗಿ ಬೆಳಗೀ
ಗುರುಲಿಂಗ ಜಂಗಮದಾಚರಣೆ
ಸರಸಸಹಜಾಚರಣೆಯಿಂದಲಿ
ವರಗುರು ಜಂಗಮರಿರದಿರೆ ಸಂಬಂಧದಾಚರಣೇ

೨೩

ಗುರುವಿಗೆ ತನುವನ್ನು ಕೊಡುತಲಿ
ಕರದಿಷ್ಟಲಿಂಗಕೆ ಮನವನ್ನು
ಹರರೂಪದಾ ಜಂಗವಕೆ ನೀ ಧನವ ಕೊಡಬೇಕೂ
ಧರೆಯೊಳಹಂಕಾರ ತೋರದೇ
ಧರೆಯೊಳಗೆ ಮಮಕಾರವಿಲ್ಲದೆ
ಪರಮಲಿಂಗೋಪ ಭೋಗದಿಂದ ಯೋಗಿಯಾಗುತಲೀ

೨೪

ಮೂರು ಭೇದಗಳಿಂದ ಜಂಗಮ
ಸೇರಿ ಸ್ವಯ ಚರಪರಗಳಿಂದಲಿ
ಮೂರು ಕ್ರಮದಲಿ ಕೂಡಿ ಭಕ್ತಿಜ್ಞಾನ ವಿರತಿಯಲೀ
ಮೂರು ಕೂಡಿರೆ ಶಿವನರೂಪವು
ಮೂರು ರೂಪದಿ ಬರುವ ಜಂಗಮ
ಸಾರ ಸಂಸಾರಿಗಳ ರಕ್ಷಣೆ ಮಾಡಿ ಧರ್ಮದಲೀ

೨೫

ಚಾಮರಸ ಕವಿಯಿಂದ ರಚಿಸಿದ
ಕೋಮಲದ ಪ್ರಭುಲಿಂಗಲೀಲೆಯ
ಪ್ರೇಮ ಭಕ್ತಿಯ ಭಾವದಿಂದಲಿ ವೋದಿಮುಗಿಸಿದನೂ
ನೇಮದಿಂದಲಿ ನಡೆದು ಧರ್ಮದಿ
ತಾಮಸವ ಕಳೆಯಲ್ಕೆ ಜಗದೊಳು
ಸಾಮರಸ್ಯದಿ ಯಿತರ ಗುರುಗ್ರಂಥಗಳ ನೋದೀ

ಐದನೆಯ ಸಂಧಿ ಸಂಪೂರ್ಣಂ

ಅಂತು ಸಂದಿ ೫ ಕ್ಕಂ ಪದಗಳು ೧೩೭ ಕ್ಕಂ ಮಂಗಳಂ

# ಆರನೆಯ ಸಂಧಿ

**ಸೂಚನೆ :–**

ವಿಮಲ ಶ್ರೀಗುರು ಸೇವೆ ಮಾಡಿದ
ಸುಮನದಿ ಅನುಗ್ರಹಿಸಿವಟುವಿಗೆ
ಸುಮತಿ ಶ್ರೀಚನ್ನಬಸವ ದೇಶಿಕರೆಂಬ ನಾಮದೊಳೂ

೧

ಸತತ ಯತ್ನದಿ ಸುಕೃತ ಕಾರ್ಯವ
ಚತುರ ತನದಲಿ ಮಾಡುವವರಿಗೆ
ಚ್ಯುತಿಯು ಬಾರದೆ ಸದ್ಗತಿಯು ಸಿಗುವುದೀಯಿಳೆಯೊಳಗೇ
ಅತಿ ಚಪಲ ವಿಷಯುಗಳಿಗೆಳಸದೆ
ತತಿಗಾಲದಲಿ ಮಹಕಾರ್ಯಗಳ
ನತಿಶಯ ಭಕ್ತಿಯಲಿ ಮಾಡ್ವಗೆ ಕೃಪೆಮಾಡು ಮಹೇಶಾ

೨

ಗುರುವು ಶಿವ ಪೂಜೆಯನು ಮುಗಿಸುತ
ಮರೆತು ಕನಕದ ನಂದಿಯುಂಗುರ
ಬೆರಳಿಗಿಡದಲೇ ಬಿಟ್ಟು ಗುರುವೆದ್ದು ಹೊರಬರುತಲೀ
ಗುರುವಿನಾ ಗದ್ದುಗೆಯು ಕಂಬಳಿ
ವರವಟುವು ಮಡಿಸುತ್ತ ಗಮನಿಸ
ದಿರೆ ಜಾರಿ ಬಿದ್ದಿತು ಕೆಳಗಿನ ಯೋಗಸಮಾಧಿಯಲೀ

೩

ಇರುಳು ಪೂಜೆಯ ಮಾಡುವಾಗಲೆ
ಗುರುವಿಗಾಯಿತು ನೆನಪುವುಂಗುರ
ಯಿರದೆ ಬೆರಳಲಿ ವಟುವ ಕೇಳುತ ಯೆಲ್ಲಿಯಿದೆಯೆಂದೂ
ಗುರುವು ಸನಿಹದಲಿದ್ದ ವಟುವಾ
ಗುರುವಿನಾ ಮಾತನ್ನು ಕೇಳುತ
ಸರಳ ಭಾವದಿ ಹೇಳಿದನು ತಾ ತಿಳಿಯದೇನೊಂದೂ

೪

ನಿನ್ನ ಹೊರತಿನ್ನಾರ ಕೇಳಲಿ
ನನ್ನಿಯಲಿ ಹೇಳೆಂದು ಗುರುಗಳು
ಸನ್ನೆ ಕರವನು ತೋರಿವಟುವಿಗೆ ಮೌನದಲಿ ಗುರುವೂ
ಖಿನ್ನ ಮನದಲಿ ಕುಸಿದು ಕುಳಿತನು
ಬನ್ನ ತಂದಪವಾದ ತೊಲಗಿಸು
ನನ್ನಿಯ ಹೊರಗೆಡಹುಯೆಂದಾವಟುವು ಶಿವನ ಕೇಳೀ

೫

ಛಲದಿ ಪದ್ಮಾಸನವ ಹಾಕುತ
ಅಲುಗದಲೆ ಕಣ್ಮುಚ್ಚಿಧ್ಯಾದಿ
ಕುಳಿತು ವಟುವಾ ಜಪಿಸುತಾ ಶಿವಯೋಗ ಮುಖದೊಳಗೇ
ಕೆಳಗಿರುವಾ ಸಮಾಧಿಯಿಂದಲಿ
ಬಲುಹಿನಿಂ ವುಂಗುರವ ಹಿಡಿದಿಹ
ಚಲುವ ನಾಗರಹಾವು ಬಂದಾತನ್ನ ಹೆಡೆಯೆತ್ತೀ

೬

ಇದನು ಕಂಡಾ ವಿಸ್ಮಯದಿಗುರು
ಸದರದಿಂದಲಿ ವಟುವನೆಬ್ಬಿಸಿ
ಬದಿಯಲಿರುವಾಹಾವು ತೋರಿಸಿ ನೋಡುತಲಿ ಗುರುವೂ
ಸದಯ ಶಿವನನು ಹೊಗಳಿವೊಂದಿಸಿ
ಹದುಳದಲಿ ಯುಂಗುರವ ತೆಗೆದಾ
ಸದಯ ಗುರುವಿಗೆ ಕೊಟ್ಟನಾವಟು ಭಕ್ತಿ ಭಾವದಲೀ

೭

ವಿನಯದಿಂದಲಿ ನಮಿಸಿಹಾವಿಗೆ
ಇನಿಸು ಹಾಲನು ಕುಡಿಸಬೇಕೆಂ
ದನುಕಂಪದಿಂ ವಟುವು ಹಾಲನು ತರಲೆಳಸಿ ಹೋಗೀ
ಕೊನೆಯ ಕೋಣೆಯಲಿರುವ ಸ್ತ್ರೀಯು
ಅನುರಕ್ತಿಯಿಂ ಹಾಲುಕೊಡುತಲಿ
ಅನುಷ್ಠಮುದ ಕೈಯು ಹಿಡಿಯಲು ಬೆಂಕಿತರಸುಡುತಾಗಾ

೮

ಕಾಮುಕದಿ ಕಂಡಂಥ ಹೆಣ್ಣಿಗೆ
ಕೋಮಲದಿ ಕೈಕೊಸರಿ ನಡೆಯುತ
ಸೋಮಧರ ಕೃಪೆಯಿಂದ ಹಾಲನು ತಂದು ವಟುವಾಗಾ
ಭೂಮಗುರುವಿನೆದುರಲ್ಲಿಯಿರುವ
ರಾಮನಾಗರಹಾವಿಗಾವಟು
ರಾಮಭಾವದಿ ಹಾಲು ಕುಡಿಸಿದ ಮೇಲೆ ಹೊರಕಳಿಸೀ

೯

ವಿರತ ಮಠದಲಿ ಕೆಲಸ ಮಾಡುವ
ವಿರಹಿ ಹೆಣ್ಣಿನ ಕೈಯಸುಟ್ಟಿರೆ
ಅರಚುತ್ತ ಬಂದೋಡಿ ಗುರುವಿನ ಚರಣಕೆರಗುತಲೀ
ಪರಿಚರದಿ ಮಾಡಿರುವ ತಪ್ಪನು
ಪರಿಗಣಿಸದಲೆ ತಾ ದಯೆತೋರಿ
ಹರಸಬೇಕೆಂದಾಗ ಕೈಮುಗಿದಾಕೆ ನಿಂತಿರಲೂ

೧೦

ಗುರುವು ನೋಡುತ ಆಕೆ ಕೈಯನು
ವರವಿಭೂತಿಯ ಹಚ್ಚುಯೆನ್ನುತ
ಗುರು ಹೇಳಿ ಮನ್ನಿಸಿದಾಕೆಯುನು ಮಠದಿಂದ ಕಳಿಸೀ
ಹರಕಳೆಯುಲಿರುವಂಥ ವಟುವನು
ಭರದಿ ಬಿಗಿದಪ್ಪುತಲಿ ಹರುಷದಿ
ಯೆರಡು ಘಟನೆಗಳನ್ನು ಮಾಡಿದ ವಟುವಹೊಗಳುತಲೀ

೧೧

ಹೊನ್ನು ಹೆಣ್ಣುಗಳಾಸೆಯಿರದಲೆ
ಚನ್ನ ಚಲುವಿನ ವಟುವನೋಡುತ
ಚನ್ನಬಸವಾಯೆಂದು ಕರೆದಭಿನಾಮವನುಯಿಡುತಾ
ಚನ್ನನಡೆನುಡಿ ಜ್ಞಾನನಿಧಿಯಾ
ಚನ್ನಬಸವ ದೇಶಿಕರ ಹರಸಿ
ಸನ್ನಿಧಿಗೆ ಹೆಸರನ್ನು ತರುತಲಿ ಜಗದಿ ಬೆಳಗೆಂದೂ

೧೨

ವೇದಗಳು ಶಾಸಿಸುತ ಶಾಸ್ತ್ರವೂ
ವಾದರಹಿತದ ಪ್ರಭುಸಮ್ಮಿತ
ಆದರದಾ ಪುರಾಣಗಳೇ ಸುಹೃತ್ ಸಮ್ಮಿತವೂ
ಆದಿ ಕಾಲದ ಕಾವ್ಯಗಳು ತಾ
ಆಧುನಿಕ ಕಾವ್ಯಗಳವರೆಗೂ
ಮೋದಗೊಳಿಸುವ ಕಾವ್ಯಗಳೇ ಕಾಂತಾಸಮ್ಮಿತವೂ

೧೩

ಸಕಲ ಶಾಸ್ತ್ರ ಪುರಾಣ ಕಾವ್ಯಗ
ಳಖಿಲ ಗ್ರಂಥಗಳೋದಿದರುತಾ
ಅಕಲಂಕ ಗುರುವಿನ ಬೋಧೆಯಾಗಲದುಬಹುಚಲುವೂ
ನಿಖಿಲ ತಿಳಿದಿರುವಂಥ ಗುರುಗಳ
ನಿಕಟವರ್ತಿಯೇ ಆಗಿ ವಟುವು
ನಿಕಷದಿಂದಲಿ ಶುದ್ಧಿಯಾನಾಯಕನನಭ್ಯುದಯಾ

೧೪

ವಿರತಿ ಭಕ್ತಿಯ ಜ್ಞಾನಗಳು ತಾ
ಸರಳ ಸಂಗಮುವದಾಗಿರೆ
ಹರಸ್ವರೂಪದಭಿವ್ಯಕ್ತವಾಜಂಗಮನಾಗೀ
ಗುರುವು ಬೋಧಿಸಿದಂಥಜ್ಞಾನದಿ
ತಿರೆಯ ಜನರಾಧರ್ಮರಕ್ಷಣೆ
ಪರಮಲಿಂಗಾನಂದದಿಂದಲಿ ಮಾಡಿಜಂಗಮನೂ

೧೫

ಭಕ್ತ ತಾ ಅನ್ನೋದಕಗಳನು
ಭಕ್ತ ಪೂಜಾ ಮೂರ್ತಿಗರ್ಪಿಸಿ
ಶಕ್ತಿ ಮುಕ್ತಿಗಳಿಂದಲೆ ಪ್ರಸಾದತೀರ್ಥವಾಗೀ
ಭಕ್ತ ಪ್ರತಿದಿನ ಮಾಡ್ವಪೂಜೆ
ಯುಕ್ತಿ ಸಮರಸ ಭಾವದಿಂದಲಿ
ಭಕ್ತ ಪಡೆದಾ ಪಾದೋದಕ ಪ್ರಸಾದವ ಧನ್ಯದೀ

೧೩

ಪರಮ ಪಾದೋದಕವ ಪಡೆಯುವ
ಪರಿಯ ತಿಳಿಸೆಂದಾಗ ಕೇಳಿದ
ವರ ಚನ್ನಬಸವದೇಶಿಕಂಗರುಹಿದನಾ ಗುರುವೂ
ಪರಮ ಗ್ರಂಥಗಳಿಂದ ತಿಳಿದರು
ಪರಮಗುರು ಜಂಗಮರು ಮಾಡುವ
ಪರಿಯ ನೋಡಿಯೇಕಲಿತುಕೊಂಡಾಚನ್ನಬಸವನೂ

೧೭

ದಶವಿಧ ಪಾದೋದಕಗಳನು
ವಿಶದ ಪಡಿಸುತ ಗುರುಗಳಾಗಲೆ
ಕುಶಲಮತಿದೇಶಿಕನ ಪ್ರಶ್ನೆಗೆವುತ್ತರಕೊಡುತಾ
ಯಶ ಮೊಗದಲಿರುವಂಥ ದೇಶಿಕ
ದಿಶೆಯ ಕಾಣುತ ಹರುಷಗೊಳ್ಳುತ
ನಿಶೆಯ ಉದಿಸಿದ ಪೂರ್ಣಚಂದ್ರನ ಕಾಂತಿಯಲಿ ಹೊಳೆದೂ

೧೮

ನಯದೊಳಗೆ ಕಾಲ್ಗಳನುವೊತ್ತುತ
ನಯವಿಚಾರಗಳನ್ನು ತಿಳಿಯುತ
ದಯವುಳ್ಳ ಶ್ರೀಚನ್ನಮಲ್ಲಸ್ವಾಮಿಯ ನೆನೆಯುತಲೀ
ಸುಯಿಧಾನದಿಂಮಾಡಿ ಸೇವೆಯು
ಬಯಸಿ ತಿಳಿದನು ಧರ್ಮಕ್ರಿಯೆಗಳ
ಮಯಜ್ಞಾನಸಂಪದದಲ್ಲಿಯಿದ್ದಾ ಚನ್ನಬಸವಾ

೧೯

ಹರೆಯ ವಿಕಾರಗಳೊಂದುಯಿರದೆ
ಹರಕಳೆಯುದೇರುತ್ತ ಬೆಳೆಯುತ
ಪರವಶದಿ ಗುರುಸೇವೆಮಾಡುತ ಭೃತ್ಯಭಾವದಲೀ
ಭರತ ಖಂಡದ ವಿಭೂತಿಪುರುಷ
ರರಿವನು ಜೀವನದೊಳಳವಡಿಸಿ
ಧರಣಿಯೊಳು ತೇಜಸ್ವಿದೇಶಿಕನಾಗಿ ಮೆರೆಯುತಲೀ

೨೦

ಎಲ್ಲಮತಗಳು ಮೂರು ವಿಧದಲಿ
ಎಲ್ಲ ಧರ್ಮದ ತತ್ವನೀತಿಯು
ಬಲ್ಲವರು ಹೇಳಿದ ದೇವರ ನಿಜರೂಪ ತಿಳಿಯುತಾ
ಇಲ್ಲಿಹ ಷಟ್‌ಸ್ಥಲಮಾರ್ಗವು
ಸಲ್ಲಲಿತದಿಂ ಕೂಡಿಕೊಂಡಿಹ
ಸಲ್ಲುವಂಥಹ ಸರಳಮಾರ್ಗವು ವೀರಶೈವರದೂ

೨೧

ಎಲ್ಲ ಸೃಷ್ಟಿ ಸ್ಥಿತಿ ಲಯಗಳಿರು
ವಲ್ಲಿ ಸ್ಥಳ ಪದವು ಸಾರ್ಥಕವು
ಒಳ್ಳಿತಾ ವೀರಶೈವವು ಷಟ್‌ಸ್ಥಲಾತ್ಮಕವೂ
ಎಲ್ಲ ಮತ ಪಂಥಗಳ ಬಿಡುತಲಿ
ಬುಲ್ಲಯಿಸುತೀ ಮತಕೆ ಬರುವರು
ಯಿಲ್ಲುಂಟು ಸ್ತ್ರೀ ಪುರುಷ ಭೇದವುಯಿಲ್ಲ ದಾಸಮತೇ

೨೨

ತನ್ನ ಮತ ಮೇಲೆಂದು ಹೇಳದೆ
ಇನ್ನುಳಿದ ಮತ ಕೀಳೆಂದು ಬಗೆಯದೆ
ಖಿನ್ನ ಮಾಡದೆ ಪರಧರ್ಮದೊಳಾಸಹಿಷ್ಣುತೆಯಲೀ
ತನ್ನ ಮತದಲಿ ನಿಷ್ಠೆಯಿಡುತಲಿ
ತನ್ನ ಗುಣಗಳ ಲಿಂಗವಾಗಿಸಿ
ತನ್ನ ಧರ್ಮದಿ ಕೊನೆಯ ಕಾಣ್ಬದೆ ಯಶವುಜಗದೊಳಗೇ

೨೩

ಬಾಲಕ ಪ್ರಬುದ್ಧ ವೃದ್ಧರಾ
ಶೂಲಿ ಪೂಜೆಗೆ ಭೇದವಿಲ್ಲದೆ
ಆಲಿನಿಲ್ಲಿಸಿ ಪೂಜೆ ಮಾಡಲು ಮನವು ಘನವಾಗೀ
ಕಾಲವನು ವೃಥಾಕಳೆಯದಲೇ
ಕಾಲವಶನಾಗದ ಮುನ್ನ ತಾ
ಕಾಲಕಂಠನ ಕೃಪೆಪಡೆಯುತ ಪರಮ ಧನ್ಯನಾಗೀ

೨೪

ಹೊನ್ನು ಹೆಣ್ಣು ಮಣ್ಣಿಗಾಗಿಯೇ
ಕುನ್ನಿ ತಾನಾಗದಲೆ ಜಗದೊಳು
ಗಿನ್ನು ಸತ್ಯದ ಶುದ್ಧ ಕಾಯಕಜೀವಿ ತಾನಾಗೀ
ಬನ್ನಗೊಡುವಾ ಭವಿಯ ಜೀವನ
ಕಿನ್ನುಯೆಳಸದೆ ಸತ್ಯ ಶರಣರ
ಉನ್ನತದ ಷಟ್‌ಸ್ಥಲದ ಮಾರ್ಗದಿ ಗಮ್ಯದಲಿನಡೆದೂ

೨೫

ಗುರುವಿನೀ ಸವಿಬೋಧಕೇಳುತ
ಸಿರಿಯ ಕಂಡವನಂತೆ ಹಿಗ್ಗುತ
ಸಿರವಬಾಗಿ ನಡೆವನು ಗುರುವಿಗಾ ಚನ್ನಬಸವನೂ
ಹುರುಳಿರದ ಪಾದವನು ಮಾಡದೆ
ಸರಳದಿಂ ಗುರುವಿಂಗೆ ನಡೆಯುತ
ಪರೆಯದಾದೇಶಿಕನುವೊಪ್ಪಿದ ವಿರಕ್ತರೂಪದೀ

೨೬

ಒಳಗಿರುವ ಕಾಮನನುಜಯಿಸಿಯೇ
ತಿಳಿಕಾವಿ ಬಟ್ಟೆಯನು ಧರಿಸುತ
ಬಳಿಕ ವಿಭೂತಿ ರುದ್ರಾಕ್ಷಿ ಧರಿಸಿಯೆ ಶಿವಯೋಗದೀ
ಹೊಳೆವ ಕಣ್ಗಳು ಮುಖದ ಶಾಂತಿಯು
ನಳಿನ ಕರಗಳು ಪರುಷವಾಗಿಹ
ಇಳೆಯೊಳಗೆ ನಡೆವಂಥ ದಿವ್ಯದಪಾದಗಳು ಪಡೆದೂ

೨೭

ರಸವಿಕಾರದಿ ತನುವು ಕೆಡುವುದು
ಪಿಸುಪ ರೂಪದಿ ಮನವು ಕೆಡುವುದು
ರಸರೂಪ ಸಂಸ್ಕಾರದಿ ರಸನೆಕಣ್ಗಳು ಶುದ್ಧವೂ
ದಶವಿಧದ ಪಾದೋದಕದಿ ತಾ
ಹೊಸಚೇತನವ ತಾ ಪಡೆಯುತಲಿ
ಶಿಶ ಕಳೆಯು ಚೇತನದಿ ಕೂಡಿಯೆ ಪರಮ ಶಾಂತಿಯದೂ

೨೮

ವರಕ್ರಿಯಾ ಮೂರ್ತಿಯ ಬಲಯಡ
ವರ ಹೆಬ್ಬೆರಳಿಗೆರೆದುದಕವೇ
ಗುರುಲಿಂಗ ಪಾದೋದಕವು ಕ್ರಮದೊಳಗನ್ವಯಿಸೀ
ಎರಡು ಅಂಗುಷ್ಟಗಳ ಮಧ್ಯದಿ
ಎರೆದುದಕವೆ ತಾ ಜಂಗಮನಾ
ಚರಣೋದಕವು ಯೆಂದೇ ತಾವ್ ತಿಳಿದು ಪೂಜಿಸುತಾ

೨೯

ಚರಣೋದಕ ಸೇವಿಸುವ ಕ್ರಮ
ವಿರುವುದರೊಳಗೆ ತಾಯೇಳು ವಿಧ
ಚರಣೋದಕ ಸೇರಿ ದಶವಿಧಪಾದೋದಕವಾಗೀ
ವರಸ್ಪರ್ಶ ನೋದಕವೇ ತಾ
ಉರುತರದಿ ಪ್ರಾರಂಭವಾಗಿಯೆ
ಕರುಣ ಸತ್ಕ್ರೋದಕದೊಳಗೆ ತಾ ಕೊನೆಯುಗೊಳ್ಳುತಲೀ

೩೦

ಚರಣ ಕ್ರಿಯಾ ಸೂಚಕವಾಗಿ
ವರಚಿತ್‌ಜ್ಞಾನ ಸೂಚಕವಾ
ಗಿರುತಿವುಗಳುದಕವೇ ಪಾದೋದಕವೆನಿಸಿ ಜಗದೀ
ಧರೆಯ ಜಡತೇಜದೊಳು ಜಂಗಮ
ವರನ ತೇಜದಿ ಕೂಡಿಪಡೆವುದೆ
ಚರಣಾಮೃತವಾ ವಿಭೂತಿ ಚಿದ್ಬೆಳಗಿನೊಳು ಬೆಳಗೀ

೩೧

ಚರಣೋದಕವ ಪಡೆವ ಪದ್ಧತಿ
ಪರಮ ಪಾವನ ವೀರಶೈವದಿ
ಗಿರುವ ವಿಶಿಷ್ಟದಾಚಾರಘನತರ ಮಿಾಸಲೆನಿಸೀ
ಪರಮ ಚಿತ್ ಸತ್ಕಳೆಗಳೆರಡು
ಬೆರೆತು ಸಮರಸಭಾವದಿಂದಲಿ
ಗುರುಲಿಂಗ ಜಂಗಮದಿಂದ ತ್ರಿವಿಧಪ್ರಸಾದವೂ

೩೨

ಗುರುದೀಕ್ಷೆಯಿಂ ಶುದ್ಧ ಪ್ರಸಾದ
ವರಲಿಂಗದಿ ಸಿದ್ಧ ಪ್ರಸಾದ
ಚರವರೇಣ್ಯನ ಕೃಪೆಯೆ ಪ್ರಸಿದ್ಧ ಪ್ರಸಾದವದೂ
ಭರಿತದಾಪ್ಯಾಯನ ಪ್ರಸಾದ
ದರಿವಿನಿಂದ ನಾಲ್ಕನೆಯದಾಗಿ
ವರಜ್ಞಾನ ಪ್ರಸಾದ ಕೂಡಿ ಏಕಾದಶವೂ

೩೩

ಗಿಡ ವಾಗ್ವ ಶಕ್ತಿ ಬೀಜದಲಿದೆ
ಮೃಡನಾಗ್ವ ಶಕ್ತಿ ಭಕ್ತಿ ಬೀಜ
ದೊಡನೆಯಿದ್ದಿದರ ವಿಕಾಸವೇ ಶಿವಸ್ವರೂಪವೂ
ಮೃಡನಲಿಟ್ಟ ಭಕ್ತಿಯೆಷಡಂಗ
ದೊಡನೇ ಆಚಾರ ಲಿಂಗಾದಿ
ಯೊಡಗೂಡಿ ಐಕ್ಯಸ್ಥಲದಿ ಮಹಲಿಂಗ ಸಮರಸದೀ

೩೪

ಅಂಗಸ್ಥಲ ನಲವತ್ತು ನಾಲ್ಕು
ಲಿಂಗಸ್ಥಲ ಐವತ್ತುಯೇಳು
ಅಂಗಲಿಂಗವು ಸೇರಿಯೆ ನೂರೊಂದು ಸ್ಥಲವಾಗೀ
ಅಂಗ ಲಿಂಗದಾ ಸಾಮರಸ್ಯವು
ಲಿಂಗಗುಣ ಸಂಪನ್ನನಾಗಿಸಿ
ತುಂಗಷಟ್‌ಸ್ಥಲದಾಚರಣೆಯೆ ಶಿವಜೀವನವೂ

೩೫

ಚಲುವ ಷಟ್‌ಸ್ಥಲ ಮಾರ್ಗಬಿಡು
ತಲಿತರ ಮಾರ್ಗವನೆಳಸಿ ಹೋಗು
ತಿಳಿಯೊಳು ಭೋಗ ಜೀವಿಗಳಾಗಿಯೆದುಗುಡದಿ ಕೂಡೀ
ಖಳಕಾರ್ಯ ಮಾಡುತ ಗುರಿಯಿರದೆ
ಬಲುಸ್ವಚ್ಛಂದ ಜೀವನ ನಡೆಸು
ತಲಿ ಮುಕ್ತಿ ಕಾಣದಕಾಡು ಜೀವನದಿ ಫಲವೇನೂ

೩೬

ಜಗಕೆ ಬಂದಿರುವಂಥ ಕಾರಣ
ಬಗೆಯ ತಿಳಿಯದೆ ಪಶುವು ಆಗಿಯೆ
ಬಗೆಬಗೆಯ ಭೋಗದಲಿ ತಾವೇ ಮೋಹವಶರಾಗೀ
ಬಗೆಯ ದಾಸರು ಆಗದಲೆ ತಾ
ನಗುತ ಗುರುವಿನ ಗುಲಾಮರಾಗಿ
ಜಗದಿ ಬಾಳುವ ಮಾನವರೆ ತಾಧನ್ಯ ಜೀವಿಗಳೂ

೩೭

ಅರ್ಥ ತಿಳಿಯದ ಧರ್ಮದಭಿಮಾನ
ವ್ಯರ್ಥವಾಗಿಯೆ ಯಶವುಸಿಗದಲೆ
ಅರ್ಥ ಕಾಮಿಗಳಾಗಿಯುವಸತಿಹೊಂದಿ ಜಗದೊಳಗೇ
ವ್ಯರ್ಥಗೊಳಿಸದೆ ಸೊಗಸು ಬಾಳಿನ
ವರ್ಥ ತಿಳಿಯುತ ವೀರಶೈವದ
ಅರ್ಥಪೂರ್ಣದಿ ವಿಶ್ವಬಂಧುಗಳಾಗಿ ಬೆಳಗುತಲೀ

೩೮

ವಿರತ ಜೀವನ ನಡೆಸಿ ಕೆಲವರು
ಸರಸ ಸಂಸಾರದಲಿ ಹಲವರು
ಯಿರುತ ಲೋಕಕೆ ಲೇಸುಬಗೆದಾ ಶರಣರೊಡಗೂಡೀ
ಶರಣ ಧರ್ಮದ ಕ್ರಾಂತಿಜಗದೊ
ಳುರುತರದಿ ಬೆಳಗುತ್ತಲಿದೆಯಾ
ಹರನ ಕರುಣೆಯ ವೀರಶೈವವು ವಿಶ್ವಧರ್ಮವದೂ

೩೯

ಬಸವ ಶರಣರಗ್ಗಳಿಕೆಯಿಂದ
ಯಶಸಿಗದು ವೀರಶೈವರಿಗಾ
ಕುಶಲದಾಚರಣೆಯಿರದೇ ಬರಿ ತತ್ವದುನ್ನತಿಯಿಂ
ಅಸುರ ಗುಣಗಳು ಅಗಲದಲೆತಾ
ಅಸುವಿಡಿದು ಪಶು ಜೀವಿಯಾಗದೆ
ಪಶುಪತಿಯಗುಣ ಘನತೆಯಲ್ಲಿಯೆ ಬಾಳಿಜಗದೊಳಗೇ

೪೦

ಮನದ ಮುಂದಣದಾಶೆ ಮಾಯೆಯು
ಮನುಜನಾಶೆಗೆ ಮಿತಿಯುಯಿಲ್ಲವು
ತನುವು ದಣಿಸದೆ ಪಣವುಗಳಿಸುತ ಸುಲಭಸುಖಬಯಸೀ
ಧನದಿ ಸುಖವುಂಟೆಂದು ತಿಳಿಯುತ
ಜನರು ತಿಳಿಯದೆ ಸುಖದನೆಲೆಯನು
ದಿನದಿ ಜೀವನ ಸತ್ಯಶುದ್ಧದಕಾಯಕದಿ ಸುಖವೂ

೪೧

ಭೋಗ ಭಾಗ್ಯವ ತೊರೆದು ಬಂದರು
ರಾಗದಿಂ ಭವ ಬೀಜವೆನುತವಿ
ರಾಗ ಶಿವಸುಖ ಬಯಸಿ ಬಂದು ಕಲ್ಯಾಣಪಟ್ಟಣಕೇ
ಯೋಗಿ ಪುರುಷರು ಸತ್ಯಶರಣರು
ಹೋಗಿಯನುಭವ ಮಂಟಪಕೆ ತಾ
ಭಾಗಿಯಾಗಿ ಬಸವನಕೂಡಿ ವಿಚಾರ ಮಂಥನದೀ

೪೨

ಮನವುಯಿಮ್ಮನ ಮಾಡದಲೆ ತಾ
ಮನವು ವೊಮ್ಮನದಿಂದ ಕಾಯಕ
ಘನತರದಿ ಆಯ್ದಕ್ಕಿ ಮಾರಯ್ಯಗಳು ಮಾಡಿಜಗದೀ
ಅನುಪಮ ಶಿವಶರಣರ ಮಾರ್ಗದಿ
ಸನುಮತದಿ ಶ್ರೀ ಚನ್ನಬಸವರು
ಅನುದಿನದಾಚರಣೆಯಲ್ಲಿಯೇಯಿರಲುಮನವೆಳಸೀ

೪೩

ಶಿವಪೂಜೆ ಮಾಡ್ವಂಥ ಬುದ್ಧಿಯು
ಅವಿರತದಿ ಗುರುಸೇವೆ ಮಾಡುವ
ಸುವಿಮಲದ ಭಕ್ತಿಯೊದಗುವುದೇ ಸುಕೃತ ಜಗದೊಳಗೇ
ಬುವಿಯಲಿಹ ಬಹುಬಯಕೆಯಿರದಲೆ
ತವಸಿದೇಶಿಕ ನಿತ್ಯತೃಪ್ತನು
ಅವಿಕಲಾನಂದದಲಿ ಗುರುಗಳ ಸೇವೆಮಾಡುತಲೀ

೪೪

ಸಿಕ್ಕು ಸಿಕ್ಕೆಡೆ ಮನವು ಹರಿಸದೆ
ತಕ್ಕ ಕಾರ್ಯದಿ ಮನವು ನಿಲಿಸುತ
ಅಕ್ಕುದಾಮವನೆಣಿಸಿ ವರಷಡಕ್ಷರ ಮಂತ್ರದೊಳೂ
ಅಕ್ಕಸ ಸ್ವಭಾವಯಿರದಲಾ
ತಕ್ಕ ಸಾಂತ್ವನಶಕ್ತಿ ಪಡೆದಿಹ
ಅಕ್ಕುರುಳಿಯಿರದಂಥ ಧೀರನು ವೀರದೇಶಿಕನೂ

೪೫

ಗುರುವ ವೇಧಾ ದೀಕ್ಷೆಯಿಂದಲಿ
ಗುರುಕರಕಮಲ ಸಂಜಾತನಾ
ಗಿರುತ ಚನ್ನಬಸವದೇಶಿಕರೆ ನಿರಂಜನ ರೂಪಾ
ಮರೆತು ಪೂರ್ವಾಶ್ರಮದ ನಿರಸನ
ದಿರುತ ಪ್ರಣವ ಸ್ವರೂಪಿಯಾ
ಗಿರುತ ವಾತ್ಮವಿಕಾಸ ಮಾಡಿಯೆವುನ್ನತಿಯ ಪಡೆದೂ

೪೬

ವರಷಡಕ್ಷರ ಮಂತ್ರದಿವ್ಯವು
ಗುರು ಭಕ್ತನ ಮುಖವೆ ಓಂಕಾರ
ಎರಡು ಭುಜಗಳೆ ನಮಕಾರಗಳು ವೀರಶೈವನಿಗೇ
ವರ ದೇಹ ಮಧ್ಯವೆ ಶಿಕಾರವು
ಎರಡು ಪಾದಗಳೆ ವಾಮಕಾರ
ವರವೀರಶೈವನ ಶರೀರವೆ ಷಡಕ್ಷರಮಯವೂ

೪೭

ಭೃಂಗ ಕೀಟದ ನ್ಯಾಯದಂತೆಯೆ
ಲಿಂಗ ಚಿಂತಕನಾದ ಭಕ್ತನು
ಲಿಂಗವೆ ತಾನಾಗ್ವನೆಂಬುದು ಷಟ್‌ಸ್ಥಲದ ಗುಟ್ಟೂ
ಲಿಂಗವನು ನೋಡ್ವಂಥ ಕಣ್ಗಳು
ಲಿಂಗಗುಣ ಮನದಲ್ಲಿ ನೆನೆಯುತ
ಲಿಂಗಮಯನಾಗ್ವುದೆ ಷಡಕ್ಷರ ಮಂತ್ರಜಪದಫಲಾ

೪೮

ಜಪವಿಧಾನ ದ್ವಿವಿಧವಾಗಿದೆ
ಜಪವಗರ್ಭ ಸಗರ್ಭವಾಗುತ
ಜಪದಿಷ್ಟ ಮೂರ್ತಿಯ ಧ್ಯಾನವೆ ಸಗರ್ಭ ಜಪವಾಗೀ
ಜಪದವುಚ್ಚಾರವದು ಮೂದೆರ
ಜಪದೊಳಧಿಕವು ಮಾನಸಿಕತಾ
ಜಪದಿವಾಚಕವು ಪಾಂಶಗಳೆ ಸಾಧಾರಣವೆನಿಸೀ

೪೯

ಜಗದಿ ಜಪಮಾಲೆಗಳನೇಕವು
ಮಿಗಿಲೆನಿಸಿ ರುದ್ರಾಕ್ಷಮಾಲೆಯೆ
ಮಿಗಿಲೆನಿಸಿದಾ ವೀರಶೈವರಿಗದುವೆ ಶ್ರೇಷ್ಠತರಾ
ಸೊಗಸಿನಷ್ಟಾವರಣದಲಿತಾ
ಸೊಗಸಿನಿಂ ಶಿವನೇತ್ರವಾದಾ
ಬಗೆ ನೂರೆಂಟಿರುವ ರುದ್ರಾಕ್ಷ ಮಾಲೆಯುತ್ತಮವೂ

೫೦

ಮೊದಲನೆಯ ಮೂರು ಸ್ಥಲಗಳೇ
ವಿಧಿಸಿದ ಮಾರ್ಗ ಕ್ರಿಯೆಗಳು ತಾ
ತದನಂತರದ ಮೂರು ಸ್ಥಲಮಿಾರಿದ ಕ್ರಿಯೆಗಳೂ
ಹದುಳು ಷಟ್‌ಸ್ಥಲ ಮಾರ್ಗವಿದು
ಸದಯ ಲಿಂಗಾರ್ಪಿತವು ಆಗಿಯೆ
ಮುದದಿ ಕೂಡಿ ಶುಭಾಶುಭಗಳಿರದಂಥ ಸುಜ್ಞಾನಾ

೫೧

ಕನಕ ಗಿರಿಯೊಳಗೊಂದು ದಿನಯಿರು
ಳಿನಲಿ ಕನಕಾಚಲದ ಗುಡಿಯಲಿ
ಧನಿಕನೋರ್ವನು ಹರಿಕಥಾ ಕೀರ್ತನೆಯ ನಿಡಿಸಿರಲೂ
ಜನಗಳಿಂದಲಿ ತುಂಬಿ ಗುಡಿಯದು
ಮನವು ಏಕಾಗ್ರದಲಿ ನಿಲಿಸುತ
ವಿನುತ ಭಾವದಿ ಕೇಳಿ ಭಕ್ತ ಪ್ರಹ್ಲಾದ ಕಥೆಯನೂ

೩೨

ಹರಿಕಥಾಸಾರವನು ಹೇಳುವ
ಹರಿಭಕ್ತ ಗೋವಿಂದಭಟ್ಟರು
ಹರಿಯುಗ್ರನರಸಿಂಹದವತಾರವನೆ ತಾತಾಳೀ
ಹರಿರಿಪು ಹಿರಣ್ಯಕಸ್ಯಪನನು
ದರ ಬಗಿದು ನರರಕ್ತ ಕುಡಿಯಲು
ಹರಿಭಕ್ತರೆಲ್ಲರೂ ಕುಡಿದಾಡಿದರೆಂದೂ ಹೇಳೀ

೩೩

ಹರಿಯೆ ಸರ್ವೋತ್ತಮನೆಂದು ತಾ
ಕರವನೆತ್ತಿ ಗೋವಿಂದ ಭಟ್ಟ
ಹರಿಯು ಮುಂದಿನ ಕಥೆಯ ಹೇಳದೆ ನಿಂತುಕೊಂಡಿರಲೂ
ಕರವನಿಳಿಸಲು ಬಾರದಲೆತಾ
ಕರದೊಳಗೆ ಚೇತನವ್ವಯಿರದಲೆ
ಗರ ಹೊಡೆದವರ ತೆರನಂತೆ ನಿಂತಲ್ಲೆ ನಿಂತಿರಲೂ

೩೪

ನೆರೆದ ಜನಗಳು ಚಕಿತಗೊಳ್ಳುತ
ಕರವನಿಳಿಸಲು ಹಲವು ಯತ್ನದೊ
ಳಿರುತಗೋವಿಂದ ಭಟ್ಟರು ಹೌಹಾರಿನಿಂತಿರಲೂ
ನುರಿತ ವೃದ್ಧನು ಯೆದ್ದು ಬಂದಾ
ವಿರತ ಮಠದೊಳುಯಿರುವಗುರುವಿಗೆ
ಚರಣಕೆರಗುತ ವಿಷಯ ತಿಳಿಸುತ ಪರಿಹಾರ ಕೇಳೀ

೩೫

ಪರಮ ನಿದ್ರೆಯೊಳಿರುವ ದೇಶಿಕ
ಪರಮ ಮೂರುತಿ ಚನ್ನಬಸವನ
ವರಭುಜವನಲುಗಿಸುತಲೆಬ್ಬಿಸಿ ವಿಷಯ ತಿಳಿಸುತಲೀ
ಗುರು ಚನ್ನಮಲ್ಲಸ್ವಾಮಿಗಳಾ
ಗುರುತರದ ಹೊಣೆಯು ಹೊತ್ತುತಾ
ನುರಿತ ವೃದ್ಧನ ಜೊತೆಗೆ ಬಂದ ಕನಕಾಚಲದಗುಡಿಗೇ

೫೬

ಎದ್ದು ಭಕ್ತರು ಭಕ್ತಿ ಭಾವದಿ
ಗದ್ದುಗೆ ಮೇಲೆ ಮೂರ್ತಮಾಡಿಸಿ
ಸದ್ದಿಲ್ಲದೊಂದಿಸಿ ಶ್ರೀ ಚನ್ನಬಸವ ದೇಶಿಕಗೇ
ಬುದ್ಧಿ ವಾದವ ಹೇಳಿ ಭಟ್ಟಗೆ
ಯಿದ್ದ ಮುಂದಿನ ಕಥೆಯ ಹೇಳಲು
ಬುದ್ಧಿ ದೇಶಿಕರಂದು ಅಪ್ಪಣೆ ಕೊಡಿಸಿ ಮೌನದಲೀ

೫೭

ವಂದಿಸುತದೇಶಿಕಗೆ ಮನದಲಿ
ಅಂದು ನೋಡಿ ಗೋವಿಂದ ಭಟ್ಟ
ಮುಂದಿನಾಕಥೆ ಭಕ್ತಿ ಭಾವದಿ ಮುಚ್ಚಿಡದೆ ಹೇಳೀ
ನಂದಿವಾಹನನ್ನುನುತಿಸುತಾ
ನಂದು ಹೇಳಿದ ಸತ್ಯಕಥೆಯನು
ಮುಂದೆ ಮಂಡಿಸಿದುಂಥ ದೇಶಿಕ ಗುರುವ ಕೃಪೆಯೊಳಗೇ

೫೮

ನರರಕ್ತ ಕುಡಿದುನ್ಮತ್ತನಾ
ಗಿರುವಂಥ ಹಿರಣ್ಯಕಸ್ಯಪನು
ಧರೆಯ ಜನರನು ದೇವ ದೇವಿಯರನ್ನು ಹಿಂಸಿಸಲೂ
ಹರಗೆ ಮೊರೆಯಿಡುತಾಗದಿವಿಜರು
ನರಸಿಂಹನುಗ್ರತೆ ಶಾಂತಿಗಾ
ಗಿರುವ ಪರಿಹಾರವನು ಕೇಳುತ ಕೈಮುಗಿದುದೇಶಿವಗೇ

೫೯

ಮೊರೆಯ ಕೇಳಿದ ಶಿವನು ತಾನಾ
ವರವೀರಭದ್ರನ ಕರೆದುಗ್ರ
ನರಸಿಂಹನನ್ನು ಶಾಂತಗೊಳಿಸೆಂದಾಜ್ಞಾಪಿಸಿದಾ
ನರಸಿಂಹನುಗ್ರ ಶಾಂತಿಗಾಗಿ
ಶರಭ ಸಾಳ್ವಾವ ತಾರ ತಾಳಿ
ಧರಿಭಯಂಕರನಾದ ವೀರಭದ್ರದೇವರಾಗಾ

೬೦

ನರಸಿಂಹನಿರುವಲ್ಲಿಗೆ ಬಂದ
ಪರಮನವತಾರದಲಿಯಿರುವಾ
ವರವೀರಭದ್ರನಾರ್ಭಟಕೆ ನರಸಿಂಹನಡುಗುತಾ
ಭರದಿ ಹೊಡೆತಕೆ ಮದವು ಮುರಿಯುತ
ಸರಳದಲಿ ಶಾಂತಿನೆಲೆಸುತ
ಹರನ ಪಾದಕಂಡು ಶರಣು ಬಂದನಾ ನರಹರಿಯೂ

೬೧

ಇದರಿಂದ ಶಿವಸರ್ವೋತ್ತಮನು
ಸದುಹೃದಯಸ್ಥನಾ ಸದಾಶಿವ
ಹದುಳದಿ ಜಗವಪಾಲಿಸುವಂಥದೇವರದೇವನೂ
ಮುದದಿ ನುತಿಸುತ ಸಾವಧಾನದಿ
ಮದವಳಿದು ಗೋವಿಂದ ಭಟ್ಟಗೆ
ವೊದಗಿದಾ ಕಂಟಕವು ತಾದೂರಾಗಿ ಕೈಯಿಳಿಸೀ

೬೨

ಚನ್ನಬಸವ ದೇಶಿಕನ ಚರಣ
ಸನ್ನಿಧಿಗೆ ಪೊಡಮಡುತಾಗಲಾ
ಚನ್ನಚಲುವಿನ ಪಾದಧೂಳಿಯು ವ್ಮೈಗೆಸವರುತಲೀ
ಬನ್ನದಾಗೋವಿಂದ ಭಟ್ಟರು
ಸನ್ನಿಧಿಯ ಗುರುವರನ ಕೃಪೆಯುಲಿ
ಚನ್ನವೊಗದಲಿ ಕಳೆಯು ತುಂಬಿಯೆ ಧನ್ಯನಾಗುತಲೀ

೬೩

ಶರಭ ಸಾಳ್ವಾವತಾರ ಚರಿತೆ
ಪರಮ ಪಾವನವಾದುದ್ರಪಾ
ಸರಳದಿ ವೋದಿ ಕೇಳಲು ಅಂಜಿಕಪಮೃತ್ಯುವಿರದೇ
ಅರಿಪೀಡೆ ಪಾಪತಾಪಗಳೊಂ
ದಿರದೆ ರಾಗದ್ವೇಷವಲ್ಲವ
ಯಿರದೆ ಪಾವನನಾಗಿ ಜಗದಲಿ ತೊಳಗಿ ಬೆಳಗುವನೂ

೬೪

ಎಂದು ಹೇಳುತ ದೇಶಿಕಾರ್ಯನು
ಚಂದದಿಂ ಸಕಲರನು ಹರಸಿಯೆ
ಅಂದು ಪರಮ ಪವಾಡ ಮಾಡಿಯೆ ಬಂದು ಗುರುಮಠಕೇ
ಬಂದ ದೇಶಿಕರನ್ನು ನೋಡಿದ
ರಂದು ಗುರುಗಳು ವಿಷಯ ಕೇಳಿಯೆ
ಚಂದದಿ ಮೈದಡವಿ ದೇಶಿಕನ್ನರಸಿ ಹಿಗ್ಗಿದರೂ

೬೫

ಓಂನಮೋ ವರವೀರಭದ್ರನೆ
ಓಂನಮೋ ಗುರು ವೀರಭದ್ರನೆ
ಓಂನಮೋ ಶರಭಸಾಳ್ವಾವತಾರಿ ದಕ್ಷ ಹರನೇ
ಓಂನಮೋ ಶ್ರೀ ಜಗದ್ರಕ್ಷಕ
ಓಂನಮೋ ಶ್ರೀ ಊರ್ಧ್ವಕೇಶನೆ
ಓಂನಮೋ ಭವರೋಗಭಿಷಜನೆ ರಕ್ಷಿಸನವರತಾ

ಆರನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೬ಕ್ಕಂ ಪದಗಳು ೨೦೨ಕ್ಕಂ ಮಂಗಳಂ

# ಏಳನೆಯ ಸಂಧಿ

**ಸೂಚನೆ :–**

**ಗುರುಚನ್ನಮಲ್ಲಸ್ವಾಮಿಗಳಾ**
**ಹರಕಳೆಯಾ ಚನ್ನಬಸವರನು**
**ವರಮೂಲಮಠದೊಳಬಳ್ಳಾರಿ ವಿರತ ಮಠಕೆ ಕಳಿಸೀ**

೧

ನಿನ್ನ ಕೃಪೆಯಿರೆ ಜಗದ ಬೆಳಕಾ
ನಿನ್ನ ಕೃಪೆಯಿರೆ ಜಗಕೆನಲಿವೂ
ನಿನ್ನ ಕೃಪೆಯಲಿ ಸಕಲ ಜೀವಿಗಳೆಲ್ಲ ಹರುಷದಲೀ
ನಿನ್ನ ರೂಪವು ಸತ್ಯ ಸುಂದರ
ನಿನ್ನ ರೂಪ ವಿಕಾರ ಯಿರದಲೆ
ನನ್ನಿಯಲಿ ಜಗವನ್ನು ನಡೆಸುವ ಈಶನಿಗೆ ಶರಣೂ

೨

ಈಸುಕಲಿಯಲಿ ಬೇಕು ಜಗದೊಳು
ಈಸಿ ಭವಸಾಗರವ ದಾಂಟುತ
ಈಸುಗಾಯಿಗುರುವೆಂಬ ಕೃಪೆಯಲಿ ಈಶನ ಸೇರೀ
ದೇಶ ತಿರುಗಲೇಬೇಕು ಮೇಣ್
ಕೋಶವಾದರು ಓದಬೇಕಾ
ಪಾಶಭವಬಂಧನವ ಕಳೆಯುತ ಈಶ ಭಕ್ತಿಯಲೀ

೩

ಮಠಕೆ ದೇಶಿಕರಾಗಿ ಹೋಗುವ
ಮಠವು ಸಿರಿಸೊಬಗಿನಲಿಯಿರುವಾ
ಮಠದ ಸಂಪತ್ತಿನಲಿ ಮೆರೆಯುವ ಭಾಗ್ಯದಲಿ ಕೂಡೀ
ಮಠವು ಸಣ್ಣದು ಆಗಿರಲು ತಾ
ಮಠಕೆ ಹೋಗದೆ ನೆಪವ ಹೇಳುವ
ಘಟಗಳಧಿಕ ಸಹಜ ದೇಶಿಕರ ಪೂರ್ವ ಜಗದೊಳಗೇ

೪

ರಾಜಭೋಗವ ಬಯಸದಲೆ ಶಿವ
ತೇಜದಿಂದಲಿ ಬೆಳಗುವಂಥಹ
ರಾಜಶಿವಯೋಗದೊಳು ತಾ ದಾಸೋಹಿಯಾಗಿರಲೂ
ಮೋಜುಮೆರವಣಿಗೆಗಳು ಬಯಸದೆ
ಮೋಜಿನಿಂ ಜೀವನವಸವೆಸದೆ
ಓಜದಿಂ ನಡೆನುಡಿಗಳೊಂದಾಗಿರಲು ಚಲುವೆನಿಸೀ

೫

ಗುರುಸೇವೆಯನು ದೃಢದಿಮಾಡುತ
ಎರಡು ಬಗೆಯಲಿ ಯೇನು ಕೇಳದೆ
ವರವುತಾ* ನಚಿಕೇತನಂತಿರೆ ಪರಮಜ್ಞಾನವದೂ
ನುರಿತ ಗುರುಗಳ ಸಂಗದಿಂದಲಿ
ಅರಿತು ತಾನಾಪಾರಮಾರ್ಥವ
ಭರಿತ ಶಿವಭಕ್ತಿಯಲಿ ಕೂಡಿಯೆ ಮೈಯಮರೆಯುತಲೀ

೬

ಧರೆಯೊಳೊಳ ಬಳ್ಳಾರಿ ಭಕ್ತರಾ
ವರ ಕನಕಗಿರಿಯ ವಿರತ ಮಠಕೆ
ಬರುತನಂತರ ಗುರುವ ಕಂಡು ಮರಿದೇವರಕೇಳೀ
ಮರಿದೇವರಿಗೆ ತಾವ್ ವಿಷಯುವ
ನರಿಕೆ ಮಾಡುತ ಪೂರ ಮಠದಾ
ಪರಿಯ ತಿಳಿಸುತ ಮಠದ ಜೀರ್ಣೋದ್ಧಾರ ಮಾಡೆಂದೂ

೭

ಗುರು ಚನ್ನಮಲ್ಲಸ್ವಾಮಿಗಳಾ
ಗುರುಹಿದರು ಚನ್ನಬಸವದೇಶಿ
ಕರಿಗೆವೊಪ್ಪಿಗೆ ತಿಳಿಸೆಂದು ವಿಷಯವಾತಗೆ ಬಿಡುತಾ
ಗುರುವಿನಾಣತಿವಿಕ್ಕದಂತಹ
ಗುರುವಿಗೊಪ್ಪುವ ಶಿಷ್ಯನಾಗಿಹ
ಗುರುವು ಸಕಲಕೆ ದೈವವೆನ್ನುತ ತಮ್ಮಿಷ್ಟವೆಂದೂ

---

*ಉಪನಿಷತ್ತಿನಲ್ಲಿ ಬರುವ ವಾಜಶ್ರವಸ ಎಂಬುವನ ಮಗನ ಕಥೆ

೮

ಮುದುಕ ಗುರುಗಳ ಸೇವೆಮಾಡುವ
ಬದುಕಿನೊಳು ಸಾರ್ಥಕವ ಪಡೆಯುವ
ಮುದದಿ ದೊರಕುವಾ ಭಾಗ್ಯವೇ ಭಾಗ್ಯ ಜಗದೊಳಗೇ
ಒದಗಿ ಬಂದಿರುವಂಥಸಂಕಟ
ಹದನದಿಂದ ವಿಚಾರ ಮಾಡುತ
ಮುದುಕ ಗುರುಗಳ ಮುದದಿ ಪಾದವ ಹಿಡಿದು ಮಿಡುಕುತಲೀ

೯

ವರಭುಜವ ಹಿಡಿದೆತ್ತಿ ಗುರುಗಳು
ತರುಣ ದೇಶಿಕರನ್ನು ನೋಡುತ
ತರತರ ಸ್ವಪ್ನವನು ಕಾಣುತ ಭಾವಲೋಕದೊಳೂ
ಗುರು ಕರವ ಮುದ್ದಿಸುತ ದೇಶಿಕ
ಗುರುವ ಜಾಗೃತಗೊಳಿಸಿಭಾವದಿ
ಗುರು ಕರಕಮಲದೊಳು ಹರಸಿ ದೇಶಿಕರ ಮೈದಡವೀ

೧೦

ಬಿದ್ದ ಮಠದುದ್ಧಾರಕಿಂತಲು
ಬಿದ್ದ ಮಠದೊಳಗಿರುತ ತಾವಾ
ಬಿದ್ದು ಭವಸಾಗರದಿ ಮುಳುಗುವ ಜನರನುದ್ಧರಿಸೂ
ಸದ್ದುಗದ್ದಲ ಮಾಡಿಕೊಳ್ಳದೆ
ಬದ್ಧ ಕಂಕಣ ತೊಟ್ಟು ಮಠದೊಳ
ಗಿದ್ದು ಭವ್ಯದಕಾರ್ಯವೆಸಗೆಂದ್ಹರಸಿದೇಶಿಕನಾ

೧೧

ನಿನ್ನ ಕೃಪೆಯಿರೆ ಕುರುಡನೋಡ್ವನು
ನಿನ್ನ ಕೃಪೆಯಿರೆ ಹೆಳವನಡೆವನು
ನಿನ್ನ ಕೃಪೆಯಿರೆ ತಿರುಕನರಸಾಗ್ವುದೇನತಿಶಯವೂ
ತನ್ನ ಹರಸಿದ ಗುರುವನೋಡುತ
ಮುನ್ನಿನಾ ಕಾರ್ಯಗಳಿಗೊಪ್ಪುತ
ಖಿನ್ನನಾಗದೆ ಬಡ ಮಠಕೆ ತಾ ಹೋಗಲೊಪ್ಪಿದನೂ

೧೨

ಗುರುಗಳಭಿಮತ ಕಂದು ಬಂದಾ
ವರ ಶಿಷ್ಯರೆಲ್ಲರು ಹರುಷದಿಂ
ದಿರುತ ಸಾಷ್ಟಾಂಗವ ಹಾಕಿದರಾಗಗುರು ಪಾದಕೇ
ಹರಗಣಾರಾಧನೆಯ ಮಾಡಿಸಿ
ಮರಿದೇವರಿಗೆ ಕಾವಿ ಬಟ್ಟೆಯ
ಧರಿಸಿಯಧಿಕಾರವನು ಕರುಣಿಸಿ ಬಂಡಿಯಲಿ ಕಳಿಸೀ

೧೩

ಇತ್ತ ಬಿದ್ದಿರುವಂಥ ಮಠದಲಿ
ಮತ್ತೆ ಪ್ರಳಿದಿರುವಾ ಕೋಣೆಗಳ
ಮೆತ್ತಿ ಕೆಸರಲಿ ಮೇಲೆ ತೊಡೆದರು ಸಗಣಿಯಿಂದಾಗಾ
ಹೊತ್ತು ತಂದರು ಮಾವಿನೆಲೆಗಳ
ಸುತ್ತ ಸರತೋರಣವ ಕಟ್ಟುತ
ಪತ್ತಿರಕೆ ಬಂದಂಥ ಗುರುಗಳಯಿದಿರುಗೊಳ್ಳುತಲೀ

೧೪

ತಾಳ ಮೇಳಗಳಿಂದ ಕೂಡಿಯೆ
ವೇಳೆ ಮಾಡದೆ ಭಜನೆಗೂಡಿಯೆ
ಮೇಳೈಸಿ ಹಿರಿಕಿರಿಯರೆಲ್ಲರು ಕೂಡಿಯೆದುರ್ಹೋಗೀ
ಬಾಳಿನಾ ಬೆಳಕಾಗಿ ಬಂದಿಹ
ಭಾಳಲೋಚನ ರೂಪದಿರುವಾ
ಕೋಲುಕೈಯಲಿ ಹಿಡಿದು ಗುರುಗಳು ಬಂಡಿಯಿಂದಿಳಿದೂ

೧೫

ಊರ ಪ್ರಮುಖರು ಮುಂದೆ ಬರುತಲಿ
ಹಾರಮಲ್ಲಿಗೆ ಕೊರಳಿಗ್ಹಾಕುತ
ತೋರಿ ಪ್ರಮುಖರು ತಮ್ಮ ಪರಿಚಯ ತಾವೆ ಮಾಡುತಾ
ಭಾರಿ ಹೊಟ್ಟೆಯ ಭಾರದಿಂದಲಿ
ಸಾರಿ ಬರುತಲಿ ನಮಿಸಿ ಕೆಲವರು
ನಾರಿಯರು ತಾ ಕಳಶ ಕನ್ನಡಿಯಿಂದ ಬೆಳಗುತ್ತಲೀ

೧೫

ನಮ್ಮ ಮೆರವಣಿಗೆಯದು ಬೇಡ್ರುಪ
ಸುಮ್ಮನೇ ಕಾಲವನು ಕಳೆಯದೆ
ತಮ್ಮಲಿರುವಾ ಶಿವನ ಚಿತ್ರದಪಟವ ತರಹೇಳೀ
ತಮ್ಮ ಮಾಲೆಯೇ ಗೌಡಗೆತಾ
ವೊಮ್ಮನದಿ ಹಾಕುತ್ತ ಹರಸಿಯೆ
ಸುಮ್ಮನೇ ನಿಲ್ಲುತ್ತ ಗುರುಗಳಾಪಟ ತರುವವರೆಗೂ

೧೭

ಶಿವನ ಚಿತ್ರದ ಪಟವ ತಂದರು
ಶಿವನಿಗಾ ಹೂ ಮಾಲೆ ಹಾಕುತ
ಶಿವನ ಮಂಗಲ ಹಾಡುಹೇಳುತ ಮುಂದೆಸಾಗುತಲೀ
ಶಿವಕಳೆಯೆ ದೇಶಿಕನ ರೂಪದಿ
ಬುವಿಯೊಳವತರಿಸೆಂದೇ ಬಂದಿ
ರುವರೋ ಎಂಬ ಮರಿದೇವರಾಗನಡೆದು ಹರುಷದೀ

೧೮

ಮಠಕೆ ಬಂದರು ಸಕಲವಾದ್ಯದಿ
ಮಠದಲಿರುವ ಸಮಾಧಿಗಳಿಗಾ
ಮಠದ ದೇಶಿಕರಾಗವಂದಿಸಿ ಮಂಗಲವಮಾಡೀ
ಮಠದಲಿರುವಾ ಭಕ್ತರಿಗೆ ತಾ
ಮಠದವತಿಯಲಿ ಪ್ರಸಾದವನು
ಮಠದಮರಿದೇಶಿಕರ ಆಜ್ಞೆಯ ತೆರದಿ ಹಂಚುತಲೀ

೧೯

ತೆರಳಿದರು ಮಠದಿಂದ ಜನಗಳು
ಗುರುಪೂಜೆಗಾಗುಳಿದು ಕೆಲವರು
ಮರಿದೇವರಾಶಿವಪೂಜೆಗಾಗಿಯೇ ಸಿದ್ಧಪಡಿಸೀ
ಪರಮ ವೈರಾಗ್ಯದೊಳುನಿಂತಿಹ
ವಿರತ ಮಠದಲಿ ಸ್ನಾನ ಮಾಡಿಯೆ
ಭರಿತದಿಂ ವಿವೇಕ ಚೂಡಾಮಣಿಯೆನಿಸಿಜಗದೊಳೂ

೨೦

ಸರಳದಲಿ ಶಿವಪೂಜೆಮಾಡುತ
ಸರಳ ಮನಸಿನ ದಿವ್ಯಧ್ಯೇಯದಿ
ಅರಿವೆಗುರುವಾಗಿರುವ ದೇಶಿಕರದ್ವಯ ಬ್ರಹ್ಮಾ
ವರಮಹಾ ಶಿವಪೂಜೆ ಮಾಡ್ವದು
ಗುರುಭಕ್ತ ಜನನೋಡ್ವಸುಕೃತವು
ಧರೆಯೊಳಪೂರ್ವ ಸುಸಮಯವಾಗಿ ಶಿವಕಳೆಯಿಂಕೂಡೀ

೨೧

ಜವದಿ ಶಿವಪೂಜೆಯನು ಮುಗಿಸಿದ
ತವಸಿ ದೇಶಿಕರಿಂದ ಭಕ್ತರು
ಸುವಿಮಲದಾಚರಣೋದಕಪ್ರಸಾದ ಪಡೆಯುತಲೀ
ಸವಡುಗಾಗಿಯೆ ಸರಳ ಶಯನದಿ
ಅವತಾರ ಪುರುಷರಾದೇಶಿಕ
ರವದಾತ ಮನದೊಳು ಯೋಗನಿದ್ರೆಯ ಮಾಡಿಸುಖದೀ

೨೨

ಬೆಳಗಿನಾ ಜಾವದಲಿ ಯೇಳುತ
ಹೊಳೆಯದಂಡೆಗೆ ಹೋಗಿ ನಿಲ್ಲುತ
ಹೊಳೆಹೊಳೆದು ಹೊಳೆಯಾಗಿ ಹರಿಯುವ ನದಿಯ ನೋಡುತಲೀ
ಹೊಳೆಯಲಡಿಗಳನಿಟ್ಟು ದೇಶಿಕ
ಹೊಳೆಯ ಜಡತೆಯು ಕಳೆದು ಪಾವನ
ಜಲವಾಗಿ ಹರಿಯುವ ತುಂಗಭದ್ರೆಯನಾಮದೀ

೨೩

ನಳನಳಿಸುವ ದೇಶಿಕರ ಪಾದ
ಗಳ ತೊಳೆದು ಗಂಗಾಮಾತೆಯಾ
ಗಲೆ ತೇಲಿಬಂದಿಹ ಪತ್ರೆ ಪುಷ್ಪಗಳಿಂದ ಪೂಜಿಸೀ
ಹೊಳೆವ ರವಿಬಿಂಬವದು ತಾ ಜಲ
ದೊಳು. ಕನಕ ವರ್ಣದ ತಾಟಿನಿಂ
ಹೊಳೆವ ಕಿರಣಗಳಾರತಿಯ ಮಾಡ್ವಳೋದೇಶಿಕರಿಗೇ

೨೪

ಎನ್ನುವಂತೆಯೆ ಪ್ರಕೃತಿರಮ್ಯ
ದುನ್ನತಿಯ ವೃಕ್ಷಗಳು ತುಂಬಿರೆ
ಚನ್ನಚಲುವಿನ ಪೂಜೆನೋಡುವ ಭಕ್ತಾದಿಗಳಂತೇ
ಸನ್ನಧಿಯಲಿರುವ ಶುಕಪಿಕಗಳು
ಚನ್ನ ಕಂಠದಿ ಹಾಡಿನುತಿಸುತ
ಸನ್ನೆಯಿಂದಲಿ ಗರಿಗಳೆತ್ತಿಯೆ ನವಿಲುನರ್ತನದೀ

೨೫

ಇನಿತು ವಿಭವದ ಪ್ರಕೃತಿಸೊಬಗಿ
ನನುಪಮ ಮಹಪುಣ್ಯಸ್ಥಳವನು
ಮನವು ಹಿಗ್ಗಿಸಿ ನೋಡಿನಲಿದು ಚನ್ನಬಸವಸ್ವಾಮಿಾ
ದಿನದ ಮೊದಲಿನ ಕಾರ್ಯಮುಗಿಸುತ
ದಿನದ ಮೊದಲಿನ ಪೂಜೆಗಾಗಿಯೆ
ಅನಘ ಶ್ರೀಗುರು ಚನ್ನಬಸವರು ಮಠಕೆ ತಾಬಂದಾ

೨೬

ಹೊಸಜಾಗಕೆ ತಾವೊಗ್ಗಿಕೊಳ್ಳುತ
ತುಸ ಭೂಮಿಯು ಕೃಷಿತಾ ಮಾಡಿಸಿ
ಹೊಸತನದಿ ಯೆರಡೆತ್ತಿನೊಕ್ಕಲೊಡೆತನವನೆನಡೆಸೀ
ಕುಶಲಾಗ್ರ ಬುದ್ಧಿಯ ಬಲದಿತಾ
ದೆಸೆತಿರುಗಿ ದೇಶಿಕರ ಕೃಪೆಯಲಿ
ಒಸೆದು ಹರುಷಿಸಿ ಸುಗ್ಗಿ ಕಾಳ್ಗಳು ಮಠಕೆ ಬಂದಿರಲೂ

೨೭

ಬೇರೆ ಜನ ಸಾಗ್ವಳಿಯು ಮಾಡಲು
ಕೋರಿಕೆಗೆ ತಾ ಕಮ್ಮಿಯಾಗುತ
ಕೋರುಮಾಡಿರೆ ಕಮ್ಮಿ ಬೆಳೆಯುಲಿನಷ್ಟವಾಗುತಲೀ
ಭಾರಿಸಂಭ್ರಮದಿಂದ ದೇಶಿಕ
ಕೋರಿ ಕೃಷಿ ಕಾಯಕದಿ ನಿರತದ
ಪಾರಮಹಿಮದಿ ಹುಲುಸು ಬೆಳೆಯದು ಕೂಡಿ ಬಂದಿರಲೂ

೨೮

ಇದುನಿತಾಂತ ನಿದರ್ಶನವು ತಾ
ಪದವರಿತ ಬೇಸಾಯು ಭವ್ಯದಿ
ಬದುಕು ಸಾರ್ಥಕ ಸತ್ಯಶುದ್ಧದ ಕಾಯಕದಿ ಕೂಡೀ
ಎದೆಗಾರಿಕೆಯಿಂ ಕೃಷಿಮಾಡಲು
ಸದುಹೃದಯದೇಶಿಕರ ಕೃಪೆಯಲಿ
ವಿದಿತವಾಯಿತು ಭವ್ಯಬೆಳೆಯಲಿ ದಾಸೋಹವಮಿತವೂ

೨೯

ಮಠಕೆ ಬರುವಾ ಭಕ್ತಜನರಿಗೆ
ಮಠದೊಳಗೆ ದಾಸೋಹ ಮಾಡಿಸಿ
ಜಟಿಲ ತರತರ ದುಃಖಿಜನಗಳ ಹರಸಿ ಹದುಳದಲೀ
ಕುಟಿಲರಹಿತದ ಶುದ್ಧ ಜೀವನ
ನಿಟಿಲ ಬರಹವನಳಿಸುವಂಥಹ
ಘಟದಿ ಮಠವನು ಬೆಳಗುವಂಥಹ ಚನ್ನಬಸವಾರ್ಯಾ

೩೦

ನಿತ್ಯ ಶಿವ ಪೂಜೆಯನು ಮಾಡುತ
ಸತ್ಯಶಿವ ಸೌಂದರ್ಯ ಕಾಣುತ
ಮಿಥ್ಯಜೀವನ ನಡೆಸದಲೆ ತಾ ಪರಮ ಶಿವಯೋಗೀ
ಪಥ್ಯವಿರುವಾ ವಿರತ ಜೀವರ
ಗತ್ಯವಾದ ಪ್ರಸಾದದಿಂದ
ತಥ್ಯಶಿವ ಜೀವನದಿದೇಶಿಕ ತೊಳಗಿ ಬೆಳಗುತಲೀ

೩೧

ಧನಕನಕ ದಾಸೆಯನು ಮಾಡದೆ
ಮನವು ಘನದಲಿ ಕೂಡಿಕೊಳ್ಳುತ
ತನುವು ಬೆಳಸದೆ ಸತ್ಯ ಶುದ್ಧದಕಾಯಕದಿ ಸವೆಸೀ
ಮನವು ರಂಜನೆಗೆಳಸದಲೆತಾ
ಮನದ ಮುಂದಣ ದಾಸೆಯಿರದಲೆ
ಮನವು ಅಂಕಿತವಾಗಿ ಶಿವನಿಗೆ ನಿರಂಜನ ರೂಪಾ

೩೨

ಧರೆಯ ಜನಗಳು ಪೂರ್ವಕಾರ್ಯಕೆ
ಗುರುವರನು ದೇಶಿಕರ ದನುಮತಿ
ಪರಮ ಮನದಲಿ ಕರುಣೆಮಾಡಿ ಪ್ರಣವ ಸ್ವರೂಪೀ
ತಿರೆಯಸ್ತ್ರೀ ಪುರುಷೆಲ್ಲರನು ತಾ
ಸರಿಸಮಾನದಿ ಕಂಡು ಪ್ರೇಮದಿ
ಹಿರಿಯ ಲಿಂಗದ ಗುಣಗಳಿಂದಲೇ ಶಿವಜೀವನವೂ

೩೩

ವಸುಧೆಯೊಳಗಿನ ವಿವಿಧಭೋಗವು
ವಸುವೈಭವದಲಿರುವ ರಾಗವು
ವಸುಧೇಶ ಭೋಗದ ಭಾಗ್ಯದಂತೆ ಕ್ಷಣಿಕವೆನಿಸೀ
ಅಶನವನು ಪ್ರಸಾದ ಮಾಡುತ
ವಸನದಿಂದಲಿ ಮೈಯ ಮುಚ್ಚುತ
ಹಸನು ಮನದಹದಲ್ಲಿ ನಿಲಲದು ಸಚ್ಚಿದಾನಂದಾ

೩೪

ಇದರ ಮರ್ಮವ ತಿಳಿದ ಬಳಿಕ
ಅದಟು ಭಾವವ್ಯಕ್ತಗೊಳಿಸದೆ
ಅದುಮಿದರಿಷಡ್ವರ್ಗಜಯಿಸಿಯೆ ಸೌಮ್ಯ ಭಾವದೊಳೂ
ಉದರ ಭರಣೆಗೆ ವೇಷಹಾಕದೆ
ಉದಮ ಜೀವನ ಧ್ಯೇಯ ತಿಳಿಯುತ
ಹದನದಿಂದಲಿ ಜಗದ ಹದುಳತೆಗಾಗಿ ಜೀವಿಸುತಾ

೩೫

ಕಾಯ ಮಿಥ್ಯನೆ ಮಿಂಚುಗೊಳಿಸದೆ
ಕಾಯ ಕಥ್ಯನೆಗಾಗಿ ಮಿಡುಕದೆ
ಕಾಯ ಕಾಯಕದಿಂದ ಕೂಡಿರೆ ಸತ್ಯಶುದ್ಧವದೂ
ಕಾಯ ಬೆಳಸದೆ ಕೋಣದಂತೆಯೆ
ಬಾಯಬಡಿಕದ ಭಾವತೋರದೆ
ನಿಯತಿ ನಿಯಮಗಳಿಂದ ನಡೆನುಡಿ ಜಗದಿ ಚಲುವಾಗೀ

೩೬

ದೇಹದೊಳಗಿರುವಾತ್ಮ ಒಂದಾ
ದೇಹವಾಗಿರುವಂಗ ಒಂದಾ
ದೇಹದೇಹಿಯ ಸಾಮರಸ್ಯಕೆ ಬಿಂದು ಮಧ್ಯದೊಳೂ
ಸಾಹಸದಿ ನೂರೊಂದು ಸ್ಥಲಗ
ಳಾಹರ ಶಕ್ತಿ ವಿಶಿಷ್ಟದಿಂದ
ಮೋಹ ಭಕ್ತಿ ವಿಕಾಸದೊಳಾಲೋಕದನುಗ್ರಹವೂ

೩೭

ಧರೆಯೊಳೊಳ ಬಳ್ಳಾರಿ ಮಠಕಾ
ವಿರತ ಭಾವದ ಯೋಗಿಪುಂಗವ
ಗುರುತರದಿ ತಾ ಬಂದರಾ ಶುಕ್ಲನಾಮ ವರ್ಷದೀ
ವರಶಿಷ್ಯ ಅಮರಯ್ಯ ಜೊತೆಯಲಿ
ಸರಳ ಪಾದದ ಯಾತ್ರೆಯಿಂದಲಿ
ತೆರಳಿ ಕೂಡಲ ಸಂಗಮಕ್ಷೇತ್ರಕ್ಕೆ ಹರುಷದೀ

೩೮

ಬರುವ ಸಮಯದಿ ಹಂಪೆನೋಡಿಯೆ
ವರ ತುಂಗಭದ್ರೆಯ ತೀರದೊಳು
ಗುರುತರದನುಷ್ಠಾನ ಮಾಡಿಯೆ ಭಕ್ತಿದೃಢವಾಗೀ
ವರ ತಪೋಬಲ ಬೆಳಸಿಕೊಂಡರು
ಹರನ ತೇಜದಿ ಬೆಳಗುವಂತಹ
ಗುರುವಾಗಿ ಶ್ರೀ ಚನ್ನಬಸವರ ದಿವ್ಯನಡೆನುಡಿಯೂ

ಏಳನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೭ಕ್ಕಂ ಪದಗಳು ೨೪೦ಕ್ಕ ಮಂಗಳಂ

# ಎಂಟನೆಯ ಸಂಧಿ

**ಸೂಚನೆ :-**

ಪರಮ ಶ್ರೀಗುರು ಶ್ರೀ ಚನ್ನಬಸವರ
ವರಪುನೀತ ಪ್ರಥಮ ದರ್ಶನ
ಹರನ ಕೃಪೆಯಲಿ ಪಡೆದ ಶ್ರೀ ದೊಡ್ಡಯ್ಯ ಶಾಸ್ತ್ರಿಗಳೂ

೧

ಕಾಸಿಗೋಗದೆ ಸ್ವಯಂ ಪ್ರಭೆಯು
ಆಶಯುವ ಮಹದೇವ ಕೃಪೆಯಲಿ
ಆಶುಕವಿತಾ ಶರಣರ ದೊಡ್ಡಯ್ಯ ಶಾಸ್ತ್ರಿಗಳೂ
ವಾಸನಾಗರ ಹಾಳಿನೊಳಗಿರೆ
ಬೇಸರವು ತಾ ಹಳ್ಳಿಯೆಂದಾ
ಆಸೆ ಪಡದಲೆ ನಗರ ಬಯಸದ ಪರಮ ಪಂಡಿತರೂ

೨

ಸರಳತೆಗೆ ಸಾಕಾರರೂಪವ
ಧರಿಸಿ ಜಗದೊಳು ಬಂದ ತೆರನಲಿ
ಅರಿವು ಆಚಾರದಲಿ ಜೀವನ ಶಿವಮಯದಿ ತುಂಬೀ
ಗುರುಘನತೆ ನಡೆನುಡಿಗಳೆಲ್ಲವು
ಗುರುಲಿಂಗ ಜಂಗಮರು ಮೆಚ್ಚುವ
ಶರಣಗುಣಮಣಿ ತತ್ವಚಿಂತಾರತ್ನವಾಗಿರು ತಾ

೩

ಬೆಳಗುವಂತಹ ಬಯಕೆಗಳು ತಾ
ಉಳಿದು ಜ್ಞಾನಕ್ರಿಯಾನುಭವ
ದೊಳು ಪರಮಶಕ್ತಿಯು ವಿನ್ಯಾಸವೆ ಶ್ರೀ ಗುರುಕರುಣೇ
ಒಳಗಿನಂತಃಶಕ್ತಿ ಸಮುಸಿ
ತಿಳಿದು ಸಂವೃದ್ಧಿಯನುಗೊಳಿಸಲು
ಬೆಳಕು ಬಾಳದು ಮಾನವತ್ವದ ಸಾರ್ಥಕದ ಬಾಳೂ

೪

ಶ್ರೀ ಗುರುವಿನಾ ಕೃಪೆಯ ಬಲವದು
ಸಾಗಿ ಮುಂದಕೆ ಬಾಳು ನಿರ್ಮಲ
ವಾಗಿ ಭಕ್ತಿ ಜ್ಞಾನಕ್ರಿಯೆಗಳು ಸಮನ್ವಯದೊಳಗೇ
ಹೋಗಿ ರಕ್ತದ ಜೀವನವು ತಾ
ಮಾಗಿದಂಥಹ ಭಕ್ತಿ ಜೀವನ
ವಾಗಿ ಕಣ್ಮನದೃಷ್ಟಿ ಸುಮನದಿ ರನ್ನವೆಳಗಿನಲೀ

೫

ಶಿವಭಕ್ತಿ ಉಳ್ಳವರ ನೆನೆವುದೆ
ಶಿವನ ಬೆರೆಯುವ ಘನದ ಮುಕ್ತಿಯು
ಶಿವಶರಣರಾ ಭಕ್ತಿ ಮಾರ್ಗದಿ ಸರ್ವದುನ್ನತಿಯೂ
ಶಿವಯೋಗವೇ ಯೋಗ ಜಗದೊಳು
ಶಿವಭಕ್ತಿ ವರ್ಣಿಸಲು ಅಸದಳ
ಭವದ ಬಂಧನ ತೊಲಗುವುದು ತಾ ಭಕ್ತಿ ಶಕ್ತಿಯಲೀ

೬

ಈ ತೆರನಲಿರುವಂಥ ಶರಣರು
ಮಾತು ಘನಮನದಿಂದ ಕೂಡಿರೆ
ನೀತಿವಿದರಾಗಿರುವ ಶ್ರೀ ದೊಡ್ಡಯ್ಯ ಶಾಸ್ತ್ರಿಗಳೂ
ಪೂತ ಶಿವಜೀವನವ ನಡೆಸುವ
ಭೀತರಾಪರಧನವನಿತೆಗಾ
ಭೂತಿ ಶಿವಕಳೆಯಲ್ಲಿ ಶೋಭಿಪಸತ್ಯ ಶಿವಶರಣಾ

೭

ಇವರ ಶಿವನನುಭವದ ಪ್ರವಚ
ನವದು ಗುರುಘನದಮೃತ ವಾಣಿಯು
ಜವದಿ ಕಿವಿಮನದಟ್ಟಿ ಜನಗಳ ಹೃದಯ ಪರಳುತಲೀ
ಬುವಿಯೊಳನುಭವ ತುಂಬಿಕೊಂಡಿರೆ
ಅವರನರಸುತ ಭಕ್ತಿದುಂಬಿಗ
ಳವರ ಸನಿಹಕೆ ಬಂದುದಮೃತವ ಕುಡಿದು ತನ್ಮಯದೀ

೮

ಪುರಾಣ ಹೇಳ್ವದೊಂದು ಕಲೆಯದು
ಪುರಾತನರ ಕೃಪೆಯಿರಲು ಬೆಲೆಯು
ಪುರಾಕೃತದ ಪುಣ್ಯವನು ಪಡೆದ ಪೂರ್ವಪಂಡಿತರೂ
ವಿರಾಗರಾಗದಿ ಕೂಡಿ ನಡೆಯು
ವರೀ ಪರಮ ಪಂಡಿತರಾಗಿರು
ವರೀ ಪ್ರಸಾರ ಭೋಗಿಗಳಾಗಿ ಧರೆಯೊಳಗೆ ಬೆಳಗೀ

೯

ಇಂಥ ಶಾಸ್ತ್ರಿಗಳಿಂದ ಜನಗಳು
ಅಂತು ಕೇಳುವ ದಿವ್ಯವಾಣಿಯು
ಸಂತಪೇಕ್ಷಿಸಿ ಕರೆಸಿ ಸುದಿನದಿ ಕೇಳಿ ಧನ್ಯವಲೀ
ದಂತ ಕಥೆಗಳ ಹೇಳಿ ನಗಿಸದೆ
ಅಂತರವ ಮಾಡದಲೆ ವಿಷಯವ
ಅಂತರಾಳದ ಕಾವ್ಯಕಥೆಯನು ಹೇಳಿ ಸಹಜದಲೀ

೧೦

ಹೀಗಿರುತ್ತಿರಲೊಂದುದಿನ ತಾ
ವಾಗ ಹೊನ್ನಳಿ ಗೌಡ್ರು ಜೊತೆಗಾ
ಹೋಗುತ ಪ್ರಮುಖ ಜನಗಳು ಶಾಸ್ತ್ರಿಗಳ ಕರೆವುದಕೇ
ಸಾಗಿಬಂದರು ಬಂಡಿಯೊಳಗಾ
ನಾಗರ ಹಾಳಿಂಗೆ ಯೆಲ್ಲರಾ
ಲೋಗರೆಲ್ಲರು ಮೆಚ್ಚಿದಾ ಶಾಸ್ತ್ರಿಗಳ ದರ್ಶನಕೇ

೧೧

ಹೆಸರಾಂತ ಶಾಸ್ತ್ರಿಗಳ ಕಂಡರು
ಎಸೆವ ಶ್ರೀ ದೊಡ್ಡಯ್ಯ ಶಾಸ್ತ್ರಿಗ
ಳೊಸೆದು ನೋಡುತ ಪಾದ ಹಿಡಿಯುತ ಯೆಲ್ಲರೊಂದಿಸು ತಾ
ಹಸಿದಿರುವ ಅತಿಥಿಗಳ ತಾನಾ
ರಸಿಕ ತನವಲಿ ಮಾತನಾಡುತ
ಹೊಸ ಅಡುಗೆಯಿಂ ಶಾಸ್ತ್ರಿಗಳು ಪ್ರಸಾದ ಕರುಣಿಸು ತಾ

೧೨

ಬಂದ ಕಾರ್ಯವ ತಾವು ತಿಳಿಸುತ
ಒಂದು ತಿಂಗಳು ಶ್ರಾವಣದಾ
ಚಂದದಾ ಹೇಮ್‌ರೆಡ್ಡಿ ಮಲ್ಲಮ್ಮನ ಪುರಾಣವನೂ
ಸಂಧಿಸಿರುವದಸಂಖ್ಯೆ ಜನಗಳ
ಮುಂದೆ ಹೇಳಿರಿದಮೃತ ಕುಡಿಸು
ತಂದು ಧನ್ಯರ ಮಾಡಿರೆನ್ನುತ ಶಿವಭಕ್ತಿಯಿಂದಾ

೧೩

ಇನಿತು ಬಿನ್ನಪ ಗೈದ ಭಕ್ತರ
ಗೆನಿತು ಸಂಭಾವನೆಯ ಕೇಳದೆ
ಜನಮನವ ತಣಿಸುವದೆ ಧನ್ಯವದೆಂದು ತಿಳಿಯುತಲೀ
ಅನುಮತಿಸಿ ಶಾಸ್ತ್ರಿಗಳು ತಾವಾ
ದನುಚಿತದರೀತಿಯಲಿ ಭಕ್ತರ
ನನುವಿನಿಂ ಕಳಿಸಿದರು ಲೋಕದ ವಾಡಿಕೆಯ ತೆರದೀ

೧೪

ಸುದಿನ ಶ್ರಾವಣ ಪಾಡ್ಯದಿಂದಾ
ಪದನದಿಂದಾರಂಭವಾಯಿತು
ಪದಿಬದೆಯ ಹೇಮ್‌ರೆಡ್ಡಿ ಮಲ್ಲನ್ಮನ ಪುರಾಣವದೂ
ಪದವರಿತ ದಿವ್ಯಾನುಭವವನು
ಮುದದಿ ಹೇಳಿ ಶಿವಾನುಭಾವದಿ
ಮದನ ಹರಕಳೆ ಹೊಂದಿದಾ ದೊಡ್ಡಯ್ಯಶಾಸ್ತ್ರಿಗಳೂ

೧೫

ಪರಮ ಪಂಡಿತ ಶಾಸ್ತ್ರಿಗಳ
ವರ ಪುರಾಣಕೆ* ಹೊಳೆಬಳ್ಳಾರಿಯ
ಪರಮ ದೇಶಿಕರಾದ ಶ್ರೀ ಚನ್ನಬಸವ ಬರಲಾಗಾ
ಹಿರಿಯ ಗೌರವ ಭಾವದಿಂದಲಿ
ಹರಪ್ರಭೆಯ ದೇಶಿಕಗೆವೊಂದಿಸಿ
ಕರಕಮಲ ಮುಗಿಯುತ್ತ ಶಾಸ್ತ್ರಿಯ ಹೃತ್ಕಮಲವರಳೀ

---

*ಹಳೆಬಳ್ಳಾರಿ

೧೩

ಶಿರವಮುಟ್ಟುತ ಹರಸಿ ಶಾಸ್ತ್ರಿಗ
ಳುರುತರದಿ ಹೂಮಾಲೆ ಹಾಕಿಯೆ
ಪರಮಗುರು ಶ್ರೀ ಚನ್ನಬಸವರು ಹರುಷದಿಂ ಕೊಡೀ
ಪರಮ ಪಾವನ ಚರಿತೆ ಸಾಗಲಿ
ನೆರೆದ ಜನ ಪ್ರವಚನವ ಕೇಳಿಯೆ
ಹರನ ಭಕ್ತಿವಿಕಾಸ ಜನರಿಗೆ ಆಗಲೆಂದ್ಹರಸೀ

೧೭

ಹೋಗಿ ಕುಳಿತು ಚಿತಾಸನದಿತಾ
ನಾಗ ಹೇಳ್ದ ಗವಾಯಿಗಳಿಗಾ
ಬೇಗವೊಂದೊಚನವನು ಹಾಡಿರಿಯೆಂದು ಶಾಸ್ತ್ರಿಗಳೂ
ರಾಗಬದ್ಧದಿ ವಚನ ಹಾಡಿದ
ನಾಗ ಮತ್ತೊಂದ್ಹೈದು ಪದಗಳಾ
ನಾಗ ಪೋದಿಯೇ ಮುಗಿಸಿದಾ ಗವಾಯಿ ಭಕ್ತಿಯಲೀ

೧೮

ತದನಂತರದಿ ಶಾಸ್ತ್ರಿಗಳಾವಿ
ಬುಧತೆಯಿಂದಾಥರ್ಮಾರ್ಥ ಕಾ
ಮದ ಕೊನೆಯ ಮೋಕ್ಷದ ನಾಲ್ಕು ಪುರುಷಾರ್ಥಗಳು ಹೇಳೀ
ಒದಗಿದರ್ಥವು ಧರ್ಮಕಾಗಿಯೆ
ಮುದದಿ ಕಾಮವು ಮೋಕ್ಷಕಾಗಿಯೆ
ಇದರ ಪರಿಯನು ತಿಳಿದು ನಡೆಯಲು ಶಿವನ ಜೀವನವೂ

೧೯

ಬೆಲೆವೆಣ್ಣು ಸಂಗದ ವೇಮನಾ
ಬಲೆಗೆ ಬಿದ್ದಿರುವಂಥ ಕಾಮಿಯು
ನೆಲೆಕಲೆಯು ತಿಳಿಯದಲೆ ತಾನಾಮೋಹ ಪರವಶದೀ
ಬೆಳಕಿನೊಳಗಿರುವಂಥ ಜೀವನ
ಬಲವು ನೈತಿಕವಿರದ ಬಾಳುವೆ
ಥಳುಬಳುಕೆಯೊಳಿರುವಂಥ ಮನುಜಗೆ ಶಾಂತಿ ಸಿಗದೆಂದೂ

೨೦

ಬೆಲೆಯು ತಿಳಿಯದಲಿರುವ ಜೀವನ
ಎಲುಬು ಮಾಂಸದ ರುಚಿಯಲಿರುತಲಿ
ಚೆಲುವು ಜೀವನ ಮಾಡಿಕೊಳ್ಳದೆ ನಾಯಿ ಜೀವನವೂ
ಕೊಲುವ ವಿಷಯಿಗಳಿಂದ ತಾನಾ
ಗೆಲುವಿನಲಿ ಅಂಕಿತವಗೊಳಿಸಿಯೆ
ಬಲುಮೆ ಘನಮನದಿಂದ ಕೂಡಿರೆ ವಿರತ ಯೋಗವದೂ

೨೧

ಕಾಮದಿಂದಲಿ ಕಪಿಗಳಾಗುತ
ಕಾಮದಿಂದಲಿ ಕುರುಡರಾಗುತ
ಕಾಮವೆ ಜೀವನದ ಧ್ಯೇಯವದೆಂದು ತಿಳಿಯುತಲೀ
ಕಾಮ ತಣಿಸಲು ಹೊರಟ ಜನಗಳು
ಕಾಮದಿಂದಲಿ ತೃಪ್ತಿ ಸಿಗದಲೆ
ಕಾಮಜ್ವಾಲೆಗೆ ತುಪ್ಪ ಸುರಿದಂತಾಗಿ ದುಃಖದೊಳೂ

೨೨

ಕಾಮ ಪಶುವಿನ ಪಾಲುವಾಗದೆ
ಕಾಮ ಧರ್ಮ ವಿರೋಧಿಯಾಗದ
ಕಾಮದೊಳು ಕೂಡಿರುವ ದೇವನು ಶಿವಮಯವು ಜಗದೀ
ಕಾಮ ವಿಷಯದಿ ಹೇಯವೆನಿಸಿದೆ
ಕಾಮಧರ್ಮ ಪ್ರಸಾದ ರೂಪ
ದಾಮಹಾಲಿಂಗೋಪಭೋಗದುಪಾದೇಯವಾಗಿಃ

೨೩

ವಿಷವು ನುಂಗಲು ಪ್ರಾಣ ಹರಣವು
ವಿಷಯ ನೆನಹಿನಲಳಿವ ಮನುಜನು
ವಿಷವು ವಿಷಯದಿ ಪರಿಕಿಸಲು ಮಹದಂತರವುಯೆನಿಸೀ
ಉಷೆಯ ಹೊಂಬೆಳಗಿನೊಳು ಬಾಳನು
ವಿಷಮುಷ್ಠಿ ತಿಗಾಹುತಿ ಮಾಡದೆ
ವಿಷಕಂಠ ಕೃಪೆಯಲಿ ಬಾಳುತಲಿ ನೀತಿವಿದರಾಗಿಃ

೨೪

ಗಣಿಕೆ ಸಂಗವೂ ಘನತೆ ಕೆಡಿಸಿದ
ಗಣಿತ ತಪ್ಪುಗಳನ್ನು ಮಾಡಿಸಿ
ಋಣಗಾರ್‍ನ ಮಾಡುತಲಿ ಜಗದೊಳು ಬಳಗವಗಲಿಸುತಾ
ಹಣವಿರುವ ತನಕಿರುವ ಮೋಹವು
ಹಣವು ತೀರಲು ಜಾರಿಜಾರೆಯು
ಹಣವು ಸುಲಿಯುತ ಹೆಣವ ಮಾಡುತ ಕಾಡ ಕಪಿ ಮಾಡೀ

೨೫

ಪರಧನ ಸತಿ ಬಯಸ್ವ ಹೊಲೆಯನು
ಹಿರಿಯ ಗುಣವಿರದವನು ಹೊಲೆಯನು
ಸುರೆಗುಡಿದು ಮಾಂಸವನು ತಿನ್ನುವ ಮನುಜನೇ ಹೊಲೆಯಾ
ಧರೆಯೊಳಿಪ ಗೋಮುಖವ್ಯಾಘ್ರರು
ಯರಡು ನಾಟಕವಾಡಿ ಜಗದೊಳು
ತಿರುಪೆ ಜೀವನ ಮಾಡಿಕೊಳ್ಳುತ ನೀತಿಪತನದಲೀ

೨೬

ಪುರಾಣ ಹೇಳುವ ಶೈಲಿ ಸೊಗಸು
ಸರಾಗ ರಾಗದ ಭಾವದಿಂದ
ನಿರಾತಂಕದಿ ತತ್ವಪ್ರುತಿ ಪರಿಪಾದನೆಯು ಮಾಡುತಲೀ
ನಿರಾಳ ಭಾವದಿ ಕಾವ್ಯಕಥೆಯನು
ನಿರೂಪಣೆಯು ತಾ ಗಮಕದಿಂದ
ವಿರಾಗವೈಖರಿಯಿಂದ ವಿವರಿಸಿ ತತ್ವಬದ್ಧದೀ

೨೭

ಪಂಡಿತ ಪ್ರವಚನವ ಕೇಳಿಯೆ
ಕಂಡು ಆನಂದಿಸುತ ತಾವಾ
ಪಂಡಿತರ ಸಮದರ್ಶನತ್ವವು ಸಾರ್ಥಕವದಾಗೀ
ಆಂಡಲೆವ ಮನಶಾಂತಿ ಸೌಖ್ಯಕೆ
ಮಂಡೆಯೊಳಗಿರುವಂಥ ಜ್ಞಾನವ
ಮಂಡಿಸುತ ಗುರುದಿವ್ಯ ಸನ್ನಿಧಿಯಲ್ಲಿ ಭಕ್ತಿಯೊಳೂ

೨೮

ನೆರೆದ ಜನರಿಗೆ ನಿಜದ ಶಾಂತಿಯು
ಕೊರತೆಯಿಲ್ಲದೆ ಲಭ್ಯವಾಗುತ
ಪರಮಪಾವನ ಚರಿತೆಯಮೃತವ ತಾವು ಸವಿಯುತಲೀ
ಗುರುವರರು ಶ್ರೀ ಚನ್ನಬಸವರು
ಹಿರಿಯ ಶಾಸ್ತ್ರಿಗಳನ್ನೂ ಮೆಚ್ಚುತ
ಧರೆಯೊಳಗೆ ದೊಡ್ಡಪ್ಪನವರೆಂದಾಗ ಹರಸುತಲೀ

೨೯

ದಿನವು ತಪ್ಪದೆ ಬರುವುದಾಗಿಯೆ
ಅನುಪಮದ ಚರಿತೆಯನು ಕೇಳಲು
ಅನುಕೂಲದಿಂ ಭಕ್ತಜನಗಳ ಕೂಡಿಕೊಳ್ಳುತಲೀ
ಇನಿತು ಮಂಗಲದಿಂದ ಹರಸುತ
ಗೊನೆಯ ಬಾಳೆಯ ಹಣ್ಣು ಕೊಡುತಲಿ
ಘನಮನದಿ ಪ್ರಸಾದ ಕರುಣಿಸಿ ಸರ್ವಜನಗಳಿಗೇ

೩೦

ಹೊತ್ತು ಮುಳುಗುವ ಪೂರ್ವದಲ್ಲಿಯೆ
ಹತ್ತಿ ಹರಿಗೋಲಲ್ಲಿ ಭಕ್ತರು
ಸುತ್ತುವರಿದಿರು ಅವರ ಮಧ್ಯದಿ ಕೂತು ದೇಶಿಕರೂ
ಗುತ್ತಿಗೆಯ ಹಿಡಿದಂಥ ಅಂಬಿಗ
ಚಿತ್ತವೇಕಾಗ್ರದಲಿ ನಿಲಿಸುತ
ಮತ್ತೆ ಮತ್ತೆ ತಾ ಹುಟ್ಟು ಹಾಕುತ ನದಿ ದಾಟಿಸಿದಾ

೩೧

ಹಣವ ಕೊಡುತಂಬಿಗನ ಹರಸಿಯೆ
ಗಣನೆಯಿಂದಲಿ ದಾಟಿಸೆಲ್ಲರ
ಗಣತಿ ಸಮತಾ ಕಾಯಕವ ನಡೆಸೆಂದು ದೇಶಿಕರೂ
ಗುಣವು ದೊಡ್ಡದು ಮಾಡಿ ಧರೆಯಲಿ
ಚಣಚಣಕು ಕೂಲಿಯನು ಕೇಳದೆ
ಫಣಿ ಕುಂಡಲನ ಕೃಪೆಯಲ್ಲಿ ಬಾಳೆಂದಾಗ ಹರಸೀ

೩೨

ಒಪ್ಪಿ ಮನ ಹಿಗ್ಗುತಲಿ ಶಾಸ್ತ್ರಿಗ
ಳಪ್ಪನವರಾದಂಥ ದೇಶಿಕ
ರೊಪ್ಪಿ ಸತ್ಯದಶವೆದವೆಗಳಿಂದಾಗ ಕೂಡಿರಲೂ
ತಪ್ಪದಲೆ ಬರುವಾ ಪ್ರವಚನಕೆ
ಅಪ್ಪಟದ ಹೊಂಬಣ್ಣ ತೇಜದಿ
ನಿಪ್ಪೊಸತು ರೂಪದಲಿ ಶಿವಕಳೆಯಿಂದ ಶೋಭಿಸುತಾ

೩೩

ಮಾತನಾಡದೆ ಕೃತಿಯ ಮಾಡುವ
ಪೂತ ಚಿನ್ಮಯ ಗಾತ್ರನಾಗುತ
ಖ್ಯಾತರಾದರು ಚನ್ನಬಸವರು ಗುರು ಘನತೆಯಿಂದಾ
ದಾತರೆನಿಸುತ ಮಠದಲಿರುತಲಿ
ನೂತನದ ಮಹಾಸ್ವಾಮಿಯೆನಿಸುತ
ಓತುಮಿಂದಲಿ ಭಕ್ತಜನಗಳ ರಕ್ಷಣೆಗೆ ನಿಂತೂ

೩೪

ದುಗುಡಗೊಂಡಿರುವಂಥ ಜನಗಳು
ಜಗದಿ ಕಂಗೆಟ್ಟಿರುವ ಮನುಜರು
ಬಗೆಬಗೆಯು ಭಾವದಲಿ ಭಕ್ತರು ಮಠಕೆ ಬರುತಾಗಾ
ಮಗನ ಪಿತ ಸಂತೈಸುವಂತೆಯೇ
ಸೊಗಸಿನಲಿ ಹರಸುತ್ತ ಭಕ್ತರ
ಬಗೆಯುದನುಗಣದಂತೆ ನಡೆನುಡ್ಡಿ ತಿದ್ದಿದೇಶಿಕರೂ

೩೫

ಭಕ್ತರಿಂದಾ ಬಂದ ಕಾಣಿಕೆ
ಭಕ್ತಜನ ದಾಸೋಹಕಾಗಿಯೇ
ಭಕ್ತಿ ಶಕ್ತಿಗಳಿಂದ ಗುರುಗಳು ಖರ್ಚು ಮಾಡುತಲೀ
ಯುಕ್ತಿಯಿಂಧನ ಕೂಡಿಯಿಡದಲೆ
ಶಕ್ತಿಯುದುವ ವಿರಕ್ತಿಯಾಗುತ
ಮುಕ್ತಿಮಾರ್ಗದ ಜ್ಯೋತಿಯಾಗುತ ಧರೆಯ ಬೆಳಗುತಲೀ

೩೬

ಮತದ ಭೂಮಿಯ ಧ್ಯಾನದಿಂದಲಿ
ಮತಕೆ ಬರುವಾ ಭಕ್ತ ಜನರಿಗೆ
ಮತದೊಳಗೆ ತಾ ನಿತ್ಯ ದಾಸೋಹವನು ನಡೆಸುತಲೀ
ಕಠಿಣ ಜನಗಳ ಮನವ ಕರಗಿಸಿ
ಹತದ ಜನಗಳ ಕೊಂಕು ತಿದ್ದುತ
ಮತಕೆ ಕಳೆಯನು ತಂದ ದೇಶಿಕ ಜನರ ಜೊತೆಗಾಗಾ

೩೭

ಬೆಳಗಿನಾ ಜಾವದಲಿಯೇಳುತ
ನಳಿನ ಹೋರಿಗಳನ್ನು ಯೆಬ್ಬಿಸಿ
ಬಳಿಯಲಿಹ ಹಸಿಸೊಪ್ಪೆ ಹಾಕುತ ಮುದದಿ ದೇಶಿಕರೂ
ಕೆಳಗೆ ಬಿದ್ದಿರುವಂಥ ಸಗಣಿಯು
ನಳಿನ ಕರಗಳಲಿಂದ ಯೆತ್ತಿದ
ಬಳಿಕ ನೀರ್ಕುಡಿಸುತಲಿ ಹೋರಿಗಳನ್ನು ಹೊರಕಟ್ಟೀ

೩೮

ಆಳು ಮಕ್ಕಳು ಬರುವ ಮುಂಚೆಯೆ
ವೇಳೆ ಬೆಳೆಯನು ತಿಳಿದ ದೇಶಿಕ
ಬಾಳುವೆಯು ಕೃಷಿ ಕಾಯಕದಿ ತಾ ಸಹಕರಿಸಿ ನಡೆದೂ
ಬೀಳು ಬಿದ್ದಿರುವಂಥ ಭೂಮಿಯ
ಕಾಳು ಬೆಳೆ ಬರುವಂತೆ ಮಾಡಿಯೆ
ಹಾಳುಗೆಡವದೆ ಸಸ್ಯಸಂವೃದ್ಧಿಯನುಗೊಳಿಸುತಲೀ

೩೯

ಈ ಮತಕೆ ಸ್ವಾಮಿಗಳು ಆಗ್ವರು
ಸಾಮರಸ್ಯದಿ ಯೆಲ್ಲ ಜನಗಳ
ಕಾಮಿತಾರ್ಥವ ಕರುಣಿಸುತ ತಾ ಸರಳಜೀವನದೀ
ಆಮಯದಿ ದುಃಖಿಸುವ ಜನರಿಗೆ
ರಾಮಗುಣಗಂಭೀರ ಸುಖವನು
ರಾಮಣೀಯಕದಲ್ಲಿ ಕೊಡುವಾದೇಶಿಕರ ಕಂಡೂ

೪೦

ಹಿಗ್ಗಿ ಹಿರಿದಾಗುತಲಿ ಭಕ್ತರು
ಸುಗ್ಗಿಯಲಿ ಧನಧಾನ್ಯ ತರುತಲಿ
ಜುಗ್ಗತನ ತೋರದಲೆ ಮಠಕರ್ಪಿಸುತ ಭಕ್ತಿಯಲೀ
ಸಗ್ಗ ಸುಖವನು ಮೀರಿಸಿರುವೀ
ಉಗ್ಗಡದ ದಾಸೋಹದಿಂದಲಿ
ವೆಗ್ಗಳತೆ ಪಡೆದಂಥ ಭಕ್ತರು ಧನ್ಯರಾಗುತಲೀ

೪೧

ಎಂದಿನಂತೆ ಪುರಾಣ ಕೇಳಲು
ಬಂದು ಹೊನ್ನಳ್ಳಿಯೊಳು ಯಿರುವಾ
ಚಂದವಾಗಿರುವಂಥ ಈಶನ ಗುಡಿಗೆ ತಾಹೋಗೀ
ಮುಂದೆ ಬಂದಿರುವಂಥ ಭಕ್ತರ
ವಂದನೆಯ ಸ್ವೀಕರಿಸಿ ಗುರುಗಳು
ಅಂದು ಅಪ್ಪಣೆ ಕೊಡಿಸಿದರಾ ಪುರಾಣ ಸಾಗಲಿಕೇ

೪೨

ಪರಮ ಪಂಡಿತ ಶಾಸ್ತ್ರಿಗಳು ತಾ
ಪರಮ ಗುರುಶ್ರೀ ಚನ್ನಬಸವರ
ವರಮಹಾ ಪಾದಗಳ ಸನ್ನಿಧಿಗಂದು ವೊಂದಿಸುತಾ
ಪರಮ ಚರಿತೆಯು ಮುಂದುವರಿಸುತ
ದುರಿತ ಕಾಮದ ಭೂಪನಾಗಿಹ
ಭರಮರೆಡ್ಡಿಯ ತಮ್ಮ ವೇಮನ ಚರಿತೆ ಹೇಳುತಲೀ

೪೩

ವೇಮನನ ಸ್ತ್ರೀಲಂಪಟತ್ವವು
ಕಾಮಕೇಳಿಯು ಗಗನ ಮುಟ್ಟಲು
ವಾಮಮಾರ್ಗದಿ ನಡೆಯುತಲಿ ತಾ ನೀತಿಬಿಟ್ಟಿರಲೂ
ಹೇಮ್‌ರೆಡ್ಡಿ ಸೊಸೆ ಮಲ್ಲಮ್ಮನಾ
ಪ್ರೇಮಪತಿ ಭರ್ಮರೆಡ್ಡಿಗೊಪ್ಪುವ
ಪ್ರೇಮಸತಿ ಸಾಧ್ವಿಯಳು ಆಗಿಹು ನಡೆದು ಕಿಂಕರದೀ

೪೪

ಅತ್ತಿಗೆಯ ಮೂಗುತಿಯ ನೆವನದಿ
ಬತ್ತಲೆಯ ವೇಶ್ಯಯಳ ದೇಹವ
ಬತ್ತಿದೀಪದಲಂದು ಕಾಣುತ ಮೋಹ ಹೇಸಿಸಿತೂ
ಚಿತ್ತ ಚಿನ್ಮಯ ಮಿಂಚು ಹೊಳೆಯಿತು
ಗೊತ್ತುಗುರಿ ಯಿರದಂಥ ವೇಮನ
ಮುತ್ತಿನಂತಹ ಅತ್ತಿಗೆಯ ಕೃಪೆ ಪಡೆದು ಪಾವನದೀ

೪೫

ಭೋಗ ಹಿಮ್ಮುಖವಾದುದಾಗಲೆ
ರಾಗದೊಳಗೆ ವಿರಾಗ ಹುಟ್ಟುತ
ತೂಗಿ ತಲೆಯನು ವೇಮನಾಗಲೆ ಅತ್ತಿಗೆಯ ನೆನಸೀ
ಯೋಗ ಮುಖದಲಿ ರಾಜನೆನಿಸುತ
ಸಾಗಿಹೋಗುತ ದೇಶ ತಿರುಗುತ
ಬಗೆಯು ಭಗವಂತನನು ನೆನೆಯುತ ಲೋಕದನುಭವದೀ

೪೬

ವಿವಿಧದನುಭವದಿಂದ ವೇಮನ
ವಿವಿಧ ತತ್ವದ ಪದ್ಯ ರಚಿಸುತ
ಸುವಿಚಾರ ಚೌಪದಿ ತೆಲುಗಿನಾ ಸಾಹಿತ್ಯ ಕೂಡೀ
ಶಿವನ ಕರುಣೆಯ ಕಿರಣ ಮೂಡುತ
ಕವಿದ ಕಾರ್ಮೋಡಗಳು ಚದುರುತ
ಭುವಿಯೊಳಗೆ ವೇಮನನು ಯೋಗಿಯೆ ಆಗಿ ಮೆರೆಯುತಲೀ

೪೭

ತನ್ನರಿವಿಗಾ ಸಾರ್ವಭೌಮನು
ಹೊನ್ನು ಹೆಣ್ಣಿನ ಘಣ್ಣಿನಾಸೆಯ
ಯಿನ್ನೆಂದು ಬಯಸದ ಧೀರವೇಮನಯೋಗಿಯಾಗೀ
ಬನ್ನ ಜೀವನ ಹೊನ್ನು ಆಯಿತು
ಧನ್ಯನಾದಾ ಹೇಮರೆಡ್ಡಿಯು
ಸನ್ನುತಿಸಿ ಮಲ್ಲಮ್ಮ ಸೊಸೆಯನು ಭಕ್ತಿ ಭಾವದಲೀ

೪೮

ಈ ಪರಿಯ ಸೊಬಗಿನಲಿ ಹೇಳುವ
ರೂಪಕದಿ ಕಥೆ ಭಾವ ಕೆಡಿಸದೆ
ಭಾಪು ಮಝು ಭಾಪೆಂದು ಪರ್ಣಿಸಿಕೊಂಡ ಶಾಸ್ತ್ರಿಗಳೂ
ಕೋಪವಿರದ ಪ್ರಶಾಂತ ಮುಖಿದೊ
ಛಾ ಪರಮ ಕಳೆ ಕೂಡಿಕೊಂಡಿರೆ
ಮೋಪು ಸುಹೃದಯ ಶಾಸ್ತ್ರಿಗಳ ತಾ ಹರಸಿ ದೇಶಿಕರೂ

೪೯

ನಾಳೆ ಬೆಳಗಿನ ಪೂಜೆಗಾಗಿಯೆ
ವೇಳೆ ಮಾಡದೆ ಬನ್ನಿರೆನ್ನುತ
ಕೇಳಿ ಗೌಡರು ಬರುವುದಾದರೆ ಜೊತೆಗೆ ಬರಹೇಳೀ
ಬೀಳು ಕೊಟ್ಟರು ಭಕ್ತರಾಗಲೆ
ಬಾಳಿನಾ ಬೆಳಕಾದ ದೇಶಿಕ
ರಾಳವಾದ ವಿಚಾರ ಹೃದಯಕೆ ಜನರು ಹರುಷದಲೀ

೫೦

ಇತ್ತ ಶ್ರೀ ದೊಡ್ಡಯ್ಯಶಾಸ್ತ್ರಿಯು
ಚಿತ್ತ ಸ್ವಾಮಿಗಳಲ್ಲಿ ನೆಲಸಲು
ಮೊತ್ತದಲಿ ಶ್ರೀಗುರುವ ಮೆಚ್ಚುತ ಶಾಸ್ತ್ರಿಗಳು ನಲಿದೂ
ಅತ್ತ ಶ್ರೀಗಳು ಮಠದೊಳಗೆ ತಾ
ಮತ್ತೆ ಪ್ರವಚನ ಶೈಲಿ ಮೆಚ್ಚಿ
ಬೆತ್ತ ಕೈಯಲಿ ಆಡಿಸುತ ತಾ ಶಾಸ್ತ್ರಿ ನೆನಪಿನಲೀ

೫೧

ಮರುದಿನ ಶಾಸ್ತ್ರಿಗಳ ಜೊತೆಯಲಾ
ಗುರುವಿನಪ್ಪಣೆಯಂತೆ ಗೌಡರು
ವಿರುತ ಮಠದೊಳ ಬಳ್ಳಾರಿ ಶ್ರೀಗಳ ದರ್ಶನಕೆ ಹೋಗೀ
ಗುರುವಿಗೊಂದಿಸಿಯೆಲ್ಲ ಜನಗಳು
ಕರುಣೆ ಮೂರ್ತಿಯ ಕಂಡು ಹರುಷಿಸಿ
ವರಸಮಾಧಿಗೆ ಕಾಯಿಕರ್ಪೂರ ಮಾಡಿಸಿದರಾಗಾ

೫೨

ಜಗದ ಜನ ಕಲ್ಯಾಣಕಾಗಿಮಾ
ಆಗಣಿತ ವೈಭವದ ಪೂಜೆಯು
ಸೊಗಸು ಶಿವಯೋಗದಲಿ ಮಾಡುವ ಶ್ರೀಗಳನು ಕಂಡೂ
ಲಗುವಿನಲಿ ಸ್ನಾನವನು ಮುಗಿಸುತ
ನಘ ಶ್ರೀಗಳ ಪಾದಪೂಜೆಗಾ
ಒಗುಮಿಂಗೆಯ ಭಕ್ತಿಯಲಿ ಶಾಸ್ತ್ರಿಗಳಾಗ ಕುಳಿತಿರಲೂ

೫೩

ವಿಧಿಯಪೂರ್ವಕವಾಗಿ ಗುರುಗಳ
ಸದುವಿನಯ ಶಾಸ್ತ್ರಿಗಳು ತಾನಾ
ವಿದಿತ ಭಾವದಿ ಪಾದಪೂಜೆಯ ಮಾಡಿಕೊಳ್ಳುತಲೀ
ಸದಯ ಹೃದಯಾಗುರುವಕೃಪೆಯ
ಕದಲಪಂತಹ ನಿಷ್ಠೆ ಭಕ್ತಿಯ
ಹದನದಿಂ ಶಾಸ್ತ್ರಿಗಳು ತಾ ಪಾದೋದಕವ ಪಡೆದೂ

೫೪

ಯಾವ ಜನ್ಮದ ಸುಕೃತವೇನೋ
ಭಾವಿಸುವೊಡನುಪಮದಧನ್ಯತೆ
ತೀವಿಬಂಧಿಹ ಧರ್ಮ ಕರ್ಮದ ಯೋಗ ಶಿವಯೋಗಾ
ದೇವಗುರುವಿನ ಲಿಂಗಗುಣಗಳು
ಈ ವಿರತ ದೇಶಿಕರ ಕೂಡಿರೆ
ಭಾವ ಭಕ್ತಿಯ ಶಾಸ್ತ್ರಿ ಜೀವನ ಮಂಗಳವುಯೆನಿಸೀ

೫೫

ಪರಮ ಪ್ರಾಸಾದವನು ಕರುಣಿಸಿ
ವರಶಿಷ್ಯ ಶಾಸ್ತ್ರಿಗಳ ಹರಸುತ
ವಿರತ ಮಠದಾಸ್ಥಾನ ಪಂಡಿತರೆಂದು ಸ್ವೀಕರಿಸೀ
ಕರುಣೆಯಲಿ ಶಾಲನ್ನು ಹೊದಿಸುತ
ಧರೆಯೊಳಧಿಕ ಖ್ಯಾತಿಯನು ತಾ
ಹರನ ಯೋಗದಿ ಪಡೆದು ಬೆಳಗೆಂದಾಗ ದೇಶಿಕರೂ

೫೭

ಶ್ರೀಗುರುವು ವರ ಚನ್ನಬಸವರು
ಹೋಗಬಯಸಿ ಪುರಾಣ ಕೇಳಲು
ಸಾಗಿ ನಡೆಯುತ ಭಕ್ತವೃಂದವು ನದಿಯೆಡೆಗೆಯೆಳಸೀ
ಬೇಗ ನಂಬಿಗ ಹುಟ್ಟುಹಾಕುತ
ಹೋಗಿಯಾಚೆಯ ದಡವ ತಲುಪಿಸಿ
ಯೋಗ ಸುಖದಲಿ ಕೂಡಿಬಂದರು ಶಾಸ್ತ್ರಿಗಳು ಸಹಿತಾ

೫೭

ಪರಮ ಪಾವನ ಉಪನಿಷತ್ತಿನ
ಪರಮ ಗೋಪ್ಯದ ವಿಷಯ ತತ್ವವ
ಪರಮಕಥೆ ದೃಷ್ಟಾಂತದಿಂದಲಿ ಹೇಳಿ ಸರಳದಲೀ
ಪರಮ ಕಾಯಕದಿಂದ ದುಡಿವಗೆ
ಇರದು ಬಡತನ ಶಾಂತಿಯಿಂದಲಿ
ಸರಳಜೀವನ ನಡೆಸಿದರೆ ನಿತ್ಯತ್ವವೆಂದರುಹೀ

೫೮

ನಾಳೆದಿನದಿ ಪುರಾಣ ಮಂಗಲ
ವೇಳೆಗೆ ಸರಿಯಾಗಿ ಪ್ರಸ್ತಕೆ
ಮೇಳಯಿಸಿ ಭಕ್ತರು ಚಂದ ಕಾರ್ಯವ ಮಾಡಿರೆಂದೂ
ಬಾಳುವೆಯು ಬೀಳಾಗಗೊಡದಲೆ
ಬಾಳಿ ಜೀವನ ಮಧುರದಿಂದಲಿ
ಬಾಳು ಸೈಯೆನಿಸುತಲಿ ಹರಗುರುಚರವರರುವೊಪ್ಪೀ

೫೯

ಸಮಾಜ ಹಿತಚಿಂತಕರು ಆಗಿ
ಸಮಾನ ಭಾವದಿ ಕಂಡುಯೆಲ್ಲರ
ಸಮಾನ ಭಾವದೀ ಜೀವಿಸುತ ಸುಖದುಃಖದಿಗಳಲೀ
ಸಮೀಚೀನ ಸುಸಂಸ್ಕೃತಿಯು ತಾ
ಸಮಾಜದಲ್ಲಿಯೆ ವೃದ್ಧಿಯಾಗಿ
ಸಮಾರೋಪ ಜೀವನ ಸಚ್ಚಿದಾನಂದಾಬ್ಧಿಯಲೀ

೬೦

ಅಂದು ಗುರುಗಳು ಅಲ್ಲಿಯುಳಿದರು
ಅಂದು ಭಕ್ತರು ಮನೆಯೊಳಗೆ ತಾ
ಚಂದವಾಗಿ ಪ್ರಸನ್ನ ಮನದಲಿ ಪೂಜೆ ಮಾಡಿದರೂ
ಸುಂದರತೆ ಶಿವಸತ್ಯವಾಗಿದೆ
ಮುಂದೆ ಕುಳಿತಿಹ ಶಾಸ್ತ್ರಿಗಳ ತಾ
ವಂದು ಆತ್ಮೀಯದಲಿ ಮಾತುಗಳಾಡಿ ಹರುಷದಲೀ

೬೧

ಪರಮ ಪ್ರಾಸಾದಿಕದ ಸುಖವನು
ಚರವರೇಣ್ಯನ ಸಂಗದಿಂದಲಿ
ಪರಮ ಪಂಡಿತ ಶಾಸ್ತ್ರಿಗಳು ತಾವಂದು ಅನುಭವಿಸೀ
ಪರಮ ಗುರುಕರುಣಾಮೃತಕೆ ತಾ
ಹರಿದು ಜಗದೊಳುವುಂಟೆ ಯೆನುತಲಿ
ಗುರುವಿಗೆ ಶಿರಸಾಷ್ಟಾಂಗ ಹಾಕಿಯೆ ಯೆದ್ದುಶಾಸ್ತ್ರಿಯೂ

೬೨

ಮಂಗಲವ ಹಾಡುತಲಿ ಶಾಸ್ತ್ರಿಯು
ತುಂಗ ಮಹಿಮನ ಘನದ ಗುರುವಿನ
ಮಂಗಲದಿ ಶಿವಜೀವನವ ತಾ ನಿಜದಿ ಕೊಂಡಾಡೀ
ಸಂಗ ಶಿವಯೋಗಿಯಲಿ ಚಲುವಾ
ಸಂಗದಿಂದಲಿ ಮಾಟಕೂಟವು
ಲಿಂಗಗುಣಗಳ ಲಿಂಗಕಿರಣದಿ ಧರೆಯೊಳಗೆ ಬೆಳಗೀ

೬೩

ಓಂನಮೋ ಶ್ರೀ ಚನ್ನಬಸವಗೆ
ಓಂನಮೋ ಶ್ರೀ ಶಿವನ ರೂಪಿಗೆ
ಓಂನಮೋ ಶ್ರೀ ಪಳಬಳ್ಳಾರಿ ವಿರತಮಠದೊಡೆಯಗೇ
ಓಂನಮೋ ಶ್ರೀ ಕರುಣೆ ಮೂರ್ತಿಗೆ
ಓಂನಮೋ ಶ್ರೀ ಪೂಜ್ಯಪಾದಕೆ
ಓಂನಮೋ ಶ್ರೀ ಗುರುವರೇಣ್ಯನ ದಿವ್ಯಸನ್ನಿಧಿಗೇ

೬೪

ಜೀಗರಕಲ್ ನರಸಪ್ಪನಾ
ತ್ಯಾಗಬುದ್ಧಿಯು ಬಲವು ಕೂಡಿರೆ
ಯೋಗದಿಂ ವೀರಪ್ಪ ಷಣ್ಮುಖ ಭಕ್ತರೊಡಗೂಡೀ
ಈಗಿರುವಾ ಪುರಾಣಮಂಗಲ
ಹೇಗೆ ಸಂಭ್ರಮದಿಂದ ಮಾಡ್ವದು
ಹೋಗಿ ಶ್ರೀ ದೇಶಿಕರ ಕಾಣುತ ವಿಷಯ ತಿಳಿಸುತಲೀ

೬೫

ವಿವರ ತಿಳಿದಿರುವಂಥ ದೇಶಿಕ
ಸವಿನಯದಿ ನೂರೊಂದು ಕಾಪ್ಯಕ
ಅವರ ಕೈಯಿಗೆ ಕೊಟ್ಟು ಹರಸಿ ಪುರಾಣ ಮಂಗಲಕೇ
ಅವರ ಜೊತೆಯಲಿ ಸ್ವಾಮಿ ಬಂದರು
ಅವರಿಗೇನದು ಕೊರತೆಯಿರದಲೆ
ಅವಿಕಲದ ಭಕ್ತಿಯಲಿ ಶಕ್ತಿಯು ಕೂಡಿಕೊಳ್ಳುತಲೀ

೬೬

ಚಂದದಿಂದಲಿ ಸರ್ವಭಕ್ತರು
ಚಂದ ಮನಸಿನ ಭಾವದಿಂದಲಿ
ಚಂದಶ್ರೀ ದೇಶಿಕರ ಪಾದಕೆ ಕಾಣಿಕೆಯ ಸಲಿಸೀ
ಬಂದಿರುವ ಭಕ್ತರನು ಪ್ರೇಮದಿ
ಒಂದು ಮನಸಿನ ಯೆಲ್ಲ ಭಕ್ತರು
ಯಿಂದು ಮಾಡಿರಿ ಮಹಾಕಾರ್ಯವಯೆಂದು ಹರಸುತಲೀ

೬೭

ತನುಮನದಿ ಸೇವೆಯನು ಮಾಡಲು
ಅನುಪಮದ ದೇಶಿಕರ ಕೃಪೆಯದು
ಅನುವಾಗಿ ಸಮರಸಭಾವದಿಂ ಚೇತನವನೀಡೀ
ಅನುಕ್ರಮದಿ ಮಾಮರದ ತೋರಣ
ವಿನತಿಭಾವದಿ ಬಾಳೆ ದಿಂಡಲಿ
ದಿನಪನುದಯದ ಮುನ್ನ ತಾವ್ ಸಿಂಗರಿಸಿ ಹರುಷದೀ

೭೮

ಪುರಾಣ ಹೇಳುವ ಮಠದೊಳು ತಾ
ನಿರಾತಂಕದಿ ಗಣಾರಾಧನೆ
ನಿರಾಳಭಾವದಿ ನಡೆದು ಗುರುಚರ ತೃಪ್ತಿಭಾವದೀ
ನಿರೂಪ ಕರುಣಿಸಿದಾ ದೇಶಿಕ
ಗುರೂಪದೇಶದಿ ಮಾಡಿದರಾ
ಪರಾತದಲಿ ದಕ್ಷಿಣೆಯು ಕೊಟ್ಟರು ಜಂಗಮರಿಗೇ

೭೯

ಊರಿಗಾ ಹೊಸಕಳೆಯು ಬಂದಿತು
ಸಾರಿಸಾರಿಗು ಸ್ವಾಮಿಗಳು ತಾ
ಭೂರಿ ಮನದಲಿ ಹೊಗಳುತೆಲ್ಲರ ಭೃತ್ಯಭಾವದಲೀ
ಮಾರಹರ ಕಳೆಯಲ್ಲಿ ಬೆಳಗುವ
ಪಾರಶಿವನನುಭವದ ಘನತೆಗೆ
ಮಾರು ಹೋಗುತ ಮೆಚ್ಚುತೆಲ್ಲರು ದೇಶಿಕರಕೂಡೀ

೮೦

ಸಂಜೆಯೊಳಗೆ ಪುರಾಣ ಮಂಗಲ
ಜಂಜಡರಹಿತದಲಿ ನಡೆಸಿತಾ
ಹಿಂಜರಿಯದೆ ಖರ್ಚು ಮಾಡುತ ಕ್ರಮದ ಬಳಕೆಯಲೀ
ರಂಜಿಸಿತು ದೇಶಿಕರ ಕೃಪೆಯಲಿ
ಮಂಜು ಹಿಡಿದ ಜ್ಞಾನ ತೊಲಗಿತು
ನಂಜುಗುಣ ಕಳಕೊಂಡು ಭಕ್ತರ ಮಂಗಳದಿ ಬೆಳಗೀ

೮೧

ತಮ್ಮ ಮಠಗಳ ಕಾರ್ಯಕ್ರಮಕೆ
ಒಮ್ಮನದಿ ಶಾಸ್ತ್ರಿಗಳು ತಪ್ಪದೆ
ಹುಮ್ಮನದಿ ಬರಬೇಕುಯೆಂದಾದೇಶಿಕರು ಹರಸೀ
ಹಮ್ಮುಬಿಮ್ಮುಗಳಿರದ ಶಾಸ್ತ್ರಿಯು
ಒಮ್ಮನದಿ ಪೊಂದಿಸುತ ಗುರುವಿಗೆ
ಹಮ್ಮಿಕೊಂಡಿಹ ಸ್ವಾಮಿಕಾರ್ಯಕೆ ಪೊಪ್ಪ ಭಕ್ತಿಯಲೀ

೭೨

ನರಸಪ್ಪ ಭಕ್ತನು ದೊಡ್ಡಪ್ಪ
ವರಪಾದಕೊಂದಿಸಿ ಭಕ್ತಿಯಿಂ
ಗುರುಕಾಣಿಕೆಯ ಕೊಡುತಲಿತಾನಾ ಹರುಷದಿಂ ಕೂಡಿ॥
ಸರಳ ಮನದಲಿ ಧನ್ಯ ಭಾವದಿ
ಪರಮ ಶಾಸ್ತ್ರಿಗಳವರ ಶ್ರೀಮುಖ
ಹರನ ಯೋಗಾನಂದದಿಂದಲಿ ನೋಡಿ ಸವಿಯುತಲೀ

೭೩

ಇವರ ಅಸದೃಶ ಭಾವ ಕಂಡಿಹ
ಶಿವನ ತೇಜದೊಳಿರುವ ಸ್ವಾಮಿಯು
ಅವಿಕಲಾನಂದದಲಿ ನೋಡಿಯೆ ಶಾಸ್ತ್ರಿಗಳ ಹರಸಿ॥
ವಿವಿಧ ಶಾಸ್ತ್ರವಬಲ್ಲ ಪಂಡಿತ
ರವನಿಯೊಳು ನೊರಕುವರು ಸಹಜದಿ
ಬುವಿಯೊಳಗೆ ಸಮದರ್ಶನದ ಪಂಡಿತರು ಅಪರೂಪಾ

೭೪

ಎಲ್ಲ ಜನಗಳು ಹಿಗ್ಗಿ ನಲಿದರು
ಎಲ್ಲ ಶಿವತತ್ವವನು ತಿಳಿದರು
ಎಲ್ಲಿ ಕೇಳದ ಪರಮಪ್ರವಚನದಮೃತವ ಸವಿದೂ
ಎಲ್ಲ ಗುರು ಜಂಗಮರ ಕಳಿಸುತ
ಎಲ್ಲರಾಶೀರ್ವಾದ ಪಡೆಯುತ
ಎಲ್ಲೆ ಮೀರುವವರೆಗೆ ಕಳಿಸಿಯೇ ಹಿಂತಿರುಗಿ ಬರುತಾ

ಎಂಟನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೮ಕ್ಕಂ ಪದಗಳು ೩೧೪ಕ್ಕಂ ಮಂಗಳಂ

# ಒಂಭತ್ತನೆಯ ಸಂಧಿ

**ಸೂಚನೆ :-**

**ನದಿಚಾಗಿಯಲಿ ಚನ್ನಬಸವರ**
**ಮುದದಿ ಚರಪಟ್ಟಾಭಿಷೇಕವು**
**ಪದುಳದಿಂ ಗುರುಭಕ್ತರೆಲ್ಲರು ಕೂಡಿ ಮಾಡಿದರೂ**

೧

ಸ್ವಾಮಿ ಗುಣ ಲಕ್ಷಣಗಳಿಂದಲಿ
ಕಾಮವನು ಜಯಿಸಿರುವ ಧೀರರು
ನಾಮಕೀರ್ತಿಯ ವಿಷಯದಾಶೆಯದಿಂದ ದೂರುಳಿದೂ
ನೇಮದಲಿ ನಡೆನುಡಿಯು ಶುದ್ಧತೆ
ತಾಮಸವ ಕಳೆವಂಥ ತೇಜದಿ
ಸೋಮಧರ ಕೃಪೆಯಲ್ಲಿ ಲಿಂಗದ ಗುಣಗಳಿಂ ಬೆಳಗೀ

೨

ಬೆಳಸಬಾರದು ಕೆಡುವದೇಹವ
ಬಳಸಿದಿಂದ್ರಿಯ ಸುಖದಿ ಕೆಡಿಸದೆ
ತಿಳಿಮನದಿ ನಿಜದರಿವಿನಿಂದಲಿ ನಿರಂಜನನಾಗೀ
ಥಳಿಯ ಶಿವಜೀವನವ ನಡೆಸುತ
ಅಳೆತೆಗಳವಡದಂಥ ತಪವದು
ಒಳ ಹೊರಗೆ ಹೊಳೆಹೊಳೆಯುತ ತಾ ತಪೋನಿಧಿಯಾಗೀ

೩

ಎತ್ತರದಲಿಹ ಸ್ಥಳಗಳನ್ನು
ಹತ್ತಲೇಬೇಕೆಂದು ಯೆಲ್ಲರು
ಸುತ್ತುವರಿಯುವ ನಿಯಮ ಜಗದೊಳು ಮೊದಲೆಯಿಲ್ಲದಲೇ
ಹೊತ್ತು ತಾ ಸಂಸಾರ ಭಾರವ
ಚಿತ್ತ ಶುದ್ಧಿಯು ಮಾಡಿಕೊಳ್ಳುತ
ಮೊತ್ತದಲಿ ಸಂಸಾರ ತ್ಯಜಿಸದೆ ಪ್ರಕೃತಿಯೊಡಗೂಡೀ

೪

ಸರಳ ಪ್ರಕೃತಿಯು ವಿಕೃತಿಯಾಗಲು
ಪರಮ ದುಃಖವು ತುಂಬುಜೀವನ
ವಿರತಿ ಮೂರ್ತಿಯ ಕೃಪೆಯ ಬಲದಲಿ ತೊಲಗಿ ದುಃಖಗಳೂ
ಪರಮ ದುಃಖದ ಜನಗಳೆಲ್ಲರ
ಪರಮ ಶಾಂತಿಯ ಕರುಣೆಗಾಗಿಯೆ
ಪರಮದವತಾರಗಳು ಯೆತ್ತಿಯೆ ಧರೆಯೊಳಗೆ ಬರುತಾ

೫

ಗುರುತರದ ಸನ್ಯಾಸಿಯಾಗುತ
ವಿರತಿ ಭಾವದ ಯೋಗಬಲದಲಿ
ಧರೆಯೊಳಗೆ ನಿಜ ನಿಲುವಿನಲ್ಲಿ ನಿಂತವರಪರೂಪವೂ
ತಿರೆಯ ಜನಗಳ ತಿಕ್ಕು ಬಿಡಿಸುವ
ಪರಮ ಶ್ರೀಕರ ಸ್ಪರ್ಶದಿಂದ
ವರ ಮಹಾಶಿವಯೋಗದಿಂದಲೆ ಸಾಧ್ಯ ಜಗದೊಳಗೇ

೬

ಹಳ್ಳಿಯೊಳು ಯಿರುವಂಥ ಮಠಗಳು
ಹಳ್ಳಿ ಜನರನುದ್ಧಾರ ಮಾಡಲು
ಒಳ್ಳಿತಾಗಿಹ ದಿವ್ಯಕೇಂದ್ರದ ಶಕ್ತಿಯಾಗಿರು ತಾ
ಗೊಳ್ಳುರಹಿತ ಗೌರವ ಚೇತನ
ವುಳ್ಳ ಮಂತ್ರದ ಮಹದ ಪಿಂಡವು
ಒಳ್ಳೆ ಭಾವದಿ ಬೆಳೆದು ಬೆಳಗುತ ಜನರನುದ್ಧರಿಸೀ

೭

ವಿರತಿ ಪ್ರಗತಿಯೆ ಮಾಡಿಕೊಂಡು
ವರವಿಭೂತಿಯ ಪುರುಷರಾಗಿಯೆ
ದುರಿತ ಕರ್ಮ ಕಳೆವ ಕಣ್ಗಳು ಶಿವಲಿಂಗ ನೋಟದೀ
ಸಿರಿಯಡಿಗಳಿರುವಂಥ ಯೋಗಿಯು
ಕೊರಡು ಕೊನರಿಸಿ ಬರಡು ಹಯನಿಸಿ
ಪರಮಪಾವನ ಚನ್ನಬಸವರು ಪೂರ್ಣ ಯೋಗದೊಳೂ

೮

ಧನವುಯಿದ್ದರೆ ಭೋಗಯಿರುವುದು
ಧನವುಯಿದ್ದರೆ ದಾನವಿರುವುದು
ಧನವುಯಿದ್ದರೆ ಭೋಗದಾನವು ಮಾಡದಿರೆ ನಾಶಾ
ಧನವು ಕಾಯಕದಿಂದ ಬಂದಿರೆ
ಧನವು ಸತ್ಯವು ಶುದ್ಧವಾಗಿರೆ
ಘನದಿದಾಸೋಹವನು ಮಾಡಲು ನಿತ್ಯತೃಪ್ತಿಯದೂ

೯

ನಾನು ನನ್ನದುಯೆಂದು ತಿಳಿಯದೆ
ಊನಗೊಳಿಸದೆ ಭಕ್ತಿ ಶಕ್ತಿಯು
ದಾನಧರ್ಮದಿ ನಡೆದ ಮನುಜಗೆ ಸದ್ಗತಿಯು ದೊರಕೀ
ಜ್ಞಾನದಿಂ ಪರಿಕಿಸಲು ಜಗದಲಿ
ಮಾನವತ್ವದ ಬಾಳು ಸೊಗಸದು
ಹಾನಿಗೊಳಿಸದೆ ಮೂರು ಕರಣಗಳಿಂದ ಪರಿಶುದ್ಧೀ

೧೦

ಮೂರು ಮಾತ್ರೆಗಳಾ ಪ್ರಣವದಾ
ಮೂರವಸ್ಥೆಯು ತಾಳಿ ಜಗದಲಿ
ಮೂರು ಕ್ರಮದೊಳು ವಿಶ್ವತೇಜಸ ಪ್ರಾಜ್ಞನೆಂದೂ
ಮೂರು ಕಾಲಕತೀತವಾದುದು
ಸೇರಿ ಓಂಕಾರನುಷ್ಠಾನದಿ
ಭೂರಿ ಕೃಪೆಯಿಂ ಶುದ್ಧ ಸಿದ್ಧ ಪ್ರಬುದ್ಧನಾಗುತಾ

೧೧

ಜಗದ ವ್ಯವಹಾರಕ್ಕೆ ನಿಲುಕ್ಕ
ದಗಣಿತದಿ ಲೋಕಕ್ಕೆ ಸಿಲುಕದ
ಜಗದಿ ಶೂನ್ಯವೆ ಪರಮದೋಂಕಾರಾತ್ಮವಾಗಿಹುದೂ
ಮಿಗಧರನ ಧರನಾಕೃಪೆಯೊಳಾ
ಬಗೆಯು ಶಿವನದ್ವೈತ ರೂಪದಾ
ಭಗೆಯು ಭಾವದಿ ತಾನೆ ತಾನಾಗೇಕರೂಪದೊಳೂ

೧೨

ಉಪನಿಷತ್ತಿನ ಸಾರ ಹೀಗಿದೆ
ಉಪಮೆಗೆಟುಕದ ಉಮಾಪತಿಯಾ
ವಿಪುಲತಪ ಶಿವಯೋಗದಿಂದಲೆ ಪೂರ್ಣದೊಳು ಕೂಡೀ
ತಪದ ನಿಧಿಯಾಗಿರುವ ಶ್ರೀಗುರು
ಜಪತಪದಿ ಶ್ರೀ ಚನ್ನಬಸವರು
ಅಪರೂಪ ಪರಿವ್ರಾಜಕರು ತಾವಾಗಿ ಮೆರೆಯುತಾ

೧೩

ಮೆರೆಯುವುದು ಮಹಲಿಂಗದೊಳಗಾ
ಮರೆಯಲಿರುವಾ ಗುಪ್ತ ಭಕ್ತಿಯು
ತೆರನಲಿರುವಾ ಶಿವನತೇಜದ ಕಿರಣತಾ ಸ್ಫುರಿಸೀ
ಧರೆಯ ಭೋಗದ ಭಾಗ್ಯ ದೊರಕಿರೆ
ವಿರತಿಯೋಗ ಶಿವಾನುಭಾವದಿ
ಅರಿತು ನಡೆಯುತ ಲೋಕಕಲ್ಯಾಣದಲಿ ಮೈಮರೆದೂ

೧೪

ತನುವ ಸವೆಸುತ ಗಂಧಚಕ್ಕೆಯು
ನನುದಿನದಿ ಸವೆಸುತ್ತ ಪರಿಮಳ
ಘನ ಮನದಿ ಕರುಣಿಸುವರಾ ದಾಸೋಹ ಭಾವದಲೀ
ಧನವ ಸಂಗ್ರಹ ಬುದ್ಧಿಯಿರದಲೆ
ಧನದಿ ಧರ್ಮದ ಕಾರ್ಯ ಮಾಡುತ
ಜನಮನದಿ ಮಹಸ್ವಾಮಿಯಾಗಿಯೇ ಬೆಳಗಿಜಗದೀ

೧೫

ಪದವಿ ವ್ಯಾಮೋಹವದು ಯಿರದಲೆ
ಸದುಭಕ್ತ ಜನಗಳ ಕುಂದುಗಳ
ಹದುಳದಿಂ ಪರಿಹರಿಸಿ ಸುಖಶಾಂತಿಯನು ಕರುಣಿಸು ತಾ
ಮುದದಿ ಬಂದಾ ಜನರ ಹಣವನು
ಒದಗಿಸುತ ಕಲ್ಯಾಣ ಕಾರ್ಯಕೆ
ಸದುಪಯೋಗ ಸಮಾಜದೇಳ್ಗೆಯಾ ಹಿತಚಿಂತಕರೂ

೧೬

ಇರಬಹುದು ತಿಳಿವಿರದೆ ಜಗದೊಳು
ಧರೆಯೊಳನ್ನವುಯಿರದೆ ಬಾಳದು
ಇರುವಿಕೆಯು ಬಹು ಕಷ್ಟವೆಂದಾ ತಿಳಿದು ಬಹುಜನರೂ
ತಿರೆಯೊಳಗೆ ಸತ್ತಿರುವ ಬಾಳದು
ಹರನ ಕರುಣೆಯ ಗುರುವ ಕೃಪೆಯಲಿ
ಪರಮ ಪಾವನ ನಿತ್ಯದಾಸೋಹದಲಿ ತಾನಿರಲೂ

೧೭

ಬಂದ ನರಜನ್ಮವನು ಕೆಡಿಸದೆ
ಇದು ದುಡಿಯುತ ಸತ್ಯಶುದ್ಧದಿ
ಬಂದ ದುಡಿತದ ಫಲದಿ ಪರರನು ತೃಪ್ತಿಪಡಿಸುತಲೀ
ಬಂದ ವರಶೇಷ ಪ್ರಸಾದವ
ನಂದು ಪಡೆವುದೆ ಪರಮಶ್ರೇಷ್ಠವು
ಚಂದದಾಸೋಹದೊಳು ದಿವ್ಯದ ಜೀವನವ ನಡೆಸೀ

೧೮

ನಡೆದು ನಾಡಿನ ಜನರ ತಿದ್ದುತ
ಬಡಮನಸು ಶ್ರೀಮಂತಗೊಳಿಸುತ
ಮೃಡರೂಪಿ ಶ್ರೀ ಚನ್ನಬಸವರುಚರಿಸಿ ಜಗದೊಳಗೇ
ಬಿಡಿಸಿ ದುರ್ಗುಣ ಚಟಗಳೆಲ್ಲವ
ನಡೆಸಿ ಸನ್ಮಾರ್ಗದೊಳು ಜನಗಳ
ಪೊಡೆಯ ತಾವಾಗಿರುತ ಶಿವಸುಖ ಸಾಮ್ರಾಜ್ಯದೊಳಗೇ

೧೯

ಅರಮನೆಯೊಳನುಚರರು ಆಗದೆ
ಹರನ ಭಕ್ತರ ತೊತ್ತು ಆಗುವ
ಇರವು ಕರುಣಿಸು ಯೆಂದಾ ನಿರಾಭಾರಿ ಜಂಗಮರೂ
ಅರಸುತಲಿ ಪಟ್ಟವನು ಬಯಸದೆ
ತಿರೆಯ ಭೋಗ ತ್ಯಾಗ ಮಾಡಿದ
ಧರೆಯೊಳಗೆ ಧರ್ಮವನು ಬೆಳಗಿಸಿದಾ ನಿರಂಜನರೂ

೨೦

ಗುರುವರೇಣ್ಯಗೆ ತನುವು ಕೊಡುವುದು
ವರಲಿಂಗಕ್ಕೆ ಮನವ ಕೊಡುವುದು
ಚರವರೇಣ್ಯಗೆ ಧನ ಕೊಡಲದು ತ್ರಿವಿಧ ದಾಸೋಹಾ
ಗುರುತರದ ಕಾಯಕವ ಮಾಡುತ
ಯಿರುತ ಸತ್ಯದ ಶುದ್ಧ ಜೀವನ
ಕೊರತೆಯಿಲ್ಲದೆ ರೂಪುರುಚಿ ತೃಪ್ತಿಯೊಳು ಶುದ್ಧತೆಯಿಂ

೨೧

ಕಾರಣಾಂತರದಿಂದ ಶ್ರೀಗಳು
ಕಾರಣಿಕ ಮಹಕಾರ್ಯವೆಸಗುತ
ಊರುಗಳ ಜನಕೆಲ್ಲ ದರ್ಶನ ಕೊಟ್ಟು ಮುನ್ನಡೆದೂ
ಸಾರಸಂತೆಯು ಕೂಡಲೂರಿಗೆ
ಊರೊಳಗೆ ಭಕ್ತೋರ್ವ ಮನೆಯುಲಿ
ಭೂರಿ ಶಿವಪೂಜೆಯನು ಮಾಡಿದ ಚೆನ್ನಬಸವಾರ್ಯಾ

೨೨

ಹಬ್ಬದೂಟಕೆ ಅಕ್ಕಿ ಅನ್ನವು
ಉಬ್ಬಿನಲಿ ಮಾಡುಂಡು ತೇಗುತ
ಅಬ್ಬರದಿ ಹಿಗ್ಗುತ್ತ ತಾವೇ ಧನಿಕರೆಂದೆನುತಾ
ತಬ್ಬಲಿಯ ಜೀವನ ನಡೆಸುತ
ಮಬ್ಬು ಜೀವನದಲ್ಲಿ ದೀನರು
ತಬ್ಬುತಲಿ ಬಡತನದ ಭೂತವದಂಧಕಾರದೊಳೂ

೨೩

ಇಂಥ ದುರ್ದಿನ ಸಮಯದೊಳಗಾ
ಸಂತೆ ಕೂಡ್ಲೂರೊಳಗೆಯಿರುವಾ
ಅಂತು ಒಪ್ಪಿದ ಸ್ವಾಮಿ ಪೂಜೆಗೆ ಸಂಗನಗೌಡಾ
ಅಂತು ಗುರುಗಳ ಪೂಜೆ ಮುಗಿಯಿತು
ಅಂತರದಿ ಅಡುಗೆಯನು ನೀಡುತ
ಅಂತು ಒಳ ಹೊರಗೊಂದು ಭೇದವ ಮಾಡಿ ಸೇವಕಗೇ

೨೪

ಹಳಸಿದನ್ನವು ಸಾರು ತಣ್ಣಗೆ
ಅಳುಕು ಮನದಲಿ ನೋಡೆ ನೋಡುತ
ಬಳಿಕವುಣ್ಣದೆ ಕೈತೊಳೆದು ಮೇಲೆದ್ದ ಸೇವಕನೂ
ಒಳಗಿನಿಂದಲಿ ಬಂದ ಗುರುಗಳು
ತಿಳಿದು ಸೇವಕಗಾದ ಪರಿಯನು
ಕಳವಳದಿ ತಾ ಶಿವಶಿವಾಯೆಂದಾಗ ಗುರು ಮರುಗೀ

೨೫

ಗುರುವು ತಾ ಹೊರಗಡೆಗೆ ಬರುತಲಿ
ಹರವಿಲಾಸದ ನಗೆಯ ತೆರನಲಿ
ಹೊರಗೆ ಕಾಣುವ ಜೊನ್ನ ತಂಪು ವಿಭೂತಿ ಯೋಗದಲೀ
ಹೊರಗೆ ಕಟ್ಟಿರುವಂಥ ಕುದುರೆಗೆ
ಭರದಿ ಥಡಿಯನು ಹಾಕುಯೆನುತಲಿ
ಗುರುವು ಸೇವಕಗಾಜ್ಞೆ ಮಾಡಿಯೆ ಪಯಣ ಸಿದ್ಧದಲೀ

೨೬

ಗುರುವಿನಾಣತಿಯಂತೆ ಸೇವಕ
ತಿರುಗಿ ಮಾತನು ಆಡದಲೆ ತಾ
ಕೊರಳಲಿಹ ಕಡಿವಾಣ ಹಾಕಿಯೆ ಥಡಿ ಬಿಗಿದಶ್ವಕೇ
ಭರದಿ ಹೋಗುವುದೆನ್ನುತಲಿ ತಾ
ಸರಳ ಭಾವದ ಗುರುವ ನೋಡುತ
ಶಿರದಿ ವಂದಿಸಿ ಗೌಡನಾಗಲೆ ನಾಳೆ ಹೋಗ್ರೆಂದೂ

೨೭

ಶಿವನ ಯಿಚ್ಛೆಯು ಈಗ ಯಿರಲದು
ಶಿವನ ಮೈ ಬೆಳಗಿನಲಿ ಪಯಣವು
ಅವಿಕಲಾನಂದವದುಯೆನ್ನುತ ಪಯಣ ಬೆಳಸಿದರೂ
ವಿವಿಧ ಪಾಪದ ನೆನಪು ಬಂದಿತು
ಬುವಿಗೆ ಭಾರವು ಆದ ತೆರನಲಿ
ಜವದಿ ಧರೆಯಲಿ ಕುಸಿದು ಸಂಕಟದಲಾಗಾ

೨೮

ಊರು ದಾಟಿದ ಗುರುಗಳಾಗಲೆ
ಕೋರಿ ನಡೆಯಲು ಬೇಕುಯೆನ್ನುತ
ದಾರಿಯಲಿ ಕುದುರೆಯನು ನಿಲ್ಲಿಸಿ ಯಿಳಿದ ಗುರುಗಳನೂ
ಮೋರೆನೋಡುತ ಸೇವಕನು ತಾ
ಕಾರಣವದೇನೆಂದು ಚಿಂತಿಸಿ
ಜಾರಿರುವ ಥಡಿಯನ್ನು ಬಿಗಿಯುತ ಗುರುಗಳನು ನೋಡೀ

೨೯

ಧರೆಯೊಳಗೆ ನಡೆಯುವದೆ ಚಲುವದು
ಗುರುವಿನಡಿಗಳ ನಡೆಯು ಸೊಗಸದು
ಚರವರೇಣ್ಯರು ನಡೆದು ಹೋಗುವುದೆಂದು ತಿಳಿಸಿದರೂ
ಗುರುವರನ ಮನದಂತೆ ನಡೆಯುವ
ವರಶಿಷ್ಯ ಸೇವಕನುವೊಪ್ಪುತ
ಕರದಿ ಕುದುರೆ ಲಗಾಮು ಹಿಡಿಯುತ ಮುಂದೆ ಸಾಗಿದನೂ

೩೦

ಒಂದು ಮೈಲನು ನಡೆದಿರಲು ತಾ
ಚಂದವಿಹ ತಿಂಗಳನ ಬೆಳಕಲಿ
ಮುಂದಹಾಸದಿ ಮುದುಕನೋರ್ವನು ಯಿದಿರುಬರುತಾಗಾ
ಬಂದ ಗುರುವರ ಚನ್ನಬಸವರ
ನಂದು ನೋಡುತ ದಿವ್ಯ ನೋಟದಿ
ಚಂದದಾ ಶಿರ ಮುಟ್ಟುತಲಿ ಮೈದಡವಿ ಹರುಷದಲೀ

೩೧

ತನ್ನ ಹಸುಬೆಯ ವೊಳಗಿನಿಂದಲಿ
ಚನ್ನ ಚುಕ್ಕೆಯ ಬಾಳೆ ಹಣ್ಗಳ
ಸನ್ನೆ ಮಾಡುತ ಸೇವಕಗೆ ಕೊಡು ಎಂದು ಹರಸುತಲೀ
ಅನ್ನೆವರಗ್ಪಸಿದಾ ಸೇವಕ
ತನ್ನ ಹಸಿವನು ನೀಗಿಸಲು ತಾ
ಬೆನ್ನ ತಿರುಗಿಸಿ ನಿಂತು ಬಾಳೆಯ ಹಣ್ಣು ತಿಂದಾಗಾ

೩೨

ಒಂದಃ ಬಾಳೆಯ ಹಣ್ಣು ತಿನ್ನಲು
ಅಂದು ಅಡಗಿತು ಹಸಿವು ತೃಪ್ತಿಯ
ಲಂದಿನಾ ಹೊಸರುಚಿಯ ಮಧುರದಿ ಧನ್ಯನಾಗುತಲೀ
ತಂದೆ ಕ್ಷಮಿಸೈ ಹಸಿವಿನಿಂದಲಿ
ಯಿಂದು ಮನದಲಿ ದೂರಿ ನಿಮ್ಮನು
ಯಿಂದು ಪಾಪವ ಕಟ್ಟಿಕೊಂಡೆನು ಕ್ಷಮಿಸಿರೆನ್ನುತಾ

೩೩

ನಿನ್ನ ಕ್ಷಮಿಸಲು ನಾನು ಯಾರು
ಯೆನ್ನುತಲಿ ಹಣ್ಕೊಟ್ಟು ಮುದುಕನ
ಸನ್ನಿಧಾನಕೆ ವೊಂದಿಸೆನ್ನಲು ಹೇಳಿದಾಗುರುವೂ
ಅನ್ನ ಹಳಸಿದರೇನು ತಂದೇ
ಯಿನ್ನಿರದೆ ಹಸಿವಿಂದು ತೊಲಗುತ
ನನ್ನಿಯಲಿ ಕಾಪಾಡಿದಂಥಹ ಪರಮಗುರುಯೆಂದೂ

೩೪

ಹುಮ್ಮಸದಿ ವೊಂದಿಸಲುಯೆಳಸಲು
ತಮ್ಮ ಸನಿಹದಲಿರುವ ಮುದುಕನ
ಒಮ್ಮಲೇ ಅಲ್ಲಿರದೆ ಮಾಯವದಾಗಿ ಹೋಗಿಹನೂ
ಹಮ್ಮದವ ಪಡುತಾಗ ಗುರುಗಳು
ಹಮ್ಮಿನಿಂದಲಿ ತಾವು ತಿಳಿಯದೆ
ತಮ್ಮ ಬಳಿ. ಬಂದಿರುವ ಮುದುಕನು ಶಿವನೆತಾನೆಂದೂ

೩೫

ಶಿವಶಿವಾಯಿದುಯೆಂಥ ಲೀಲೆಯು
ಬುವಿಯೊಳಗೆ ಸಾಕಾರ ರೂಪದಿ
ಶಿವನು ಮುದುಕನ ವೇಷದಲಿ ಬಂದಿರವೃತಿಳಿಯದಲೇ
ಸವಿನಯದಿ ಸೇವಕನ ನೋಡುತ
ಅವಿಕಲಾನಂದದಲಿ ನಲಿಯುತ
ಸುವಿಮಲದಿ ಜನ್ಮವದು ಸಾರ್ಥಕವೆಂದರಾ ಗುರುವೂ

೩೬

ಗುರುಗಳನು ಶಿರಮುಟ್ಟಿ ಹರಸಿದ
ಪರಮ ಪಾವನ ಪಾರ್ವತೀಶನ
ಕರುಣೆ ಕೃಪೆಯನು ಕಂಡು ಹೊಗಳುತ ಸೇವಕನು ನಲಿದೂ
ದುರಿತ ಕರ್ಮವನೆಸಗಿದಂಥಹ
ಭರಿತ ದುಃಖದಿ ಗೌಡನಾಗಲೆ
ಧರಣಿಯಲಿ ಹೊರಳಾಡಿ ಉದರದ ಶೂಲಿಯಾಗಿರಲೂ

೩೭

ಭರದಿ ಭೇದಿಯು ವಾಂತಿಯಾಗುತ
ನರಳಿ ದುರ್ವಾತವದು ಹಬ್ಬಿರೆ
ನೆರೆಹೊರೆಯ ಜನರೆಲ್ಲ ಮೂಗನು ಮುಚ್ಚಿ ನಡೆದಾಡೀ
ಇರುಳು ಮಾಡಿರುವಂಥ ತಪ್ಪನು
ಅರಿತು ಗುರುವಿನ ಧ್ಯಾನ ಮಾಡುತ
ಕರಮುಗಿದು ಕಾಪಾಡು ಯೆನ್ನುತ ಗುರುವಮೊರೆಯಿಡಲೂ

೩೮

ಪಾಪದಾ ಪಾತ್ರೆಯದು ತುಂಬಿರೆ
ತಾಪವದು ಕಳೆಯುವುದು ಯೆಂತದು
ದೀಪ ನಂದುವ ಮುನ್ನ ಹೆಚ್ಚಿನ ಬೆಳಕು ಕಂಡಂತೇ
ಪಾಪ ಭೂಯಿಷ್ಟದಲಿ ಕೊಳೆಯುವ
ಭೂಪನೆನಿಸುತ ದುರಿತಕರ್ಮಕೆ
ಪಾಪ ಗೌಡನ ಪ್ರಾಣಪಕ್ಷಿಯು ಹಾರಿಹೋಗುತಾ

೩೯

ಗುರುವರನ ನೋವದುವೆ ಶಿವನದು
ಕರಣತ್ರಯದಲಿ ಶುದ್ಧರಾಗಿ
ಗುರುವಿನಾ ಚರಣದಲಿ ಭಕ್ತಿಯದುಂಬಿ ತಾನಾಗೀ
ಇರುವುದೇ ಲೇಸೆಂದು ತಿಳಿಯುತ
ಸರಳ ಜೀವನ ಸಾಮರಸ್ಯದಿ
ಹರನಯೋಗದ ಪರಿಯ ತಿಳಿಯುತ ಬಾಳಬೆಳಕಿನಲೀ

೪೦

ಇತ್ತ ವಳಬಳ್ಳಾರಿ ಸೇರಲು
ಮೊತ್ತದಲಿ ಮೂಡಿದನು ರವಿಯಾ
ಉತ್ತಮದ ಹೊಂಬೆಳಕ ಪಸರಿಸಿ ಗುರುಮಠಕೆ ಬರಲೂ
ಸತ್ತ ಗೌಡನ ವಾರ್ತೆ ಕೇಳಿಯೆ
ಕುತ್ತು ಬಗೆಯನು ತಿಳಿದ ಗುರುಗಳು
ಚಿತ್ತ ಶಿವನದಪೇಕ್ಷೆಯಾಗಲು ಸಹಜವೆನ್ನುತಲೀ

೪೧

ದುಡಿದು ದೊಡ್ಡವರಾಗಬೇಕಾ
ದುಡಿತ ಸತ್ಯದ ಶುದ್ಧಕಾಯಕ
ಹಿಡಿದು ಸರಳದ ಜೀವನವತಾ ನಡೆಸುತಿರಬೇಕೂ
ನುಡಿಯು ಗಣ್ಯರು ತಾವು ಆಗದೆ
ನಡೆಯು ಗುರುಜಂಗಮರು ಮೆಚ್ಚುವ
ನಡೆದು ನುಡಿದಾ ಚನ್ನಬಸವರು ಕಾರ್ಯರೂಪದೊಳೂ

೪೨

ಇವರ ತಪದಾ ಪ್ರಭೆಗೆ ಜನಗಳು
ಇವರ ಘನಮನ ಶಕ್ತಿ ಸೊಬಗಿಗೆ
ತ್ರಿವಿಧ ದಾಸೋಹದಲಿ ಬೆಳಗುವ ಗುರುವಮೆಚ್ಚುತಲೀ
ಸುವಿಮಲದ ಶ್ರೀ ಚನ್ನಬಸವರ
ಚವಿಯು ಶಿವಯೋಗದಲಿ ಹೊಳೆಯುವ
ಬುವಿಯೊಳಗೆ ಚರಪಟ್ಟ ಕಟ್ಟುವ ವಿಷಯ ಮಾತಾಡೀ

೪೩

ಮುದದಿ ಶಾಖಾ ಮಠದ ಭಕ್ತರು
ನದಿಯು ಚಾಗಿಯ ಭಕ್ತ ಜನಗಳು
ಒದಿಯಲಿಹ ಕಾತರಕಿ ಹಾಲ್ವಿಯ ಭಕ್ತಗಣ ಸೇರೀ
ಅಧಿನಾಯಕಾ ಚನ್ನಬಸವರಿ
ಗಧಿಕಾರವನು ಕೊಡುವಾದಿನದ
ವಧಿಯು ಬಂದಿರುವಂಥ ಸುದಿನವ ನಿಶ್ಚಯಿಸಿ ತಾವೂ

೪೪

ಧನಧಾನ್ಯ ಸಂಗ್ರಹ ಮಾಡುತಲಿ
ಅನವರತ ಶ್ರಮಿಸುತಲಿ ಜನರು
ಅನುಕೂಲವಾದಾ ಚಾಗಿ ಮಠವನು ಸಜ್ಜುಗೊಳಿಸುತಲೀ
ಘನಮನದಿ ಯಿದಕೊಪ್ಪಿದರು ತಾ
ಘನ ತಪೋಧನ ಚನ್ನಬಸವರು
ಜನರು ಪ್ರೇಮ್ಮನದಿಂದ ಮಾಡುವ ಕಾರ್ಯಕೊಪ್ಪುತಲೀ

೪೫

ಇದ್ದ ಮಣ್ಮಠ ಚಲುವು ಮಾಡುತ
ಸಿದ್ಧಗೊಳಿಸುತ ಸುಣ್ಣ ಹಚ್ಚಿಸಿ
ನಿದ್ದೆ ಮಾಡದೆ ಅಹೋ ರಾತ್ರಿಯು ಭಕ್ತಜನ ದುಡಿದೂ
ಬದ್ಧಕಂಕಣರಾಗಿ ನಿಲ್ಲುತ
ಶುದ್ಧದಂತಃಕರಣರಾಗಿಯೆ
ಬುದ್ಧಿವಂತಿಕೆಯಿಂದ ಭಕ್ತರು ಕೆಲಸ ಮಾಡುತಲೀ

೪೬

ಶಿವನು ಗುರುಗಳ ತಲೆಯ ಮುಟ್ಟಿಯೆ
ಅವನಿಯೊಳು ಕರುಣಿಸುತ ಹರಸಿಯೆ
ವಿವಿಧ ಜನಗಳ ಲೋಕಕಲ್ಯಾಣವನು ಮಾಡೆಂದೂ
ತವನಿಧಿಯು ತಾನಾಗಿ ಜಗದೊಳು
ತವಸಿ ಶಿವಯೋಗದೊಳು ಸುಖಿಸುತ
ತವಿಸುತಲಿತಾ ಜನರ ದುಃಖವದನುದಿನದಿ ಕೂಡೀ

೪೭

ಹಿಂದೆ ನಡೆದಾ ಘಟನೆಯನು ತಾ
ವಿಂದು ಸ್ಮರಿಸುತ ಶಿವನ ನೆನೆಯುತ
ಬಂದ ಭಾಗ್ಯೋದಯಕೆ ಹಿಗ್ಗದೆ ಸಮತೆ ಭಾವದೊಳೂ
ಎಂದಿನಂತೆಯೆ ಶಿವನ ಜೀವನ
ಕುಂದುಬಾರದೆ ನೋಡಿಕೊಳ್ಳುತ
ಚಂದ ಶ್ರೀಗುರುಬಸವರು ಧರೆಯೊಳಗೆ ಬೆಳಗೀ

೪೮

ಒಂದುದಿನ ಲಿಂಗಣ್ಣ ಜೊತೆಯಲಿ
ಬಂದು ಹಂಪನ ಗೌಡಗುರುಗಳಿ
ಗಂದು ವಿವರಿಸಿ ಗಂಡುಮಗುವಾಗಿರುವ ವಿಷಯವನೂ
ಹಿಂದಿನಾ ವಿಕ್ರಮದ ವರ್ಷದಿ
ಬಂದರಾ ನದಿ ಚಾಗಿಯೂರಿಗೆ
ಬಂದ ವೈಮನಸನ್ನು ಕಳೆದು ಲಿಂಗಣ್ಣ ಗುರುವಿಗೇ

೪೯

ಪರಮ ಗುರುಗಳ ಆಜ್ಞೆಯಂತೆಯೆ
ಮರೆತಿರುವ ಮನೆಗುರುಗಳನು ತಾ
ಮರಳಿ ಕರೆಯುತ ಹಬ್ಬ ಹುಣ್ಣಿಮೆಗಾಗ ಲಿಂಗಣ್ಣಾ
ಗುರುವು ವಳಬಳ್ಳಾರಿ ದೇಶಿಕ
ರರುಹಿದರು ನಿಜಜ್ಞಾನ ಬೋಧೆ
ಯರುಹು ಅಜ್ಞೊತ್ತುತಲಿ ಜಂಗಮದ್ವೇಷನಳಿಸುತಾ

೫೦

ಹೊಲದ ದಾರಿಯ ಜಗಳದೊಳಗಾ
ಹೊಲದೊಡೆಯ ಲಿಂಗಣ್ಣ ಭಕ್ತನು
ಕೆಲವು ವರುಷಗಳಿಂದ ಕರೆಯದೆ ಗುರುಗಳನು ಬಿಟ್ಟು
ಬಲಿತ ಗರ್ವವು ಕರಗಿಹೋಯಿತು
ನಲಿವಿನಲಿ ಗುರುಭಕ್ತಿ ಮೂಡಿತು
ಗೆಲುವೆನಿಸಿ ಲಿಂಗಣ್ಣ ಭಕ್ತಗೆ ದೇಶಿಕರ ಕೃಪೆಯಿಂ

೫೧

ಶಿವರದಲಿ ವಿಷಯವನು ನೆನಪಿಸಿ
ಜವದಿ ಹಂಪನ ಗೌಡನಾಗಲೆ
ಸವಿನಯದಿ ಶ್ರೀ ಚನ್ನಬಸವರ ದಿವ್ಯ ಸನ್ನಿಧಿಗೇ
ಸವಿಯ ಮಾತುಗಳಿಂದ ಶ್ರೀಗಳು
ಭುವಿಗೆ ಬಂದಿರುವಂಥ ಮಗುವಿಗೆ
ನವನಾಮ ತಿರುನೀಲ ಕಂಡನುಯೆಂದು ಹೆಸರಿಡಲೂ

೫೨

ತಿಳಿಸುತಲಿ ಭಕ್ತರಿಗೆ ಗುರುಗಳು
ಬಳಿಯುಲಿಪ ಲಿಂಗಣ್ಣ ಭಕ್ತಗೆ
ಒಳಿತು ಮಾಡಿದ ಶಿವನ ನೆನಸಿ ಲಿಂಗಣ್ಣನ ನೋಡೀ
ಬಳಿವಿಡಿದ ಹಂಪಣ್ಣ ಗೌಡಗೆ
ತಳಿಗೆಯೊಳಗಿರುವಂಥ ಹಣ್ಣುಗಳ
ನಳಿನ ಕರದಿಂ ಮುಟ್ಟಿ ಹರಸುತ ಈರ್ವರಿಗೆ ಕೊಡುತಾ

೫೩

ಬಿಟ್ಟು ದುರ್ಗುಣಕಾಗಿ ಹರುಷಿಸಿ
ಕೊಟ್ಟುಕಾಣಿಕೆ ಮುರಳಿ ಕೊಡುತಲಿ
ದಿಟ್ಟ ಮನದಲಿ ಗಣಾರಾಧನೆ ಮಾಡಿ ಮನೆಯೊಳಗೇ
ಘಟ್ಟಿ ಮನದಲಿ ಸಾಮರಸ್ಯದಿ
ಒಟ್ಟಿನಲಿ ಜಂಗಮರತೃಪ್ತಿಯು
ಮುಟ್ಟು ಶಿವಭಕ್ತಿಯುಲಿ ಮಾಡಿರಿಯೆಂದು ಸೂಚಿಸುತಾ

೫೪

ಗುರು ತೋಂಟದಾರ್ಯರ ಸಮಾಧಿಗೆ
ಭರಿತ ಭಕ್ತಿಯು ಭಾವದಿಂವಲಿ
ಕೊರತೆಯಿಲ್ಲದೆ ರುದ್ರದಭಿಷೇಕವನು ಮಾಡೆಂದೂ
ಗುರುವರನು ಲಿಂಗಣ್ಣಗಾಗಲೆ
ಅರುಹಿದರು ಪೂಜೆಯ ವಿಧಾನವ
ಪರಮ ಮನೆ ಗುರುಗಳನು ಕರಸಿಯೆ ಯೆಲ್ಲಮಾಡೆಂದೂ

೫೫

ಮುಂದಿರುವ ಪಟ್ಟಾಧಿಕಾರದ
ಚಂದವಾದ ಮಹೋತ್ಸವಕೆ ತಾ
ವಂದು ಯೆಲ್ಲರು ಐಕ್ಯಮತ್ಯದಿ ಕೂಡಿ ಮಾಡ್ರೆಂದೂ
ಮುಂದಿರುವ ಹಂಪಣ್ಣಗೌಡಗೆ
ಅಂದು ತಿಳಿಸುತ ಚನ್ನಬಸವರು
ಕುಂದು ಬಾರದೆ ಘನದ ಕಾರ್ಯವ ಮಾಡ್ರೆಂದು ಕಳಸೀ

೫೭

ಮನೆ ಗುರುಗಳನು ಕರೆಸುತಲಿ ತಾ
ಮನಮುಟ್ಟಿ ಮಿತ್ರರನು ಕೂಡಿಯೆ
ಮನವಿ ಮಾಡಿದ ಹಿರಿಯರಿಗೆ ಲಿಂಗಣ್ಣ ಪ್ರೇಮದಲೀ
ಧನವ ಧರ್ಮದಿ ವೆಚ್ಚ ಮಾಡುತ
ವಿನತಿ ಭಾವದಿ ಗಣಾರಾಧನೆ
ಅನಘಶ್ರೀ ಗುರು ಚನ್ನಬಸವರ ಕೃಪೆಯೊಳಗೆ ಮಾಡೀ

೫೭

ಗುರುಭಕ್ತಿ ಸಾರ್ಥಕವದಾಯಿತು
ಹರನು ಮುನಿದರೆ ಗುರುವು ಕಾಯ್ದನು
ಧರೆಯೊಳಗೆ ಗುರುವಧಿಕರೆನ್ನುವ ಮಾತು ಋತು ಸತ್ಯಾ
ಭರದಿ ಶ್ರೀಗಳ ಸೇವೆ ಮಾಡಲು
ನಿರತನಾಗುತ ಮಠಕೆ ಹೋಗುತ
ಪರಮಗುರು ಪಟ್ಟಾಧಿಕಾರದ ಕೆಲಸದೊಳು ಕೂಡೀ

೫೮

ಕಾಮ ಕಾಂಚನ ಕರ್ಮಗಳನಾ
ಶ್ರೀ ಮಹಾಗುರು ಚನ್ನಬಸವರು
ಧೀಮನದಿ ತಾವ್ ದೂರವಿಡುತಲಿ ವಿರತಭಾವದೀ
ಕೋಮಲದ ಮನವನ್ನು ಕೆಡಿಸುವ
ಪಾಮರತ್ವವವುಂಟು ಮಾಡುವ
ತಾಮಸರು ತಾವಾಗದಲೆ ನಿರಂಜನ ರೂಪದೊಳೂ

೫೯

ಇಂಥ ಶಿವಯೋಗಿಗಳು ಸಿಗುವುದ
ನಂತ ಪುಣ್ಯದ ಫಲವು ಬೇಕಾ
ಕಂತು ಹರನವತಾರಿ ಶ್ರೀಗುರು ಚನ್ನಬಸವಾರ್ಯಾ
ಇಂತು ದೊರಕಿರೆ ಭಕ್ತ ಜನರಿಗೆ
ಸಂತಸವದಾಗುತ್ತ ಹಿಗ್ಗುತ
ಸಂತೆಯನು ಸಾಂಗದಲಿ ಮಾಡಿಯೆ ಮುಗಿಸಿದಾ ಜನರೂ

೬೦

ವಿವಿಧ ತಳಿರಿನ ತೋರಣವು ತಾ
ವಿವಿಧ ಬಣ್ಣದ ಗುಬ್ಬಿ ಕಾಗದ
ಸಪೆಯದಾ ಸದ್ಭಕ್ತಿಯಿಂದಲಿ ಕಟ್ಟಿನಲಿದಾಡೀ
ಗವಸಣಿಗೆ ಹಾಕಿರುವ ದಿಂಡುಗ
ಳವಸರದಿ ಶೃಂಗರಿಸಿ ತಂದರು
ಭುವನದೊಳು ಕೈಲಾಸಸದೃಶದಿ ವಿರತಮಠ ಬೆಳಗೀ

೬೧

ಪರಮ ಪಾರ್ಥಿವ ನಾಮವರುಷದ
ಪರಮ ಮಾಘಮಾಸದ ಪಾಡ್ಯದಿ
ಪರಮಹಾ ಪಂಡಿತರು ಹರಗುರು ಮೂರ್ತಿಗಳು ಕೂಡೀ
ಗುರುಭಜನೆ ಗಾಯನವ ಮಾಡುವ
ವರ ಗಮಕಿ ಕೀರ್ತನೆಯ ಮಾಡುವ
ಕರೆಯೋಲೆ ಮನ್ನಿಸಿದ ಮಾನ್ಯರು ನೆರೆದು ಮಠದೊಳಗೇ

೬೨

ಲೋಕವಾಡಿಕೆಯಂತೆ ಯನುದಿನ
ಲೋಕಬಾಂಧವ ನುದಯದೊಳಗಾ
ಏಕಭಾವ ಶಿವಾನುಭಾವದ ಕಾರ್ಯಗಳು ನಡೆದೂ
ಆಕರದಿ ಪಂಡಿತರ ಗೋಷ್ಠಿಯು
ನಾಕ ಸುಖ ಯಿಳೆಯೊಳಗೆ ಯಿಳಿಸಿದ
ರೇಕ ಮನದಲಿ ಶಿವನ ಅನುಭವ ತಾವು ಹೇಳುತಲೀ

೬೩

ಮುಚ್ಚುಮರೆ ಸಂಗಪ್ಪಶಾಸ್ತ್ರಿಯು
ನೆಚ್ಚಿನಾ ದೊಡ್ಡಯ್ಯ ಶಾಸ್ತ್ರಿಯು
ಕೆಚ್ಚು ಮನದಾ ಶಾಸ್ತ್ರಿ ಮಲ್ಲನ ಗೌಡರಿಂ ಕೂಡೀ
ಹೆಚ್ಚಳಿಸಿ ತಾ ವಿಭುದ ಗೋಷ್ಠಿಯು
ಅಚ್ಚ ಕನ್ನಡ ಭಾಷಣವು ತಾ
ಮೆಚ್ಚಿದರು ಗುರುಹಿರಿಯರೆಲ್ಲರು ನೆರೆದ ಜನಸಹಿತಾ

೭೪

ನಮ್ಮ ದೇಶಿಕ ಗುರುವರೇಣ್ಯರು
ಮಮ್ಮಲದ ಮಮತಾಭಿಮಾನದಿ
ಒಮ್ಮನದ ಆದರಣೆಯಿಂ ಸತ್ಕರಿಸಿದೆಲ್ಲರನೂ
ದಿಮ್ಮಿದವರೆನಿಸಿದರು ಗುರುಗಳು
ದಿಮ್ಮು ಬಿಟ್ಟಿತು ಹಲವು ಜನರಿಗೆ
ಹಮ್ಮಿನಿಂದಿರುವಂಥ ಭಕ್ತರು ಕಿಂಕರರುಯೆನಿಸೀ

೭೫

ತ್ರಿವಿಧ ದಾಸೋಹವನು ನಡೆಸುವ
ಅವಿಚಲದ ಘನಮನವ ಪಡೆದಿಹ
ಅವಿಕಲಾನಂದವನು ಕರುಣಿಸಿದಂಥ ದೇಶಿಕರೂ
ಅವಧರಿಸಿದೆಲ್ಲರನು ಕ್ಷೇಮ
ದವಧಾನದಿಂ ನೋಡಿಯೆಲ್ಲರ
ಅವಗಾಹದಿಂ ಪ್ರತಿಕಾರ್ಯದೆಚ್ಚರದಿಂದ ಮಾಡೀ

೭೬

ನೋಡಿ ಕಲಿಯಲಿಬೇಕು ಶ್ರೀಗಳ
ಕೂಡಿದನು ಸಂಧಾನದಲಿ ತಾ
ಮಾಡಿ ಘನಸೇವೆಯನು ಭೃತ್ಯಾಚಾರ ಭಾವದಲೀ
ಬೇಡುವುದು ಭಕ್ತಿಯನು ಶಿವನಲಿ
ಬೇಡಿ ಕಾಮ್ಯದಿ ಭವಿಯು ಆಗದೆ
ವಾಡಿಕೆಯನನುಸರಿಸಿ ಷಟ್‌ಸ್ಥಲ ಮಾರ್ಗಿಯಾಗೀ

೭೭

ಪರಮಮಂಗಲ ವಾದ್ಯದಿಂದಲಿ
ಪರಮ ಮುತ್ತೈದೆಯರು ಕಲಶವಾ
ಪರಮ ಗುರುಶ್ರೀ ಚನ್ನಮಲ್ಲಸ್ವಾಮಿಯಿದಿರ್ಗೊಂಡೂ
ಪರಿಸರದ ಜನರೆಲ್ಲ ಸೇರಿಯೆ
ಪರಿವಿಡಿದು ಸ್ವಾಗತಿಸಿ ಗುರುಗಳ
ಧರೆಯೊಳಗೆ ಸಂಭ್ರಮವೆ ಸಂಭ್ರಮ ಗುರುವಿನಾಗಮನಾ

೬೮

ನಂದಿಕೋಲಲಿ ಕುಣಿವ ಜನಗಳು
ವಂದಿಗುರು ಕೊಂಡಾಡಿ ಗುರುಗಳ
ಮುಂದೆ ಕೊಂಬಿನ ಕಹಳೆಯೂದುತ ಉಬ್ಬಿ ಹರುಷದಲೀ
ಮಂದಗಮನದಿ ನಡೆವ ಗುರುಗಳ
ಚಂದ ಶ್ರೀಪಾದಗಳ ಸ್ಪರ್ಶದಿ
ಅಂದು ಜಾಗಿಯು ಪರಮ ಪಾವನ ಕ್ಷೇತ್ರವಾಗುತಾ

೬೯

ಕನಕಗಿರಿ ಮಠದೊಡೆಯ ಬಂದರು
ಅನುಪಮದ ದೇಶಿಕಗೆ ಪಟ್ಟವ
ಅನುನಯದಿ ಕಟ್ಟಳೆಯೊಳಧಿಕಾರವನು ಕೊಡಲೆಳಸೀ
ವಿನಯದಲಿ ಪೊಂದಿಸಿದ ದೇಶಿಕ
ರನಘಶ್ರೀಗುರು ಯೆತ್ತಿ ಹಿಡಿಯುತ
ಮನಸಿ ಜಾರಿಯು ಕಳೆಯಲಿರುವಾ ದೇಶಿಕರ ಹರಸೀ

೭೦

ನವಮಿವರೆಗಾ ನಡೆದ ಕಾರ್ಯಗ
ಳವಸರದಿ ವರದಿಯನು ಕೇಳುತ
ಜವದಿ ಹಂಪನಗೌಡ ತರುಣನ ಕರೆದು ದೇಶಿಕರೂ
ಅಪರಿವರು ಯೆಂಬಂಥಭೇದವ
ಅವನಿಯೊಳಗೆಂದೆಂದು ಮಾಡದೆ
ಲವಲವಿಕೆಯಿಂದೆಲ್ಲ ಕಾರ್ಯಕ್ರಮದಿ ಮಾಡ್ರೆಂದೂ

೭೧

ವಿರತಮಠಕಾಗಮಿಸಿದಂಥಹ
ಪರಮಹಾಗುರು ಜಂಗಮರತಾ
ಭರಿತ ಭಕ್ತಿಯ ಭಾವದಿಂದಲಿ ಸೇವೆಮಾಡುತಲೀ
ನೆರೆದ ಜನಗಳು ಯಿದನು ನೋಡುತ
ಬೆರಗು ಭಾವದಿ ಭಕ್ತಿ ವೃದ್ಧಿಸಿ
ಧರಣಿಯೊಳಗಿಂತಿರುವ ಗುರುಗಳ ಪೂರ್ವವನ್ನುತಲೀ

೭೨

ನುಡಿಯ ಜಾಣತೆಗಿಂತ ಧರೆಯೊಳು
ನಡೆಯ ಜಾಣ್ಮೆಯು ಮಿಗಿಲುಯೆನಿಸುತ
ನಡೆನುಡಿಗಳೊಂದಾಗಿ ಓತಪ್ರೋತಭಾವದಲೀ
ಕದುಗಲಿಯೆ ಕರಣಗಳ ಜಯಿಸಿಯೆ
ಮೃಡರೂಪಿಯೂ ಚನ್ನಬಸವರು
ದುಡಿಮೆಯಿರುವುದು ಧರ್ಮಕಾಗಿಯೆಯೆಂದು ತಿಳಿಯುತಲೀ

೭೩

ಒಂದ ಧನ ಧಾನ್ಯಗಳ ತಾನಾ
ಅಂದಿನಾ ದಾಸೋಹ ಕಾರ್ಯಕೆ
ಚೆಂದದಿಂ ವೆಚ್ಚವನು ಮಾಡುತ ಸಂಗ್ರಹಿಸದಂತೇ
ಇಂದಿನದು ವುಳಿದಾಗ ತಂಗಳು
ಚಂದದಾ ದಾಸೋಹಸೇವೆಗೆ
ಇಂದುಧರ ಕೃಪೆಯಲ್ಲಿ ಬಳಸಲು ಧನ್ಯಜಗದೊಳಗೇ

೭೪

ಎಲ್ಲಿ ನೋಡಿದೊಡಲ್ಲಿ ಸಂಭ್ರಮ
ಬಲ್ಲಿದರ ಭಾಷಣದ ಕಾರ್ಯದಿ
ಸಲ್ಲಲಿತ ಸಾಹಿತ್ಯ ಸಂಗೀತದಲಿ ರಂಜಿಸಿತೂ
ಪಲ್ಲಟಾಯಿತು ಜನರಮನವದು
ಕ್ಷುಲ್ಲಕದ ಭಾವವನು ಬಿಡುತಲಿ
ಎಲ್ಲ ಮಾನವರೊಂದುಗೂಡಿಯೆ ಧರ್ಮಕಾರ್ಯದೊಳೂ

೭೫

ಸಕಲ ಸನ್ನಾಹವನು ಮಾಡುತ
ಸಕಲ ವಾದ್ಯಗಳಿಂದ ಕೂಡಿಯೆ
ಸಕಲ ಹರಗುರು ಚರವರೇಣ್ಯರ ಪೂಜೆಯೊಡಗೂಡೀ
ನಿಖಿಲ ಜನಗಳು ನಿಜಾನಂದದಿ
ಸಕಲ ಕಾರ್ಯವ ನೋಡಿ ಮಾಡುತ
ಅಕಲಂಕಗುರು ಚನ್ನಬಸವರ ಸಜ್ಜು ಮಾಡಿಸುತಾ

೭೬

ಆಗಮೋಕ್ತದ ವಿಧಿಯ ತೆರನಲಿ
ಆಗಲ ಶ್ರೀ ಚನ್ನಬಸವರ
ಬೇಗದಿಂ ಮಡಿ ಕಾವಿ ಬಟ್ಟೆಗಳುಡಿಸಿ ಶೃಂಗರಿಸೀ
ಚಾಗಿ ಮಠ ಚೆಲುವಿಂದ ರಂಜಿಸಿ
ಯೋಗ ಶಿವಯೋಗದಲಿ ಸಂಭ್ರಮ
ವಾಗಿ ಸಲ್ಲಕ್ಷಣದಿ ಬೆಳಗಿದ ಚನ್ನಬಸವಾರ್ಯ

೭೭

ದಶಮಿದಿನ ಶುಭ ಬೆಳಗಿನೊಳಗಾ
ದೆಸೆ ತಿರುಗಿ ಶಿವಕಳೆಯಲಿರುವಾ
ಹೊಸ ತನದಿ ಚರಪಟ್ಟದಧಿಕಾರವನು ಕರುಣಿಸುತಾ
ಕಶಲ ದೇಶಿಕರನ್ನು ಹರಸುತ
ಹೊಸತನದಿ ಶ್ರೀ ಚನ್ನಬಸವರ
ಜಸಪಡೆವೆಂದರಾ ಚನ್ನಮಲ್ಲಸ್ವಾಮಿಯಾಗಾ

೭೮

ಹೊನ್ನಗಿರಿ ಮಠ ಕನಕಗಿರಿಯಾ
ಚನ್ನಮಲ್ಲಸ್ವಾಮಿಗಳು ತಾ
ಸನ್ನಿಧಿಯ ಶ್ರೀ ಚನ್ನಬಸವಗಧಿಕಾರ ಕೊಡುತಲೀ
ರನ್ನ ಕಳೆಯಲಿ ಸಭೆಯು ರಂಜಿಸಿ
ಸನ್ನಿಯಲಿ ಸಾರ್ಥಕವ ಪಡೆಯುತ
ಚನ್ನ ಬೆಟ್ಟದಪುರಿ ಮಹಂತಸ್ವಾಮಿ ಸಮ್ಮುಖದೀ

೭೯

ಕರಣ ಹಸಿಗೆಯ ಕಾರ್ಯನಡೆಯಿತು
ಪರಮ ಪಾವನ ಚನ್ನಬಸವರ
ವರದ ಬೆನ್ನಿಗೆ ಕಟ್ಟಿದರು ಶಿವಾನುಭವ ಗ್ರಂಥಾ
ಭರಿತ ಭಕ್ತಿಯ ಬೆಂಬಳಿಯಲಾ
ಅರಿತು ಕಂಬಳಿಯಲ್ಲಿಯಿರಿಸುತ
ಸುರಿತು ತತ್ತ್ವ ಶಿವಾನುಭಾವದ ಶಾಸ್ತ್ರ ಬಿಡದಿರಲೂ

೮೦

ಒಂದು ಕೈಯಲಿ ಭಿಕ್ಷೆ ಪಾತ್ರೆಯು
ಚಂದವಿರುವಾ ಯೋಗದಂಡವು
ಸುಂದರದ ಬಲಗೈಯೊಳ್ಪಿಡಿದ ಚನ್ನಬಸವಾರ್ಯಾ
ವಂದಿಸುವ ಚರಣಗಳು ಹಾವುಗೆ
ಯಿಂದ ಶೋಭಿಸಿ ತಲೆಗೆ ಟೊಪ್ಪಿಗೆ
ಯಿಂದು ಕಳೆಯಲಿ ತೊಳಗಿ ಬೆಳಗುತ ಕಾವಿಯುಡುಪಿನಲೀ

೮೧

ತತ್ವ ಗರ್ಭಿತ ಕುರುಹುಗಳನು
ಸತ್ವ ಶಾಲಿಯೆ ಆಗಿ ಧರಿಸಿಹ
ತತ್ವದೊಳು ತಾ ಸದಾಚಾರಿಯುಯೆನಿಸಿಜಗದೊಳಗೇ
ತತ್ವ ಮಾರ್ಗವು ಷಟ್‌ಸ್ಥಲದಿ
ಸತ್ವದತಿಶಯ ಭಕ್ತಿ ಭಾವದಿ
ಸತ್ವರದಿ ಶಿವಜೀವನಕೆ ತಾ ಹೊಂದಿಕೊಂಡಿರಲೂ

೮೨

ಶ್ರೀ ಮಹಾಗುರು ಚನ್ನಬಸವರ
ನಾಮ ಚಲ್ವಿಕೆಯಿಂದ ಸಾರ್ಥಕ
ಭೂಮು ಭೂತಿಯುಳಂದು ಬೆಳಗಿ ವಿಭೂತಿಪುರುಷಾಗೀ
ಕಾಮ ಸಂಹರ ಪುಣ್ಯಗುರುವರ
ಸೋಮಧರ ಕಳೆಯಲ್ಲಿ ಶೋಭಿಪ
ಸಾಮರಸ್ಯದ ಭಾವದಿಂದಲಿ ಅಖಿಳ ಜನ ಹೊಗಳೀ

೮೩

ಕವಿ ಗಮಕಿ ಪಂಡಿತರು ಕೂಡಿಯೆ
ಅವರವರ ಶೈಲಿಯಲಿ ಹೊಗಳುತ
ಸುವಿಚಾರ ಸೂಕ್ತಿಗಳಿಂದ ಕೀರ್ತಿಸಿ ಹಾಡಿನಲಿದೂ
ಕವಿದ ಭಕ್ತರ ಹರಸಿ ಮುದದಲಿ
ಸವಿನಯದಿ ಗುರು ಚರರಿಗೊಂದಿಸಿ
ಸುವಿಮಲದ ಶ್ರೀ ಚನ್ನಬಸವರು ತೊಳಗಿ ಬೆಳಗುತಲೀ

೮೪

ಭೂರಿ ಭಕುತರಿಗೆಲ್ಲ ತಾವಾ
ಭೂರಿ ಪರಮ ಪ್ರಸಾದವನ್ನು
ಭೂರಿ ಮನದಲಿ ಚನ್ನಬಸವರು ಕರುಣಿಸುತ ದಯದೀ
ಸಾರಿನಾ ಸದ್ವಾಸನೆಯುತಾ
ಸೇರಿರುವ ಜನರೆಲ್ಲ ಮೆಚ್ಚುತ
ಭೂರಿಸಿಹಿಯೂಟದೊಳು ಹಪ್ಪಳ ಸಂಡಿಗೆಯು ಸೇರೀ

೮೫

ವಿವಿಧ ಮೃಷ್ಟಾನ್ನವನು ಸವಿಯುವ
ವಿವಿಧ ಪಾಯಸ ಕುಡಿಯುವಂಥಹ
ವಿವಿಧ ಗಾತ್ರದ ಹುಳಿಯ ಬಣ್ಣದ ಹೋಳಿಗೆಯು ಸೇರೀ
ವಿವಿಧ ಬಗೆಯಿರುವಂಥ ಭಕ್ತರ
ಸವಿಯುಗನುಗುಣವಾಗಿ ಕರುಣಿಸಿ
ಸವೆಯದಂಥಹ ಶಿವಪ್ರಸಾದವ ನೋಡಿದಗುರುವು

೮೬

ಜನರ ತೃಪ್ತಿಯೆ ತನ್ನ ತೃಪ್ತಿಯು
ಜನರ ಕ್ಷೇಮವೆ ತನ್ನ ಕ್ಷೇಮವು
ಜನರು ನಗಲದು ಮಧುರ ಭಾವಹಸಾದರೂಪಿನಲೀ
ಇನನುಯಿಳೆಯನು ಬೆಳಗುವಂತೆಯೆ
ಜನರ ಹೃದಯವ ಬೆಳಗ ಬಂದಿಹ
ಅನುಪಮದ ಶ್ರೀ ಚನ್ನಬಸವರು ಚ್ಯಾಗಿಯೊಳು ಬೆಳಗೀ

೮೭

ಉಭಯ ಕುಶಲೋಪರಿಯ ಕೇಳುವ
ಅಭಯ ಹಸ್ತದಿ ಹರಸುತೆಲ್ಲರ
ವಿಭವದಿಂದಲಿ ರಥೋತ್ಸವಗಳು ನಡೆದು ಹಿಗ್ಗಿನಲೀ
ಅಭವ ಕೃಪೆಯೊಳು ವಿರತ ಮಠವದು
ವಿಭುವಾದ ಶ್ರೀ ಗುರುವಿನಿಂದಲಿ
ನಭಕೆ ವ್ಯಾಪಿಸಿದಂಥ ದಿವ್ಯ ಪ್ರಕಾಶದೊಳು ಬೆಳಗೀ

೮೮

ಜನರು ಸಾಗರದಂತೆಯುಕ್ಕುವ
ಘನಮನದಿ ಉಡುರಾಜ ಕಳೆಯಲಿ
ಘನ ಮಠದಿ ಬೆಳಗಿರುವ ಶ್ರೀ ಗುರು ಚೆನ್ನಬಸವಾರ್ಯ
ಕನಕಗಿರಿ ಗುರುವರನು ನೋಡಿಯೆ
ಅನುದಿನದಿ ದಾಸೋಹನಡೆಸುವ
ಅನುನಯದ ಶ್ರೀ ಚೆನ್ನಬಸವರ ಹರಸುತಲಿ ಮುದದೀ

೮೯

ಬಂದಹರಗುರು ಚರವರರಿಗಾ
ನಂದದಿಂ ಕಾಣಿಕೆಯ ಕೊಡುತಲಿ
ಬಂದಿರುವ ಶಾಸ್ತ್ರಿಗಳ ಜೊತೆಯಲಿ ಗಾಯಕರಹರಸೀ
ಚಂದ ಮನಸಿನಲುಚಿತ ರೀತಿಯ
ಲಂದು ಸಂಭಾವನೆಯ ಕೊಡುತಲಿ
ಮಂದಹಾಸದಿ ನೋಡುತೆಲ್ಲರ ಹರಸಿದಾ ಗುರುವೂ

೯೦

ಶೂನ್ಯಸಂಪಾದನೆಯ ಘನತೆಗೆ
ಶೂನ್ಯ ಸಿಂಹಾಸನವನೇರಿದ
ಮಾನ್ಯರೆನಿಸುತ ಜಗದಿ ಬೆಳಗಿದ ಚೆನ್ನಬಸವಗುರೂ
ಶೂನ್ಯವಾದವು ಸಲ್ಲದಿಳೆಯೊಳು
ಶೂನ್ಯ ಹೃದಯಿಗಳಾಗದಲೆತಾ
ಶೂನ್ಯ ಸಂಪಾದನೆಯು ಹಿಂದೆಯೆವೊಂದೆಂಬಮನದೀ

೯೧

ತನುವಿನೊಳಗಾಚಾರದಿಂದಲಿ
ಮನದೊಳಗೆ ಸುವಿಚಾರಿಯೆನಿಸುತ
ಘನಮನದಿ ಭಾವದೊಳುತಾ ಅನುಭಾವಿಯಾಗಿರಲೂ
ಮನಸಿಜಾರಿಯಕಳೆಯೊಳಿರುವಾ
ಮನಮುಟ್ಟಿ ಶಿವಕಾರ್ಯ ಮಾಡುವ
ಮನವೊಲಿಸಿ ಗುರುಲಿಂಗ ಜಂಗಮ ತೃಪ್ತಿಭಾವದಲೀ

೯೨

ಹಾಲಿನೊಳಗಣ ಮಧುರದಂತೆಯೆ
ಮಾಲೆ ಹೂವಿನ ಪರಿಮಳವು ತಾ
ಮೂಲದಾಭರಣದೊಳು ಸ್ವರ್ಣತ್ವವದು ಕೂಡಿರಲೂ
ಮೂಲಗುಣವರಿಯದಲೆ ಜಗದೊಳು
ಮೂಲತತ್ವವು ತಿಳಿಯದಲೆ ತಾ
ಮೂಲಗುಣವನು ತಿಳಿಯಲದುತಾ ಗುರುವನುಗ್ರಹದೀ

೯೩

ಹಲವು ಹಂಬಲಗಳನು ಹಳಚುತ
ನಿಲವು ಬಲಿಯಲು ವಿನಯ ಬೇಕಾ
ನಿಲವು ನೈತಿಕದೊಡನೆ ತನ್ಮಯ ಭೃತ್ಯಭಾವದಲೀ
ಮಲದ ಗುಣಗಳನಳಿಸಿ ಜಗದೊಳು
ಲಲಿತ ಲಿಂಗದ ಗುಣಗಳಿಂದಲಿ
ಹಲವು ಯೋಗವ ಮಾಡದಲೆ ಶಿವಯೋಗದಲಿ ಕೂಡೀ

೯೪

ಎಂತು ಬಣ್ಣಿಸಬೇಕು ಗುರುಗಳ
ನಂತು ಮಹಿಮಾಶಾಲಿ ಲೀಲೆಯು
ಕಂತು ಹರ ಕೃಪೆಯಲ್ಲಿ ದಾಸೋಹವನು ನಡೆಸುತಲೀ
ಚಿಂತಿತಾರ್ಥಗಳನ್ನು ಕರುಣಿಸಿ
ಚಿಂತೆ ಚಿದ್ಘನದಲ್ಲಿ ನಿಲಿಸುತ
ಸಂತ ಗುಣ ಕಾಂತಿಯಲಿ ಬೆಳಗುವ ಜನರನುದ್ಧರಿಸೀ

೯೫

ಕಾಯ ವಾಚಾ ಮಾನಸಿಕದಲಿ
ನೋಯಿಸದೆಯಿತರರನು ಜಗದೊಳು
ಮಾಯದಾಸೆಯ ಬಲೆಗೆ ಬೀಳದನಂತಮಹಿಮೆಯಲೀ
ಬೀಯ ಮಾಡಿದ ಧನವು ಸಾರ್ಥಕ
ಕಾಯಕದ ಜೀವನವು ಸೊಗಸದು
ಆಯತದ ಘನವಮನದಿ ತಾನಿರೆ ಪರಮಶಿವಯೋಗೀ

೯೭

ವರಮಂತ್ರ ಹಠಲಯ ರಾಜಯೋ
ಗರಿವಿನಿಂ ಮಿಗಿಲೆನಿಸಿ ಬೆಳಗಿಹ
ಪರಮ ತೇಜದ ವೀರಶೈವನ ಭಕ್ತಿಯೋಗವದೂ
ಮೆರೆದು ಕೀರ್ತಿಯ ಕಾಮ ಭಾವವ
ತೊರೆದು ಪೊರೆಯುವ ಗುಣವ ಪಡೆದಿಹ
ಚರವರೇಣ್ಯರು ಚನ್ನಬಸವರು ಜನಮನವ ಬೆಳಗೀ

೯೭

ಬಳಿಕ ಬೀಳ್ಕೊಡುತೆಲ್ಲಜನರನು
ತಿಳಿಮನದಿ ನೆಲೆಯೂರಿನಿಂತನು
ಬಳಿಗೆ ಬಂದಿರುವಂಥ ಭಕ್ತರ ಹರಸುವಾ ಗುರುವೂ
ನಿಳಯವನು ಗುರುಮಠವ ಮಾಡಿದ
ಇಳೆಯ ಜನಗಳ ಸ್ತುತಿನಿಂದೆಗೆ
ಪಳಯಿಸದ ಪರಮಾತ್ಮ ರೂಪದ ಪರಮ ಶಿವಯೋಗೀ

೯೮

ತನ್ನ ಪೂರ್ವಾಶ್ರಯುವನೆನೆಯದೆ
ಮುನ್ನಿನಾಭವಿತವ್ಯ ಕಾರ್ಯಕೆ
ಬೆನ್ನ ಬಿದ್ದಿರುವಂಥ ಭಕ್ತರಿಗಭಯ ನೀಡುತಲೀ
ಚೆನ್ನನಡೆನುಡಿಯಿಂದ ಶೋಭಿಸಿ
ನನ್ನಿಯಲಿ ದಾಸೋಹ ನಡೆಸುತ
ಬನ್ನ ಜೀವಿಗಳನ್ನು ಬಂಧುಗಳೆಂದು ಉದ್ಧರಿಸೀ

೯೯

ಚ್ಯಾಗಿ ಯೂರಿನ ಭಕ್ತಜನಗಳ
ತ್ಯಾಗ ಗುಣಮಹದೊಳಗೆ ಬೆಳಗುವ
ಯೋಗ ಶಿವಯೋಗದಲಿ ಕೂಡಿದ ಪುಣ್ಯವೇನದುವೂ
ಭೋಗ ತ್ಯಾಗವು ಸಲ್ಲದಿಳೆಯೊಳು
ತ್ಯಾಗ ಭೋಗವು ಚಲುವು ಜಗದೊಳು
ನಾಗಭೂಷಣ ಕಳೆಯು ಪಡೆದಿಹ ಚನ್ನಬಸವ ಗುರೂ

೧೦೦

ಧರೆಯ ನಾಗರಹಾಳು ಮಠದೊಳು
ಗುರುತರದ ಶಿವ ಕವಿಯು ಆಗಿಹ
ವರಸಾಹಿತಿ ಸಿದ್ಧರಾಮಯ್ಯಯೆಂಬ ನಾಮದೊಳೂ
ಧರೆಯ ಜನಗಳು ಬದುಕಿ ಬಾಳಲು
ಗುರುವರೇಣ್ಯರು ಚನ್ನಬಸವರ
ವರಕಥನ ಮಹ ಕಾವ್ಯಲೀಲೆಯ ರಚಿಸಿಹಾಡುವನೂ

೧೦೧

ನಮೋ ಶ್ರೀಗುರು ಚನ್ನಬಸವಗೆ
ನಮೋ ಶ್ರೀಗುರು ನಿಷ್ಕಲಂಕಗೆ
ನಮೋ ಶ್ರೀಗುರು ನಿರ್ವಿಕಲ್ಪ ನಿರಂಜನಮೂರ್ತಿಗೇ
ನಮೋ ಶ್ರೀಗುರು ಜ್ಞಾನಸಿಧಿಗೆ
ನಮೋ ಶ್ರೀಗುರು ಪರಮ ತವಸಿಗೆ
ನಮೋ ಶ್ರೀಗುರು ಸಚ್ಚಿದಾನಂದ ಸ್ವರೂಪನಿಗೇ

ಒಂಭತ್ತನೆಯ ಸಂಧಿ ಸಂಪೂರ್ಣಂ
ಅಂತು ಸಂಧಿ ೯ಕ್ಕಂ ಪದಗಳು ೪೧೫ ಕ್ಕಂ ಮಂಗಳಂ

# ಹತ್ತನೆಯ ಸಂಧಿ

**ಸೂಚನೆ :**

ಧರೆಯ ಜನ ಕಲ್ಯಾಣಕಾಗಿಯೇ
ಗುರುವರನು ಶ್ರೀ ಚನ್ನಬಸವರು
ಚರಿಸಿ ಪಟ್ಟಣ ಹಳ್ಳಿಗಳಿಗೆ ಚರಜಂಗಮರೆನಿಸೀ

೧

ಮನದ ಶುದ್ಧತೆಯಿಲ್ಲದವರಿಗೆ
ಅನವರತ ದ್ರವ್ಯದೊಳು ಚಿಂತೆಯು
ಘನಮನದಿ ಕಾಯಕವ ಮಾಡಲು ಲಕ್ಷ್ಮಿವೊಲುಮೆಯದೂ
ವಿನಯದೊಳು ದಾಸೋಹಿಯಾಗಿಯೆ
ತನುವ ಸವೆಸುತ ಈಶ ಸೇವೆಗೆ
ಮನವಿಕಾರವಗೊಳಿಸದಂಥಹ ಚನ್ನಬಸವಗುರೂ

೨

ಶ್ರೀಗುರುವಿಗಿಂತಧಿಕವಿಲ್ಲವು
ಶ್ರೀಗುರುವೆ ಮಹದೇವನೆನಿಸಿದ
ಶ್ರೀಗುರುವಿನುಪದೇಶದಿಂದಲೆ ಘನ ಮುಕ್ತಿಯಹುದೂ
ಶ್ರೀಗುರುವು ನಡೆನುಡಿಯ ಕಲಿಸುವ
ಶ್ರೀಗುರುವುಡಲುಣಿಸ ಕಲಿಸುವಾ
ಶ್ರೀಗುರುವಿನಾ ಪಥವೆ ಮೊದಲಾಶಿವ ಪಥವರಿಯಲೂ

೩

ಲಿಂಗ ಮಧ್ಯದಿ ಜಗವುಯಿರುವುದು
ಲಿಂಗವರುಹಿನ ಕುರುಹುಯೆನಿಸಿದೆ
ಲಿಂಗದಿಂದಲೆ ಪ್ರಾಣಲಿಂಗದನೆಲೆಯತಿಳಿಯುವುದೂ
ಲಿಂಗ ಭಕ್ತನ ಚಿತ್ಕಳೆಯು ತಾ
ಲಿಂಗವಿರಲದು ಲಿಂಗ ಕಳೆಯಾ
ಲಿಂಗ ವಂಗದ ಸಾಮರಸ್ಯದಿ ಸಚ್ಚಿದಾನಂದಾ

೪

ಜಂಗಮತ್ವವೆ ಲಿಂಗ ಮುಖದಾ
ಜಂಗಮತ್ವವು ಪ್ರಣವರೂಪ
ಜಂಗಮನು ತಾ ಶ್ರೀ ಪ್ರಸಾದವ ಕೊಡುವುದಿಳೆಯೊಳಗೇ
ಜಂಗಮತ್ವವು ಮೂರು ವಿಧದಾ
ಜಂಗಮವೆ ಸ್ವಯ ಚರಪರೆಂದು
ಜಂಗಮನೆ ತಾ ಭಕ್ತನೇಳ್ಗಿಗೆ ಕಾರಣನಾಗೀ

೫

ಗುರುವು ಲಿಂಗವು ಜಂಗಮದಲಾ
ಪರಮವೆನಿಸಿದವರ ಪ್ರಸಾದವ
ಧರೆಯೊಳಗೆ ಸಾರಾಯ ಸಂಪಚ್ಚತುಷ್ಟಯುವೆನಿಸೀ
ಭರಿತ ದುಃಖವ ಕಳೆಯುತಲಿತಾ
ತಿರೆಯೊಳಗೆ ಸುಖಶಾಂತಿ ಕರುಣಿಸಿ
ಪರಮವೀಗುರುಲಿಂಗ ಜಂಗಮರಿಂದ ಮುಕ್ತಿಯದೂ

೬

ಒಂದು ವೂರೊಳಗೊಂದು ದಿನತಾ
ವಂದು ಯಿರುತಲಿ ಭಕ್ತಜನಗಳ
ಕುಂದು ಕೊರತೆಗಳನ್ನು ನೀಗಿಸಿ ಹೃನ್ಮನವ ಬೆಳಗೀ
ಮುಂದೆ ಸಾಗುತ ನಗರ ಸೇರುತ
ಚಂದದಿಂ ಪಟ್ಟಣದ ಜನರನು
ಮಂದ ಹಾಸದಿ ಪಂಚರಾತ್ರಿಗಳಿಂದ ಉದ್ಧರಿಸೀ

೭

ಈಶ್ವರಾನುಗ್ರಹದಿ ಮನುಜರು
ಈಶ್ವರಾರ್ಪಣ ಬುದ್ಧಿಯಿಂದಲಿ
ಈಶ್ವರಾನಂದವನು ಪಡೆವೀಜಗವು ಸತ್ಯವದೂ
ಈಶ್ವರನು ಯಿಲ್ಲೆಂದು ಸಾಂಖ್ಯರು
ಈಶ್ವರಗೆ ಪ್ರತಿವಾದ ಮಾಡುತ
ಈಶ್ವರನ ಕೃಪೆ ಮೋಕ್ಷದಾಯಕವೆಂದು ತಿಳಿಯದಲೇ

೮

ಪರಮ ಪುರುಷನು ಪ್ರಕೃತಿಯಿಂದಲಿ
ಪರಮುದಾನಂದವದು ಸೃಷ್ಟಿಯು
ಪರಮ ಪಾವನ ಶಿವನ ಸೃಷ್ಟಿಯು ಸತ್ಯಸುಂದರವೂ
ವಿರತಿ ನೀತಿಯ ನಿಯಮದಿಂದಲಿ
ಧರೆಯಲಿಹ ಸನ್ಯಾಸಮಾರ್ಗದಿ
ದುರಿತ ಕರ್ಮಗಳನ್ನು ಮಾಡದೆ ನಿಷ್ಕಾಮಿಯಾಗೀ

೯

ಇಂಥವರು ಅಪರೂಪ ಜಗದೊಳು
ಸಂತ ಶಿವಯೋಗತ್ವ ಪಡೆದಿರು
ವಂಥ ಶ್ರೀಗುರು ಚನ್ನಬಸವರು ಲೋಕಕಲ್ಯಾಣಾ
ಚಿಂತೆ ವಿಷಯಗಳಿಂದ ಕೂಡಿದ
ನಂತ ದುಃಖದಿ ತೊಳಲಿಬಳಲಿದ
ಕಂತು ವಶದಲಿ ಮೈಯಮರೆಯುತ ಜನರು ದುಃಖದೊಳೂ

೧೦

ಸುಲಭದಲಿ ಶಿವಯೋಗ ಮಹಿಮೆಯ
ನಲಿಸಿ ಜನಗಳ ದುಃಖ ಮರೆಸುತ
ಲಲಿತ ನಡೆಯಲಿ ನುಡಿಯಕಲಿಸಿದ ಚನ್ನಬಸವಾರ್ಯಾ
ಮಲದ ಮೂರ್ಗುಣವಳಿಸಿಜಗದೊಳು
ಚಲದಿ ಲಿಂಗದ ಗುಣವ ಬೆಳೆಸುವ
ಹಲವು ಬಗೆಯನು ತಿಳಿಸುವಂಥಹ ಪರಮಜಂಗಮರೂ

೧೧

ನೋಟ ರುದ್ರಾಕ್ಷಿಯದು ಆಗಿರೆ
ಊಟ ಜೀವನದಾಧಾರವಾ
ಊಟ ಸತ್ಯದ ಶುದ್ಧಕಾಯಕದಿಂದ ಬಂದಿರಲೂ
ಮಾಟದಿಂ ಗುರುಲಿಂಗಜಂಗಮ
ಕೂಟದಿಂವರ ಪ್ರಸಾದವನು
ಬೇಟದಿಂ ಸೇವಿಸಲು ಜೀವನ್ಮುಕ್ತನಹನೆಂದೂ

೧೨

ವೀರಶೈವರ ತತ್ವ ಹೇಳ್ವದು
ವೀರಶೈವರು ತಿಳಿದು ನಡೆಯಲು
ವೀರಶೈವನ ಭಕ್ತಿಯೋಗದಿ ಶಾಂತಿಸುಖದೊರಕೀ
ವೀರಶೈವರ ಪರಮ ಸಂಸ್ಕೃತಿ
ವೀರಶೈವರಿಗದುವೆ ಭಾಗ್ಯವು
ವೀರಶೈವರ ರೂಪರುಚಿ ತೃಪ್ತಿಯಲಿದಾಸೋಹಾ

೧೩

ನವ್ಯಜ್ಯೋತಿಯ ಹಿಡಿದು ಧರೆಯಲಿ
ನವ್ಯಜಾಗೃತಿಯಿಂದ ಬೆಳಗಿಸಿ
ನವ್ಯದನುಭೂತಿಯನು ಕಂಡನು ಬಸವರಸನಾಗೀ
ನವ್ಯದನುಭವ ದಿವ್ಯಮಂಟಪ
ಭವ್ಯತತ್ವ ವಿಚಾರ ಕೇಂದ್ರವು
ನವ್ಯತನದಲಿ ವೀರಶೈವ ಸಮಾಜವುದ್ಧರಿಸೀ

೧೪

ಬಸವನನುಯಾಯಿಯಾಗಿ ಗುರುವರ
ಬಸವತತ್ವದಿ ನಡೆದು ಜಗದೊಳು
ಜಸವ ಪಡೆದಿಹ ನಮ್ಮ ಶ್ರೀಗುರು ಚನ್ನಬಸವಾರ್ಯ
ಸಸಿನೆಯಲಿ ದಾಸೋಹನಡೆಸುತ
ಹೊಸಹುರುಪಿನಿಂ ಪಯಣ ಬೆಳಸುತ
ಎಸಗಿ ಮಹಕಾರ್ಯಗಳಗೈಯುತ ಭೃತ್ಯಭಾವದಲೀ

೧೫

ಏನದೈಸಿರಿ ಶಿವ ಕಳೆಯುಮೊಗ
ಜಾನಿಸುವ ಘನಮನವ ಪಡೆದಿಹ
ಮಾನವೀಯತೆಯಿಂದ ಮರುಗುವ ಕರುಣೆ ಹೃದಯವದೂ
ದಾನಿಗಳು ಕೊಟ್ಟಿರುವ ಧನವನು
ದೀನರಿಗೆ ತಾ ಕೊಟ್ಟು ಹರಸುತ
ಏನು ವಿರತಿಯು ಭವ್ಯಮೂರ್ತಿ ನಿರಂಜನದ ರೂಪಾ

೧೬

ಚನ್ನಬಸವಸ್ವಾಮಿ ನಾಮವು
ಚನ್ನಚೆಲುವಿಕೆಯಲ್ಲಿ ಸಾರ್ಥಕ
ಬನ್ನ ಜೀವರಿಗೆಲ್ಲ ಶಾಂತಿಯ ಮಾರ್ಗಜ್ಯೋತಿಯದೂ
ನನ್ನಿಯಲಿ ದಾಸೋಹಿಯಾಗಿಯೆ
ಸನ್ನುತಾಮಲ ಪರಮಯೋಗಿಯೆ
ಉನ್ನತೋನ್ನತ ಧ್ಯೇಯ ಧೋರಣೆಯಿಂದ ತಾ ಬೆಳಗೀ

೧೭

ವಿರತಿ ಉಪರತಿ ಕೂಡಿಕೊಂಡಿಹ
ದರುವು ಶ್ರೇಷ್ಟವು ಜಗದೊಳಗೆತಾ
ನಿರುತ ಸುಜ್ಞಾನದೊಳು ನಡೆನುಡಿಸತ್ಯ ಶುದ್ಧದೊಳೂ
ನಿರತ ಜನ ಕಲ್ಯಾಣಕಾಗಿಯೆ
ಧರೆಯೊಳವತರಿಸಿರುವ ಯೋಗಿಯು
ಪೊರೆವ ಪರಮನು ಷಟ್‌ಸ್ಥಲಾತ್ಮಕಚರವರರಾಗೀ

೧೮

ಶಿವಲಿಂಗಕಣ್ಗಳ ನೋಟದಾ
ಸುವಿಮಲದ ಮಹಮನವ ಪಡೆದಿಹ
ಧವಳ ರೂಪದಿ ಬೆಳಗುವಂಥಹ ಚನ್ನಬಸವಾರ್ಯಾ
ಬುವಿಯೊಳಗೆ ಗುರುಲಿಂಗವೆನಿಸಿದ
ಅವಿರತದಿ ರಸವಿರುವ ನಾಲಿಗೆ
ಅವಿಕಲದ ಆಚಾರ ಲಿಂಗವು ಗಂಧನಾಶಿಕವು

೧೯

ಪರಮ ಜಂಗಮ ಲಿಂಗವದುತಾ
ಧರೆಯೊಳಗೆ ತ್ವಚಿ ಸ್ಪರ್ಶದೊಳಗೆ
ದೊರೆತಿರುವ ಪ್ರಸಾದಲಿಂಗದ ಶಬ್ದಕಿವಿಕೇಳೀ
ಪರಮಹಾ ಲಿಂಗವದು ಪಡೆಯುವ
ತಿರೆಯೊಳಗೆ ಘನ ತೃಪ್ತಿ ಹೃದಯದಿ
ಮೆರೆವ ಶ್ರೀ ಗುರು ಚನ್ನಬಸವರು ಲಿಂಗಗುಣಗಳೊಳೂ

೨೦

ವರತನುವ ಸೌಂದರ್ಯಕಿಂತಲು
ಪರಮ ಪುನ ಸೌಂದರ್ಯವಿಃಗಿಲದು
ಧರೆಯ ಮಿಂಚಿನ ಹುಳುಗಳಂತೆ ಮಿಂಚಲೇನ್‌ಫಲವೂ
ಅರುಹಿನಾ ಕುರುಹನ್ನು ಪಿಡಿಯುತ
ಗುರಿಯು ತಪ್ಪದೆ ಪ್ರಾಣಲಿಂಗದಿ
ಬೆರೆತು ಭಾವಪಲಿಂಗದಾ ಪೂಜೆಯದು ಚಲುವೆನಿಸೀ

೨೧

ಸ್ವಾನುಭಾವದ ತಿರುಳು ತಿಳಿಸುವ
ಮಾನವರ ಉದ್ಧಾರಮಾಡುವ
ಸಾನುರಾಗದಿ ಭಕ್ತರಿಚ್ಛೆಯ ಕಾಮಧೇನೆನಿಸೀ
ಏನು ಲೀಲೆಯು ಚನ್ನಬಸವರ
ನ್ಯೂನವಿರದಾ ಪರಮ ತಪವದು
ಮಾನನಿಧಿ ಮಾದೇವ ಕಳೆಯಲಿ ಶೋಭಿಸುತ ಜಗದೀ

೨೨

ಕಾಯಕದ ರೀತಿಯಲಿ ನಡೆಯುವ
ಕಾಯಕದಿ ಘನ ತೃಪ್ತಿನೀಡುವ
ಕಾಯಕದಿ ಕೈಲಾಸ ಕಾಣುವ ಚನ್ನಬಸವಗುರೂ
ಕಾಯಕದಿ ನಿಜ ಶಾಂತಿ ಸಿಗುವುದು
ಕಾಯಕದಿ ಆಸೆಗಳ ನಳಿಸುತ
ಕಾಯಕದಿ ಜನಗಳನು ನಡೆಸಿ ತ್ರಿವಿಧ ದಾಸೋಹೀ

೨೩

ಲಿಂಗವಂತರ ಜೀವನದಗುರಿ
ಮಂಗಳಾತ್ಮಕ ಚನ್ನಬಸವರು
ಲಿಂಗಗುಣಗಳ ದಿವ್ಯನಡೆ ಸನ್ಮಾರ್ಗದಿಂತೋರೀ
ಲಿಂಗವಂತರ ಸಂಗದಿಂದಲಿ
ಅಂಗಗುಣಗಳು ಕಳೆದುಕೊಳ್ಳುತ
ತುಂಗ ಶ್ರೀಗುರು ಕೃಪೆಯೊಳಿರುವಾ ಜನಗಳೆ ಧನ್ಯಾ

೨೪

ಗುರುವರೇಣ್ಯರ ಕೃಪೆಯ ಪಡೆಯಲು
ಪುರದ ಹಳ್ಳಿಯ ಭಕ್ತರೆಲ್ಲರು
ಪರಿಪರಿಯ ಬಾಧೆಗಳ ವಿವರಿಸಿನುತಿಸಿ ಕೈಮುಗಿದೂ
ಗುರುವಿನಾ ಶಿವಲಿಂಗ ನೋಟದಿ
ಪರಿಹರಿಸಿ ಅವರವರ ದುಗುಡವ
ಕರುಣೆಯಲಿ ಘನತೃಪ್ತಿ ನೀಡುವವರ ತಪೋಧನರೂ

೨೫

ಭಕ್ತಜನಗಳು ಕೊಟ್ಟ ಕಾಣಿಕೆ
ಭಕ್ತ ಜನರುದ್ಧಾರಕಾಗಿಯೆ
ಶಕ್ತಿಗನುಗುಣವಾಗಿ ಕೊಡುತಲಿ ಮಹದಾನಿಯಾಗೀ
ರಕ್ತಿ ಗೆಳಸದ ವಿರತಮೂರ್ತಿಯು
ಯುಕ್ತವೆನಿಸಿದ ದಿವ್ಯನಡತೆಯು
ಮುಕ್ತಿ ಮಾರ್ಗದ ಜ್ಯೋತಿಯಾಗಿಹ ಚನ್ನಬಸವಗುರೂ

೨೬

ನುಡಿಯಗಣ್ಯರೆ ಬಹಳ ಜಗದೊಳು
ನಡೆವರೇಣ್ಯರು ವಿರಳದಿಳೆಯೊಳು
ಬುಡುಬುಡಿಕೆ ವೇಷದಲಿ ಮೆರೆವರು ಜಗದಗುರುವೆಂದೂ
ಮಡಿಮನವವುಳ್ಳವರು ಯೆನಿಸದೆ
ಕುಡಿಯನೋಟದ ಕಾಮ್ಯಜನಗಳ
ಗೊಡವೆಗತಿ ದೂರದಲಿಯಿರುವರು ಚನ್ನಬಸವಗುರೂ

೨೭

ನಾವು ಸಣ್ಣವರೆಂದು ತಿಳಿಯುತ
ಸಾವು ನೆನಪಿನಲಿರಿಸಿ ಕೊಳ್ಳುತ
ಸಾವು ಬಾರದ ಮುನ್ನ ಸೊಗಸಿನ ಕಾರ್ಯವೆಸಗುತಲೀ
ಕೋವಿದರ ಸಂಗಡದಿ ತತ್ವವ
ಸಾವಧಾನದಿ ಬೋಧಿಸುತ ತಾ
ಸಾವು ಹುಟ್ಟುಗಳನ್ನು ನಿಲ್ಲಿಸಿ ಮುಕ್ತಿಮಾರ್ಗದೊಳೂ

೨೮

ಇಂಥಗುರುಗಳ ಪೂರ್ವ ಜಗದೊಳು
ಸಂತ ಶಿವಯೋಗದಲಿ ಮೆರೆಯುವ
ಸಂತಸದಿ ಶಿವಪೂಜೆ ಮಾಡುವ ಪರಮಗುರುವಾಗೀ
ಸಂತೆಯಂಗಡಿ ಯೆನಿಸಿದಂಥಹ
ಜಂತೆಯೆಣಿಸುವ ಜಪವು ಮಾಡದ
ಕಂತುಹರ ಸೈಯೆನುವ ಪೂಜೆಯ ಮಾಡುವೀ ಗುರುವೂ

೨೯

ಯಾವುದೋ ಕಾರಣದಿ ಬಂದಿಹ
ಏವದದಿ* ಬೆಂದಿರುವ ಭಕ್ತರ
ಪಾವನವ ಗೊಳಿಸುತಲಿ ತಾನಾ ಚನ್ನಬಸವಗುರೂ
ಗೋವಿನಾವೊಗ ತೋರಿಸುತತಾ
ಗೋವಿನಾ ಗಂಟಲನು ಹಿಡಿಯುವ
ಸಾವುಗೊಳಿಸುವ ವ್ಯಾಘ್ರರೆಲ್ಲರ ಸಾತ್ವಿಕರಾಗೀ

೩೦

ಶುದ್ಧ ಚಿತ್ತದಿ ಭಕ್ತಿ ಮಾಡ್ವದು
ಶುದ್ಧ ಬುದ್ಧಿಯು ಜ್ಞಾನದಿಂದಲಿ
ಯಿದ್ದಂಹಕಾರದೊಳು ನಿರಸನದಿಂ ಪ್ರಸನ್ನತೆಯೂ
ಬುದ್ಧಿ ಚಿತ್ತಗಳೊಡನೆ ಮನವದು
ಯಿದ್ದು ಘನಮನದಿಂದ ಕೂಡಿಯೆ
ಬುದ್ಧಿ ಜೀವಿಗಳಾಗಿಯಿರುತ ಶಿವಾನುಭಾವದೊಳೂ

೩೧

ಬರಿಹಣೆಯಲಿರುವಂಥ ಜನಗಳು
ಹರನಮ್ಮೆ ವೆಳಗಾದ ಭಷಿತವ
ಗುರುವಿನಾ ಸಂಸ್ಕಾರದಿಂದಲಿ ಧರಿಸಿಬೆಳಗುತಲೀ
ಎರವಲದ ಲಿಂಗಗಳಹಾಕುವ
ಹರಗಣಾರಾಧನೆಗೆ ಬರುವಾ
ತರತರದ ಜನರೆಲ್ಲರಾಗಲೆ ಲಿಂಗ ಧರಿಸುತಲೀ

* ಪದ್ಯ ೨೯:—ಏವದ:—ವ್ಯಥೆ; ದುಃಖ

೩೨

ಮಠದ ಐಗೆಳ ತಿದ್ದಿ ನಡೆಸುತ
ಮಠದಭಕ್ತರ ಭಕ್ತಿಬೆಳಸುತ
ಮಠದ ಮಾನ್ಯತೆ ಬೆಳಗಿ ನಮ್ಮಯ ಶ್ರೀ ಗುರುಕೃಪೆಯಿಂ
ಮಠದೊಳಗೆ ಮಠದೊಡೆಯ ನಿದ್ದಾ
ಮಠದಘನತೆಗೆ ಕುಂದು ತಾರದೆ
ಮಠದೊಳಗೆ ದಾಸೋಹಿಯಾಗಿರುವಾತ ಮಠದೊಡೆಯಾ

೩೩

ತಿದ್ದಿನಡೆಸುವ ನಯದ ಜಾಣ್ಮೆಯು
ಬುದ್ಧಿಮತಿಕೆಯಿಂದ ನಡೆಸುವ
ಸದ್ದುಗದ್ದಲು ಮಾಡದಂಥಹ ಚನ್ನಬಸವಗುರೂ
ಮುದ್ದು ಮಾತುಗಳಿಂದ ಬೋಧಿಸಿ
ಉದ್ಧಟವ ಕಳೆಮುತ್ತ ಕರುಣದಿ
ಉದ್ಧರಿಸಿ ಸಲಹುತ್ತ ಜನಗಳಾ ಚರವರರಾಗೀ

೩೪

ಗುರು ತರದಿ ಗುರುಭಕ್ತಿ ಬೆಳೆಯುತ
ಗುರು ತರದಿ ತಾ ಲಿಂಗ ನಿಷ್ಠೆಯು
ಗುರು ತರದಿ ಜಂಗಮರ ಪ್ರೇಮವು ತೊಳಗಿಬೆಳಗುತಲೀ
ಪರಮತೀಯರು ಮೋಹಗೊಳ್ಳುತ
ಪರಿಣತದಿ ತತ್ವವನು ತಿಳಿಯುತ
ಪರಿವಿಡಿದು ವರವೀರಶೈವದ ಮತಕೆ ಬರುತಾಗಾ

೩೫

ತನ್ನ ಮತ ಮೇಲೆಂದು ಹೇಳದೆ
ಭಿನ್ನ ಮತ ಕೀಳೆಂದು ಬಗೆಯದೆ
ಸನ್ನುತದ ವರವೀರಶೈವರ ಮತವು ಶ್ರೇಷ್ಟದೊಳೂ
ಸನ್ನಿಭದ ಸ್ತ್ರೀ ಪುರುಷರೆಲ್ಲರು
ಚನ್ನ ಚಲುವಿನ ಮೋಕ್ಷಪಡೆಯುವ
ಉನ್ನತೋನ್ನತ ವೀರಶೈವವು ವಿಶ್ವದೊಳು ಬೆಳಗೀ

೩೬

ಇಷ್ಟಲಿಂಗದ ನಿಷ್ಠೆನಿಲಿಸುತ
ಕಷ್ಟತರ ಹಠಯೋಗಕೆಳಸದೆ
ಇಷ್ಟದೊಳು ಶಿವಯೋಗದಿಂ ತಾ ಸುಲಭದಲಿ ನಡೆದೂ
ತುಷ್ಟಿಯಲಿ ಕಾಯಕವ ನಡೆಸುತ
ದುಷ್ಟ ಜೀವನ ನಡೆಸದಲೆತಾ
ದೃಷ್ಟಿ ಸಮಭಾವದಲಿ ಭಕ್ತರು ಶ್ರೀಗಳಾ ಕೃಪೆಯಿಂ

(ಒಂದು ಪವಾಡ)

೩೭

ದೇಶಸಂಚಾರದಲಿ ಶ್ರೀಗಳ
ಕಾಶವದು ಶಿವತೇಜವಾಗಿರೆ
ಕಾಶಿನೋಡಿದ ಮುಕ್ತಿದೊರೆವುದು ತಾತದರ್ಶನದೀ
ವಾಶಿಮಾಡುವ ಸಕಲವ್ಯಾಧಿಯ
ಬೇಸರದಿ ಬೆಂದಿರುವ ಜನಗಳಿ
ಗಾಸರೆಯು ನೀಡುವನು ನಮ್ಮಯ ಚನ್ನಬಸವಗುರೂ.

೩೮

ಉಮಳಿ ಹೊಸುರಿನ ನಾಗರೆಡ್ಡಿಯ
ವಿಮಲ ಪಂಪನಗೌತ್ರ ಮನೆಗಾ
ಸುಮನ ಬಿನ್ನಹಕೊಪ್ಪಿಬಂದರು ಶ್ರೀತಾತರಾಗಾ
ಗಮಗಮಿಸುವಾ ಊದುಬತ್ತಿಯು
ಗಮನಗಮ್ಯದಿ ಗಮ್ಯಪೀಠದಿ
ಗಮಿಸಿ ಮೂರ್ತವ ಮಾಡಿದಾ ಶ್ರೀಚನ್ನಬಸವಗುರೂ

೩೯

ಮನೆಯ ಬಳಗವು ಬಂದುನಮಿಸುತ
ಅನುನಯದಿ ಭಕ್ತಿಯಲಿ ಪೂಜಿಸಿ
ಅನುಪಮದ ಶ್ರೀಪಾದಕೃಪೆಯಲಿ ಧನ್ಯರಾಗುತಲೀ
ಅನುದಿನದಿ ಕೆಲದಿನಗಳಲ್ಲಿಯೆ
ಅನುಭವಿಕ ಭಕ್ತರನು ಹರಸುತ
ಅನುಭವವು ಶಿವನೊಳಗೆ ಕಾಣುವದಿವ್ಯ ಶಿವಯೋಗೀ

೪೦

ಒಂದು ದಿನ ರಾಮಣ್ಣಗೌಡನು
ಬಂದು ಶ್ರೀಗಳ ದರ್ಶನಕೆ ತಾ
ಸಂದು ನಿಲ್ಲುತ ಕೈಯಮುಗಿಯುತ ಬಿನ್ನಹವಮಾಡೀ
ಒಂದು ಪೂಜೆಯು ತಮ್ಮ ಮನೆಯಲಿ
ಅಂದು ನಡೆಯಲಿಯೆಂದು ಕೇಳಿದ
ಚಂದ ಮನಸಿನ ಗೌಡನಾಕರೆಗೊಪ್ಪಿದಾ ಗುರುವೂ

೪೧

ಮನೆಗೆ ಬಂದರು ಗುರುಗಳಾಗಲೆ
ದಿನಪನಾ ತೆರನಂತೆ ಬಂದರು
ವನರುಹದ ಮನವಿರುವ ಗೌಡನ ಮನವದರಳುತಲೀ
ಮನೆಯೊಳಗೆ ಶಿವಪೂಜೆ ಮಾಡಿಸಿ
ಮನೆಯೊಳಗೆ ಸತಿಪತಿಗಳಿಬ್ಬರು
ಅನಘಶ್ರೀಗಳ ಪಾದಪೂಜೆಯ ಮಾಡಿಮುಗಿಸಿದರೂ

೪೨

ಬಳಿಕ ಪಾದೋದಕವ ಪಡೆಯುತ
ಒಳಗಿನಾ ಕೋಣೆಯಲಿಯಿರುವಾ
ಬಳಲಿ ವ್ಯಾಧಿಯಲಿರುವ ಮಗಳಿಗೆ ತೀರ್ಥಕೊಡುತಾಗಾ
ತೊಳಗಿ ಬೆಳಗುವ ಬೆಳ್ಳಿತಾಟಿನ
ವೊಳಗೆ ನೈವೇದ್ಯವನು ಮಾಡುತ
ಬಳಿಕ ಶ್ರೀಗುರುವರ ಪ್ರಸಾದವಪಡೆದು ಧನ್ಯದಲೀ

೪೩

ಅಂಗಳದಿ ಮಂಚದಲಿ ಮಂಡಿಸಿ
ತಿಂಗಳಿನ ಬೆಳಕಲ್ಲಿ ಹೊಳೆಯುವ
ಮಂಗಳದ ಶ್ರೀ ಚನ್ನಬಸವರು ತೊಳಗಿ ಬೆಳಗುತಲೀ
ಕಂಗಳಿನ ಸನ್ನೆಯಲಿ ಸತಿಯಳು
ಭಂಗವ್ಯಾಧಿಯಲಿರುವ ಮಗಳನು
ತುಂಗ ಶ್ರೀಗಳ ಪಾದದಡಿಯಲಿ ಹಾಕಿ ಮೊರೆಯಿಟ್ಟೂ

೪೪

ಹಿಂದೆರಡು ಕೂಸುಗಳು ಸತ್ತವು
ಇಂದಿರುವ ಮಗುವಿಂಗೆ ವ್ಯಾಧಿಯು
ಇಂದೊನಾಳೆಯು ದಿನಗಳಲ್ಲಿಯೆ ಸಾಯುವಂತಾಗೀ
ಮುಂದುಗಾಣದೆ ದುಃಖಿಯಾಗಿಯೆ
ಮಂದಮತಿಯಲಿ ದಿಕ್ಕುಗಾಣದೆ
ಬೆಂದಜೀವರಿಗಿಂದು ತಾವೇ ದಿಕ್ಕುಯೆನ್ನುತಲೀ

೪೫

ಹೀಗೆಂದು ದಂಪತಿಗಳೀರ್ವರು
ರೋಗದಾ ಮಗುವನ್ನು ನೋಡುತ
ಹೋಗಿ ಶ್ರೀಗಳ ಪಾದಹಿಡಿಯುತ ಮಾರ್ಗದರ್ಶನಕೇ
ಬಾಗಿದಾ ಶಿರಗಳನು ಮುಟ್ಟುತ
ರೋಗದಾ ವಿಷಯವನು ಕೇಳುತ
ಹೋಗುವುದು ಬಂದಿರುವ ವ್ಯಾಧಿಯು ಯೆಂದರಾಗುರುವೂ

೪೬

ನಿಮ್ಮ ಗ್ರಾಮದ ಶಿವಾಲಯದೊಳು
ನಿಮ್ಮ ಮೆಚ್ಚಿಗೆಯಾದ ಲಿಂಗವ
ನಿಮ್ಮ ಊರಲಿ ಸಿದ್ಧಲಿಂಗೇಶ್ವರನ ನಾಮದೊಳೂ
ಹೊಮ್ಮಿ ಮೆರೆಯುವ ಧವಳ ಕಾಂತಿಯು
ಒಮ್ಮೆ ನೋಡಲು ನೆನಪು ಅಳಿಯದು
ಒಮ್ಮನದಿ ಪೂಜಿಸಿರಿ ಎಂದಾಗುರುವು ಗೌಡನಿಗೇ

೪೭

ಅನುಕ್ರಮದಿ ರುದ್ರಾಭಿಷೇಕವ
ಅನುಪಮದ ಲಿಂಗಕ್ಕೆ ಮಾಡಿಸಿ
ಘನಮನದಿ ವರ ಗಣಾರಾಧನೆ ಮಾಡಿರೆನ್ನುತಲೀ
ಅನಘಗುರು ಉಪದೇಶದಂತಿಯೆ
ಕೊನರಿದಾಶಾಭಾವದಿಂದಲಿ
ಮನವು ಹಿಗ್ಗಿಸಿ ಕಾರ್ಯಮಾಡಲು ದಂಪತಿಗಳೊಪ್ಪೀ

೪೮

ಸುತೆಗೆ ಬಂದಾಜಾಡ್ಯಗೋಸುಗ
ಸತತ ಜನ್ಮಾಂತರದವರೆವಿಗು
ಅತಿಶಯದ ಶಿವಭಕ್ತಿಭಾವದಿ ಪೂಜೆ ಮಾಡ್ರೆನುತಾ
ಗತಿಯ ಬಿಡವಲೆ ವರುಷಕೊಮ್ಮೆಯೆ
ಸತತ ಶ್ರಾವಣಮಾಸದೊಳಗಾ
ಮತಿಗೆಡದ ಭಾವದಲಿ ಮಾಡಿರಿಯೆಂದರಾಗುರುವೂ

೪೯

ಮಗಳು ಮಲ್ಲಮ್ಮನಿಗೆ ಬಂದಿಹ
ಅಗದ ಉಪಚಾರಕ್ಕೆ ಮಣಿಯದ
ದಿಗಿಲುಗೊಳಿಸುವ ಜಾಡ್ಯವದು ತಾ ಗುಣವು ಹೊಂದುವುದೂ
ಜಗದೊಳಗೆ ಆರೋಗ್ಯಭಾಗ್ಯದಿ
ಮಗಳು ಬೆಳೆಯುವಳೆಂದು ಹೇಳುತ
ಸೊಗಸು ಗುರು ಶ್ರೀ ಚನ್ನಬಸವರು ಹರಸಿ ಗೌಡರನೂ

೫೦

ಮಾರನೆಯ ದಿನ ಗೌಡ್ರುಮನೆಯಲಿ
ಸಾರಣೆಯು ಕಾರಣೆಯು ಮಾಡುತ
ಊರ ಸಿದ್ಧೇಶ್ವರನ ಲಿಂಗಕೆ ಪೂಜೆಗೆಳಸುತಲೀ
ತೋರಣಗಳಿಂದಲಂಕೃತದೊಳು
ತೋರ ಬಾಳೆಯದಿಂಡ್ಗಳಿಂದಲಿ
ಭೂರಿಮನದಭಿಷೇಕ ಮಾಡುವ ಗೌಡ್ರುಗೇಂ ಕೊರತೇ

೫೧

ಮನವು ಯಿಮ್ಮನವಾಗದಲೆ ತಾ
ಧನವು ಧರ್ಮಕೆ ಸಂದುದಾದರೆ
ತನುವು ಗುರುವಿನ ಸೇವೆ ಮಾಡಲು ಧನ್ಯವಾಗುವುದೂ
ದಿನಪನುದಯದ ಮುನ್ನ ಪೂಜೆಗೆ
ತನುಜೆ ವ್ಯಾಧಿಯ ನಿವಾರಣೆಗಾ
ದಿನದೊಳಾ ರುದ್ರಾಭಿಷೇಕವ ಗೌಡ ಮಾಡಿಸಿದಾ

೫೨

ವರಪೂಜೆ ಸಕ್ರಮದಿ ನಡೆಸುತ
ತರಿಸಿದ ಘ್ಯಾಪಾದ್ಯದಿಂದಲಿ
ಬೆರಸುತಲಿ ಆಚಮನಸಹಿತದಿ ಪಂಚದಮೃತದೊಳೂ
ಗುರುಲಿಂಗಕಭಿಷೇಕ ಮಾಡಿಸಿ
ಗುರುಬಾಳೆಫಲರಸದಿ ತೊಳೆಸುತ
ಪರಮ ಪೌರೋಹಿತ್ಯದಿಂದಲಿ ರುದ್ರಾಗಭಿಷೇಕಾ

೫೩

ಮಾಡುವಾ ಅಭಿಷೇಕ ದೃಶ್ಯವ
ನೋಡುವಾ ಕಣ್ಮನವ ಸೆಳೆಯುವ
ಕೂಡಿಕೊಂಡಿಹ ಶಿವನ ಚೇತನಲಿಂಗದೊಳು ಬೆಳಗೀ
ಹಾಡುತಲಿ ಮಂಗಳದಗೀತವ
ಬಾಡಿದಾ ಹೂಮೊಗವನರಳಿಸಿ
ಬೇಡುತಲಿ ಕೈಮುಗಿದು ಗೌಡನು ಸತಿಸಹಿತಕೂಡೀ

೫೪

ಜೀವನದಿ ಸುಖಶಾಂತಿ ಬೇಡುತ
ಜೀವನದಿ ಶಿವಭಕ್ತಿ ನೆಲಸಲಿ
ಜೀವನದಿ ಗುರುಲಿಂಗಜಂಗಮ ಪ್ರೇಮ ಬಾಳಿರಲೀ
ಭಾವುಕದಿ ಹೀಗೆಂದು ಹೇಳುತ
ಸಾವು ದಿಶೆಯಲಿಯಿರುವ ಮಗಳಿಗೆ
ಸಾವಧಾನದಿ ಚೇತನವ ನೀಡೆಂದನಾ ಗೌಡಾ

೫೫

ಶ್ರೀಗಳಪ್ಪಣೆಯಂತೆ ಗೌಡನು
ಶ್ರೀಗಳಾ ಸಮ್ಮುಖದಿ ಗೌಡನು
ಸಾಗಿಸುತ ವರಗಣಾರಾಧನೆ ಸಂಭ್ರಮದಿ ಮಾಡೀ
ಆಗಮಿಸಿ ವರಗಣಾರಾಧನೆ
ಸಾಗಿಸಿದ ಜಂಗಮರಪಾದಕೆ
ಬಾಗಿನಮಿಸುತ ಗೌಡ ದಕ್ಷಿಣೆಕೊಟ್ಟು ದಕ್ಷದಲೀ

೫೦

ವಾರ ಕಳೆವುದರೊಳಗೆ ಗೌಡರ
ಕೋರಿಕೆಯು ನೆರವೇರಿ ಮಗಳಿಗೆ
ಭಾರಿ ಚೇತನ ಬಂದು ಜಾಡ್ಯವು ಪೂರ್ಣಗುಣಹೊಂದೀ
ಬಾರಿಬಾರಿಗು ಬಂದ ಜನರಾ
ಚಾರು ಶ್ರೀಗುರು ಚನ್ನಬಸವರ
ಪಾರ ಮಹಿಮೆಯ ನೋಡಿನುತಿಸುತ ಸಂತಸದಿಕೂಡೀ

೫೭

ಆದರೇಂ ಊರವರು ಚಿಂತಿಸಿ
ಹೋದ ಮಳೆ ತಾಂ ಬಾರದಿರಲಾ
ಕಾದ ಭೂಮಿಯು ಬಿರುಕುಬಿಡುತಲಿ ಪಚ್ಚಪೈರೊಣಗೀ
ಮೇದಿನಿಯೊಳೊಣಗಿರುವಪೈರಿಗೆ
ಆದರದಿ ಮಳೆ ಬಾರದಿದ್ದರೆ
ಬಾಧಕವು ವಿಧವಿಧದಿ ಜನರಿಗೆ ಶಾಂತಿದೊರೆಯದಲೇ

೫೮

ಮುಗಿಲು ನೋಡುತ ಮಳೆಯರಾಯನ
ದಿಗಿಲು ಮನದಲಿ ಮೊರೆಯನಿಡುತಲಿ
ಬಗೆ ಬಗೆಯ ಭಾವದಲಿ ಬೇಡಿದರೊಂದು ಫಲಿಸದಲೇ
ಮುಗಿಲು ದೇವರುಯೆಂದು ನಂಬಿದ
ಜಗದ ಜನ ಹಂಬಲಿಸಿ ಪೂಜಿಸಿ
ಹೊಗಳಿ ವರುಣನ ಕೃಪೆಗೆ ಮಾಡುತ ಸಪ್ತಭಜನೆಗಳಾ

೫೯

ದನಗಳಿಗೆ ಹಸಿಮೇವು ಸಿಗದಲೆ
ಜನಗಳಾ ಒಣಪೈರು ನೋಡುತ
ದಿನದಿ ಕೆಲಸದಿ ತಾಳ್ಮೆಗೆಡುತಲಿ ಮಳೆಯು ಬಾರದಿರೇ
ಅನುದಿನದಿ ಭಜನೆಯನು ಮಾಡುತ
ನೆನೆದು ಊರೊಳಗಿರುವ ದೇವರ
ಅನುಪಮದ ಶಿವಲಿಂಗಕಾಗಲೆ ಕಾಯಿ ಹೊಡಿಸುತಲೀ

೬೦

ಅನುಭವಿಗಳೊಂದೆಡೆಯು ಸೇರುತ
ಅನುಭವದ ಮಾತುಗಳನಾಡುತ
ಅನಘ ಶ್ರೀಗುರು ಚನ್ನಬಸವರ ಸನ್ನಿಧಿಗೆ ಹೋಗೀ
ಮನದಲಿರುವಾ ವಿಷಯ ತಿಳಿಸುತ
ಮನವು ಒಮ್ಮನ ಮಾಡಿಕೊಳ್ಳುತ
ಜನತೆ ಮಳೆ ಬರುವಂಥದಿನವನು ಕೇಳಿ ಶ್ರೀಗಳನೂ

೬೧

ವರದ ತಿಥಿನಕ್ಷತ್ರವಾರವು
ಕರಣ ಯೋಗವು ತಿಳಿಸುವಂಥಹ
ಗುರುತರದ ಪಂಚಾಂಗ ವಿಷಯವು ವ್ಯತ್ಯಯವಾಗೀ
ಚರಣ ಸಂಧಿಯು ಕಾಲವೆಲ್ಲವು
ಪರಿಪರಿಯ ಕುಂಡಲಿಗಳೆಲ್ಲವು
ಭರಿತದಿಂ ಕೂಡಿರಲು ಯೋಗದಿ ಮಳೆಯು ಬಾರದಿರೇ

೬೨

ಇದಕುಪಾಯವು ತೋರುಶ್ರೀಗುರು
ಮುದದಿ ಜನತೆಯು ಬದುಕುವಂಥಹ
ಹದಮಳೆಯುದನುಕೂಲದಿನವನು ತಿಳಿಸೆಂದು ಕೇಳೀ
ಒದಗಿದಾ ಸಂಧಿಗ್ಧ ಸಮಯದಿ
ಸದಮಲಾಂತಃಕರುಣಿ ಶ್ರೀಗುರು
ಸದಯ ಹೃದಯದಿ ದಾರಿ ತೋರಲು ಬೇಡಿಜನರಾಗಾ

೬೩

ಯೋಗಮುಖದಲಿ ಶಿವನನೆನಸುತ
ತ್ಯಾಗಿ ಶ್ರೀಗುರು ಚನ್ನಬಸವರು
ಆಗಮಿಸಿ ಹತ್ತಿರದಲಿರುವಾ ಭಕ್ತರನುನೋಡೀ
ಕೂಗಳತೆಯಲಿ ದೇವನಿರುವನು
ಕೂಗುವುದು ನಂಬಿಗೆಯ ಭಾವದಿ
ಬಾಗಿಬೇಡಲು ಶಿವನು ಒಲಿವನು ಸತ್ಯಜಗದೊಳಗೇ

೭೪

ನಿಮ್ಮ ಭಕ್ತಿಗೆ ಶಿವನು ಒಲಿವನು
ನಿಮ್ಮ ಭಕ್ತಿಯ ಶಕ್ತಿ ನೋಡಲು
ಹಮ್ಮಿ ಕೊಂಡಿಹ ನಿಮ್ಮ ಕಾರ್ಯವ ಸಂತಸದಿನೋಡೀ
ಒಮ್ಮನದಿ ಕರುಣಿಸುವ ಮಳೆಯನು
ಸುಮ್ಮನಾಲೋಚನೆಯು ಮಾಡದೆ
ನಿಮ್ಮ ಭಜನಾ ಪೂಜೆ ಬಿಡದಲೆ ಮಾಡಿರೆನ್ನುತಲೀ

೭೫

ಹಿಡಿಯೊಳಿರುವಾ ಕಲ್ಲುಸಕ್ಕರೆ
ಕೊಡುತ ಹರಸುತ ಶ್ರೀಗಳಾಗಲೆ
ಮೃಡನು ಖಂಡಿತ ಮಳೆಯ ಕೃಪೆಯನು ಮಾಡ್ವನೆನ್ನುತಲೀ
ಮೃಡಯೋಗಿ ಶ್ರೀ ಚನ್ನಬಸವರ
ಅಡಿಗಳಿಗೆ ವಂದಿಸುತ ಭಕ್ತರು
ಒಡನೆಗಮಿಸುತ ಭಜನೆ ಸೇರುತ ಭಕ್ತಿಭಾವದಲೀ

೭೬

ಆಗಸದಿ ಮೋಡಗಳುಯಿರದಲೆ
ಬಾಗುಳವ ಪಡುವಂಥ ಜನರಿಗೆ
ಸಾಗಿ ಒರುತಲಿ ಕವಿದಮೋಡಗಳಂದು ವಿಸ್ಮಯದೀ
ಬೀಗಿ ಬಳುಕುವ ಮರಗಿಡಂಗಳು
ಲಾಗು ತನದಲಿ ವಾಯುಸೆಳೆತಕೆ
ತೂಗುತುಯ್ಯಾಲೆಯಲಿ ರೆಂಬೆಗಳ್ಹಿಂದು ಮುಂದಾಗೀ

೭೭

ಗಗನಮಿಂಚಿನ ಗುಡುಗುಹೊಡೆತಕೆ
ಗಗನಮಣಿ ಮರೆಯಾಗಿ ಹೋದನು
ನಗೆಯಃ ನಗಜಾವರನ ಹಾಸದಿ ಆಲಿಕಲ್‌ಬಿದ್ದೂ
ಧಗೆಯೊಳಗೆ ಕಾದಿರುವ ಧರಣಿಗೆ
ಸೊಗಸಿನಲಿ ಮಳೆಗರೆದು ಜನತೆಗೆ
ಮೃಗಧರನು ತಂಪನ್ನು ಕೊಡುತಲಿ ಶಾಂತಿ ಕರುಣಿಸಿದಾ

೬೮

ಊರಜನಗಳು ಸೇರಿ ನಲಿಯುತ
ಬಾರಿಬಾರಿಗು ಹೊಗಳಿ ಶ್ರೀಗಳ
ಪಾರಮಹಿಮೆಯ ಫಲವೆಯಿದುಯೆಂದಾಗ ಹರುಷದಲೀ
ಸಾರಿ ಬಂದರು ಶ್ರೀಗಳಿದ್ದೆಡೆ
ಕೋರಿಕೆಯ ಫಲಿತಕ್ಕೆ ನಮಿಸುತ
ಕಾರಣಿಕ ಶ್ರೀ ಚನ್ನಬಸವರ ಕೃಪೆಯು ಶಿವಕೃಪೆಯೂ

೬೯

ನಿಮ್ಮ ಭಕ್ತಿಯ ಭಜನೆ ಕಾರ್ಯದ
ನಿಮ್ಮ ಶಕ್ತಿಗೆ ಶಿವನು ಮೆಚ್ಚಿದ
ಸುಮ್ಮನೆಮ್ಮನು ಹೊಗಳಿದಿರಿಯೆಂದಾಗ ಶ್ರೀಗುರುವೂ
ಕೆಹ್ಮನುಪಚಾರಕ್ಕೆವೊಲಿಯನು
ಹಮ್ಮುವಳಿಯಲು ಶಿವನುವೊಲಿವನು
ನೆಮ್ಮದಿಯು ನೀಡಿರುವ ಶಿವನನು ನೆನಸೆಂದಗುರುವೂ

೭೦

ಹೊಗಳಿದರೆ ಉಂಡಷ್ಟು ತೃಪ್ತಿಯು
ತೆಗಳಿದರೆ ಉರಿಯುಷ್ಟು ತಾಪವು
ಹೊಗಳಿಕೆಗೆ ತೆಗಳಿಕೆಗೆ ತಾವಾ ಹಿಗ್ಗಿಕುಗ್ಗದಲೇ
ಜಗದಜನ ಕಲ್ಯಾಣ ಬಯಸುವ
ಜಗದ ಜನಗಳ ಜಾತಿಯೆಣಿಸದ
ಜಗದೊಳಗೆ ತಾ ಸಕಲಜೀವರಲೇಸುಬಯಸುತಲೀ

೭೧

ಹೀಗಿರುವ ಶ್ರೀಗುರುವಪೂರ್ವವು
ಸೋಗಿನಾಡಂಬರಕೆ ದೂರವು
ಯೋಗ ಶಿವಜೀವನದಿ ನಡೆಸುವ ಚನ್ನಬಸವಗುರೂ
ರಾಗರಂಜನೆಗೆಳಸದಂಥಹ
ಭೋಗ ಶಿವಯೋಗದಲಿ ಕಾಣುವ
ತ್ಯಾಗ ಜೀವನ ನಡೆಸುವಂಥಹ ಧೀರಶಿವಯೋಗೀ

೭೨

ಮಾರನೆಯ ದಿನ ಊರ ಜನಗಳು
ಮಾರಹರ ಕೃಪೆಗಾಗಿ ಹರ್ಷದಿ
ಸೇರಿ ಸಿದ್ಧೇಶ್ವರನ ಗುಡಿಯಲಿ ಗಣಾರಾಧನೆಗೇ
ಭಾರಿ ಬಾಳೆಯ ದಿಂಡುಕಟ್ಟುತ
ತೋರಣದಿ ಕಂಭಗಳು ಶೋಭಿಸಿ
ಭೂರಿತನದಲಿ ರುದ್ರುಗಭಿಷೇಕವನು ಮಾಡಿಸುತಾ

೭೩

ಲಿಂಗದಾಮುಖ ಜಂಗಮವು ತಾ
ಲಿಂಗಪೂಜಾ ವಿಭವದೊಳಗಾ
ಜಂಗಮರಿಗುಣ ಬಡಿಸಿ ಗಣವರ ತೃಪ್ತಿ ಮಾಡಿಸುತ
ಮಂಗಳದ ಶ್ರೀ ಚನ್ನಬಸವರ
ತುಂಗ ಘನ ನೇತೃತ್ವದಲ್ಲಿಯೆ
ಇಂಗಡಲೊಳಿಂಪಾದ ಘನಕಾರ್ಯವನು ಜನಮಾಡೀ

೭೪

ಶ್ರೀಗಳಾ ನೋಟವದು ಪರುಷವು
ಶ್ರೀಗಳಾ ಮಾಟವದು ಪರುಷವು
ಶ್ರೀಗಳಾ ಕರಪಾದಕಮಲಗಳೆಲ್ಲ ಪರುಷಮಯಾ
ಶ್ರೀಗಳಾ ಘನಮನದಿಯಿರುತಲಿ
ಶ್ರೀಗಳಾ ತಪಶಕ್ತಿ ಬೆಳಗುತ
ಶ್ರೀಗಳಾ ಮಾತುಗಳು ಮೌನದಿ ಪೂತಚಿನ್ಮಯವೂ

೭೫

ಭೂತಭವಿಷದ್ವರ್ತಮಾನದ
ಸಾತಿಶಯದಲಿ ವಿಷಯ ತಿಳಿಸುವ
ವೀತರಾಗದಿ ಸಕಲ ಜನಮನ ಸೆಳೆದ ಶಿವಯೋಗೀ
ಓತುವಿಂದಲಿ ಜನರ ಕೊರತೆಗೆ
ಚೇತನವ ನೀಡುತ್ತ ತಾತನು
ತಾತನೆಂದೇ ಜಗದಿ ಹೆಸರನು ಪಡೆದ ಪರಮ ಗುರೂ

೭೬

ತಾತ ಶ್ರೀಗುರುದಾತನಾಗಿಹ
ಪೂತ ಹೃದಯದ ಪ್ರೀತಿಯಿಂದಲಿ
ಕಾತರದಿ ಬಂದಂಥ ಭಕ್ತರಿಗಭಯ ನೀಡುತಲೀ
ಗೋತ ಹೊಡೆದಿಹ ಜೀವನದಿ ಜನ
ತಾತನಾ ಸನ್ನಿಧಿಗೆ ಬರುತಲಿ
ಭೂತಿ ಯೋಗದ ಕಳೆಯು ಪಡೆಯುತ ಚನ್ನಬಸವರಲೀ

೭೭

ಜೋಡು ಎತ್ತಿನ ಚಲುವ ಚಕ್ಕಡಿ
ಮಾಡಿ ಶ್ರೀಗಳ ಬೀಳುಕೊಡುತಲಿ
ಗಾಡಿಯೊಳಗಿಹ ಚನ್ನಬಸವರ ಪಾದಕೊಂದಿಸುತಾ
ನೋಡಿ ಕಣ್ಗಳು ದಣಿಯುದಲೆತಾ
ಓಡುತಲಿ ಬರುವಂಥ ಜನರನು
ನೋಡಿ ನಿಲ್ಲಿಸಿ ಹರಸಿ ಜನಗಳ ಊರಗಡಿ ದಾಟೀ

೭೮

ಬಂದು ವಳಬಳ್ಳಾರಿ ಸೇರುತ
ಅಂದು ಕಳುಹಲು ಬಂದ ಭಕ್ತನ
ಒಂದು ದಿನಯಿರಪೇಳಿ ಶ್ರೀಗಳು ಮರುದಿನದಿ ಕಳುಹೀ
ಸಂದ ದಿನಗಳು ಶಿವನ ಸೇವೆಯು
ದೆಂದು ತಿಳಿಯುತ ಚನ್ನಬಸವರು
ಮುಂದೆ ವಳಬಳ್ಳಾರಿ ಮಠದಲಿ ಶಾಶ್ವತದಿನೆಲೆಸೀ

೭೯

ನಿತ್ಯದಲಿ ಬರುವಂಥ ಜನರಿಗೆ
ನಿತ್ಯದಾಸೋಹವನು ಮಾಡಿಸಿ
ಸತ್ಯ ಶುದ್ಧದ ಕಾಯಕದಿ ತಾ ಮಠದೊಳಗೆಯಿರುವಾ
ನಿತ್ಯ ಹೊಲ ಗದ್ದೆಗಳನೋಡುತ
ನಿತ್ಯಮಠದೆತ್ತುಗಳ ಪ್ರೇಮದಿ
ನಿತ್ಯ ಸೇವೆಯ ಮಾಡುವಾ ಶ್ರೀ ಚನ್ನಬಸವಗುರೂ

೮೦

ಮಠದೊಡೆಯನೆಂದುಬ್ಬಿ ನಡೆಯದೆ
ಮಠವು ಸಣ್ಣದು ಎಂದು ಕುಗ್ಗದೆ
ಮಠವು ಆಡಂಬರವು ಮಾಡದೆ ಘನಮನದಿ ಕೂಡೀ
ಮಠಗಳಿರುವುದು ಜನರಸೇವೆಗೆ
ಮಠದ ಆಸ್ತಿಗೆ ಕಟ್ಟು ಬೀಳದೆ
ಮಠವು ನಿಮ್ಮದುಯೆಂದು ಹೇಳುವ ಚನ್ನಬಸವಗುರೂ

೮೧

ತುಂಗಭದ್ರಾನದಿಯ ತೀರದಿ
ತುಂಗದಲಿ ಕಂಗೊಳಿಸಿ ಮಠವನು
ಮಂಗಳಾತ್ಮಕ ಗುರುಕೃಪೆಯುಳೊಳ ಬಳ್ಳಾರಿ ಬೆಳಗೀ
ಭಂಗ ತಾರದೆ ಮಠದ ಘನತೆಗೆ
ಅಂಗಗುಣಗಳ ನಳಿಸಿ ತನ್ನಲಿ
ಲಿಂಗಗುಣಗಳ ಬೆಳಸಿ ತಾತನು ಜಗದೊಳಗೆ ಬೆಳಗೀ

೮೨

ತನ್ನಧೀನದಲಿರುವ ಮನವದು
ತನ್ನ ಆಪ್ತನ ತೆರದಲಿರುವುದು
ತನ್ನಧೀನದಲಿರದ ಚಿತ್ತವು ತನಗೆ ಶತ್ರುವದೂ
ತನ್ನಲಿಹ ಶೀತೋಷ್ಣದೊಂದಿಗೆ
ತನ್ನಲಿಹ ಸುಖದುಃಖದೊಂದಿಗೆ
ತನ್ನಮಾನಪಮಾನದಲಿ ಆ ಚಿತ್ತ ಜಯಿಸಿಹನೂ

೮೩

ಇದುವೆ ಪರಮದ ಯೋಗಲಕ್ಷಣ
ಅದುವೆ ಪಡೆದಿಹ ಚನ್ನಬಸವರು
ಸದಯ ಹೃದಯದಿ ಸಮತೆ ಭಾವದಿ ನಿರ್ವಿಕಾರದೊಳೂ
ಪದನದಿಂದ್ರಿಯ ವೃತ್ತಿ ಹಿಡಿತದಿ
ಉದಿತ ಮಾರ್ಗದಲಿರುವತಾತನು
ಹದುಳದಿಂತಾ ಚಿತ್ತ ಶುದ್ಧಿಯ ಪರಮಶಿವಯೋಗೀ

೮೪

ಚಲಿಸುವಂತಹ ಮನವು ನಿಗ್ರಹ
ದಲಿರಿಸುತ ಆತ್ಮನಲಿನಿಲಿಸುತ
ಸುಲಭದಲಿ ವಿಷಯುಗಳ ಜಯಿಸಿಪಯೋಗಿ ನಿಶ್ಚಿಂತಾ
ಉಲುಕದಂತಹ ಚಿತ್ತಶಾಂತತೆ
ಯಲಿರುವಂಥಹ ಯೋಗಪುರುಷಗೆ
ಮಲದ ವಿಕ್ಷೇಪಗಳುಯಿರದಾ ತಾತ ಶಿವಯೋಗೀ

೮೫

ಅನಘ ಶ್ರೀಗುರು ಶಿವನರೂಪಿಯು
ಅನವರತ ಮನವನ್ನು ಯೋಗದಿ
ವಿನತಿ ಭಾವದೊಳಿರಿಸಿ ಬ್ರಹ್ಮದಸುಖವ ಪಡೆದಿಹನೂ
ಅನುಭವವು ಶಿವಯೋಗದಿಂದಲಿ
ಅನುದಿನದಿ ಸಮಚಿತ್ತ ಭಾವದಿ
ದಿನಪತೇಜಕೆ ಮಿಗಿಲುಯೆನಿಸಿಹ ಯೋಗಿತೇಜವದೂ

೮೬

ಎಲ್ಲ ಕಡೆ ಸಮದೃಷ್ಟಿಹರಿಸುತ
ಎಲ್ಲ ಭೂತಗಳಲ್ಲಿ ದಯೆಯನು
ಸಲ್ಲಲಿತ ಭಾವದಲಿ ವೀಕ್ಷಿಸಿ ಚನ್ನಬಸವಗುರೂ
ಎಲ್ಲ ಜನಗಳ ಕಷ್ಟಸುಖಗಳು
ಉಲ್ಲಸಿತದಿಂ ತನ್ನವೆಂದೇ
ಬಲ್ಲಿದದಿ ತಿಳಿದಂಥಯೋಗಿಯೆ ಶ್ರೇಷ್ಟಜಗದೊಳಗೇ

೮೭

ಪರಮ ಪಾವನ ಚನ್ನಬಸವರು
ಚರಿಸಿ ಜಗದೊಳು ಶಾಂತಿಕರುಣಿಸಿ
ಧರೆಯ ಜನಕಲ್ಯಾಣ ಬಯಸಿದ ಚರಮೂರ್ತಿಯಾಗೀ
ಧರೆಯಳೊಳಬಳ್ಳಾರಿ ಮಠದೊಳು
ಮೆರೆವ ಶ್ರೀಗುರು ಚನ್ನಬಸವರು
ಕೊರತೆಯಿರದಾ ಶಕ್ತಿ ಕರುಣಿಸಿ ಕವಿಯ ಹರಸಿಹರೂ

೮೮

ನೀವು ನುಡಿಸಿದ ನುಡಿಗಳಿಂದಲಿ
ನೀವು ತೋರಿದ ದಿವ್ಯಮಾರ್ಗದಿ
ನೀವು ತೋರಿದ ದಿವ್ಯದರ್ಶನ ಕಾವ್ಯಲೀಲೆಯಿದೂ
ಸಾವು ಹುಟ್ಟುಗಳಿಂದ ಜನಗಳು
ತಾವು ಬಳಲುತ ಸೋತು ನಿಂತರೆ
ಕಾವಶಕ್ತಿಯು ಕೊಡುವ ಪರಮನು ಚನ್ನಬಸವಗುರೂ

ಹತ್ತನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೦ ಕ್ಕಂ ಪದಗಳು ೫೦೩ ಕ್ಕಂ ಮಂಗಳಂ

# ಹನ್ನೊಂದನೆಯ ಸಂಧಿ

**ಸೂಚನೆ :**

ಅಡವಿ ಅಮರೇಶ್ವರಲಿಂಗವ
ಮೃಡರೂಪಿ ಶ್ರೀ ಚನ್ನಬಸವರು
ಪೊಡವಿಯೊಳು ಸ್ಥಾಪಿಸುತ ಜಗದೊಳು ಖ್ಯಾತಿಯನು ಪಡೆದೂ

೧

ಸಚ್ಚಿದಾನಂದ ಸ್ವರೂಪನು
ಮೆಚ್ಚಿ ಜಗದೊಳು ಲಿಂಗಗುಣಗಳು
ಹೆಚ್ಚುತನದಲಿ ಪಡೆದುಕೊಂಡಿಹ ನಮ್ಮ ಶ್ರೀ ತಾತಾ
ಬಿಚ್ಚು ನುಡಿಯಲಿ ಮಾತನಾಡುವ
ಬಿಚ್ಚು ಮನದಲಿ ಜನರ ಕೊರತೆಯ
ಅಚ್ಚುಮೆಚ್ಚಿನ ಮನದಿ ಕಳೆಯುವ ಗುರುಕೃಪೆ ಮಾಡೂ

೨

ಹೊಸವೂರು ವಿರುಪಯ್ಯ ಜೊತೆಯಲಿ
ಹೊಸತನದಿ ನರಸಯ್ಯ ಸೇರುತ
ಸಸಿನಭಾವದಿ ವೈಶ್ಯರಿಬ್ಬರು ಮಾಡ್ವ ವ್ಯಾಪಾರಾ
ಕಸರಿಕಿರದಾ ಕೋಮಟಿಗರಾ
ಹಸನದಾ ವ್ಯಾಪಾರ ಮಾಡುತ
ಮುಸಿತನದಿ ವಂಚಿಸದೆ ಜನರನು ಸರಳ ಜೀವನದೀ

೩

ಸತ್ಯ ಶುದ್ಧದ ನಡತೆ ಪಡೆದಿಹ
ನಿತ್ಯಲಾಭದ ದೃಷ್ಟಿಯಿರಸದೆ
ಪತ್ಯಭಾವದಿ ಜನರ ಶೋಷಣೆ ಮಾಡದೀ ಜನರೂ
ನಿತ್ಯದಲಿ ಹಳ್ಳಿಗಳ ತಿರುಗುತ
ನಿತ್ಯ ವ್ಯಾಪಾರವನು ಮಾಡುತ
ನಿತ್ಯ ಕಾಲ್ನಡಿಗೆಯಲಿ ನಡೆದೇ ಹೋಗಿ ಬರುತಾಗಾ

೪

ಸಮಾಜದೇಳಿಗೆಗಾಗಿ ಜನಗಳು
ಸಮಾಜದೊಳು ವಿಧವಿಧದ ವೃತ್ತಿ
ಸಮಾನದಿ ತಾ ಕೂಡಿ ವ್ಯಾಪಾರವನು ಮಾಡುತಲೀ
ಸಮಾಜದೊಳು ಬಹುಕಾಲದಿಂದ
ಸಮಾನ ದೃಷ್ಟಿಯು ಬೀರಿಜಗದ
ಸಮಾನ ಭಾವದಿ ಪರಿಸರವನೆ ಕೆಡಿಸಿ ಶೋಷಣೆಯಿಂ

೫

ಹೋಗಿ ವಿಜಯದ ನಾಮ ವರುಷದಿ
ಆಗ ಫಾಲ್ಗುಣ ಮಾಸದಂತ್ಯದಿ
ಸಾಗಿ ಬರುತಲಿ ಬ್ಯಾಗವಾಟದಿ ವರ್ತಕರು ಕೂಡೀ
ಈಗ ಅಮರೇಶ್ವರನುಯಿರುವಾ
ಆಗಿನಾ ಹಳ್ಳದಲಿ ನೀರನು
ಹೋಗಿ ಕುಡಿಯುತನೋಡಿ ಬಸವನಸಹಿತ ಲಿಂಗವನೂ

೬

ಭಿನ್ನಲಿಂಗವನೋಡಿ ಪರಿಕಿಸಿ
ಉನ್ನತಾಶಾ ಭಾವದಿಂದಲಿ
ಚನ್ನಲಿಂಗವ ತಂದು ಸ್ಥಾಪಿಸಬೇಕುಯೆನ್ನುತಲೀ
ಪನ್ನಗಾಭರಣವನು ನೆನೆಯುತ
ಯಿನ್ನು ಬಿಡದಲೆ ಮಹಾಕಾರ್ಯವ
ನನ್ನಿಯಲಿತಾ ಶಿವಾಲಯವನು ಕಟ್ಟಬೇಕೆಂದೂ

೭

ಧರೆಯ ಬಿಸಿಲಿನ ತಾಪದಿಂದಲಿ
ಬರುವ ಕಾಲ್ನಡಿಗೆಯಲಿ ಜನಗಳು
ಒರತೆ ಹಳ್ಳದ ನೀರು ಕುಡಿಯುತ ದಣಿವು ಕಳೆಯಲಿಕೇ
ಬರಿಬಯಲು ಸೀಮೆಯದುಗಿಡವಿರ
ದುರಿಬಿಸಿಲು ಬೇಗೆಯನು ಕಳೆಯಲು
ಹರನ ಮಂದಿರವೊಂದು ಕಟ್ಟಲುವರ್ತಕರು ಕೂಡೀ

೮

ಬೇಗವಾಟದ ಬಸವಣ್ಣ ತಾ
ಬಾಗಿಲಾಡದ ನರಸಯ್ಯ ನಾ
ಮಾಘಮಾಸವು ಕಳೆದು ಫಾಲ್ಗುಣ ಮಾಸದಂತ್ಯದಲೀ
ಹೋಗುತಾವಂದೇ ಮೊಸೂರಿಗೆ
ಚಾಗುತನದಲಿ ವಿಷಯ ತಿಳಿಸುತ
ದೇಗುಲದ ಬಗೆ ಹೇಳಿ ಪರ್ತಾರಾಮಣ್ಣಗಂದೂ

೯

ನಮ್ಮ ಸಂಕಲ್ಪವದು ಯೋಗ್ಯವು
ಸುಮ್ಮನಾಲೋಚಿಸಿದರಾಗದು
ಒಮ್ಮತದಿ ಹಲವರನು ಕೂಡಿಸಿ ಮಾಡ್ವಕಾರ್ಯವಿದೂ
ಉಮ್ಮಳದ ಹೊಸೂರು ಗೌಡರೇ
ನಿಮ್ಮ ನೇತೃತ್ವದಲಿ ನಡೆಯಲಿ
ನಿಮ್ಮ ಸಹಕಾರವದುಯಿದ್ದರೆ ಮಾಡಿ ಮುಗಿಸುವೆವೂ

೧೦

ಎಂದು ಹೇಳುತ ವರ್ತಕರು ತಾ
ವಂದು ಚಂದಾಹಣವ ಕೊಡುತಲಿ
ಚಂದ ಶಿವಮಂದಿರವ ಕಟ್ಟಲು ಕೂಡಿ ಮಾತಾಡೀ
ಬಂದ ಭಾಗ್ಯದಿ ಧರ್ಮಸೇವೆಗೆ
ದುಂದು ಮಾಡದೆ ತ್ಯಾಗಮಾಡುವ
ಚಂದ ಮನದಲಿ ತಿಳಿದುಗಳಿಕೆಯು ಬಳಕೆ ಮಾಡುತಲೀ

೧೧

ಸರಳ ಸುಂದರ ಶಿವನ ಮಂದಿರ
ಭರದಿ ಕಟ್ಟುತ ಭಕ್ತಿಭಾವದಿ
ಪರನಲಿಂಗದ ಜೊತೆಗೆ ಬಸವನ ಕಾಶಿಯಿಂತರಲೂ
ಪರಮಲಿಂಗಾ ಪ್ರತಿಷ್ಠಾಪನೆ
ವರಗುರುವು ಶ್ರೀ ಚನ್ನಬಸವರ
ವರದ ಹಸ್ತದಿ ನಡೆಸಬೇಕೆಂದೆಲ್ಲರಭಿಮತವೂ

೧೨

ಈ ತೆರನಲಿರುವಂಥ ಭಕ್ತರು
ಪೂತಮನದೊಳು ಶ್ರೀಗಳಲಿತಾ
ಓತುವಿಂದಲಿ ಹೋಗಿ ವಿಷಯವ ತಿಳಿಸಿ ವಿವರದಲೀ
ತಾತನವರದಕ್ಕೊಪ್ಪದಲೆ ತಾ
ಪ್ರೀತಿಯಿಂದಲಿ ಧರ್ಮತತ್ವವ
ವೀತರಾಗಿ ವಿರಕ್ತ ಪುಂಗವನಿಂತು ತಿಳಿಸಿದನೂ

೧೩

ಗುರುವು ದೀಕ್ಷಾಮೂರ್ತಿಯಾಗಿಹ
ಪರಮ ಲಿಂಗವು ಪೂಜಮೂರ್ತಿಯು
ವರದ ಜಂಗಮಭೋಗಮೂರ್ತಿಯು ಯೆಂಬನಿಯಮವದೂ
ಪರಮ ಧರ್ಮದ ವೀರಶೈವದ
ಗುರುತರದ ಹೀಗಿರುವ ವಿಷಯವ
ನೆರೆದ ಭಕ್ತರಿಗಂದು ತಿಳಿಸುತ ತಾತಪ್ರೇಮದಲೀ

೧೪

ಗುರುವು ಭೋಗಾಪುರದಲಿರುವಾ
ಪರವಿರೂಪಾಕ್ಷಸ್ವಾಮಿಯಾ
ಪುರೆಯುದಲೆ ನೀವ್ ಕರೆಸಿ ಲಿಂಗ ಪ್ರತಿಷ್ಠೆಮಾಡ್ರೆಂದೂ
ಭರದಿ ನಡೆಯುವ ನಿಮ್ಮ ಕಾರ್ಯಕೆ
ಸರಳ ಮನದಧ್ಯಕ್ಷರಾಗಿಯೆ
ಸುರುಚಿರದ ಮಹಕಾರ್ಯವನು ತಾ ನಡೆಸಲೊಪ್ಪುತಲೀ

೧೫

ವಿರತ ಗುರು ಶ್ರೀ ತಾತನೊಪ್ಪಲು
ಗುರುವಿನಾ ಸಂದೇಶದಂತೆಯೆ
ವರದ ಗುರು ಶ್ರೀ ವಿರೂಪಾಕ್ಷಸ್ವಾಮಿಯನು ಕರೆಸೀ
ಪರಮ ಲಿಂಗಾ ಪ್ರತಿಷ್ಠಾಪನೆ
ಪರಿಕರಗಳೆಲ್ಲವನು ಜೋಡಿಸಿ
ಭರದಿ ಆಗಮ ಉಕ್ತಿಯಲಿ ತಾ ಕಾರ್ಯಗಳ ನಡೆಸೀ

೧೬

ಮೂರನೇದಿನ ಶುಭಮುಹೂರ್ತದ
ಪಾರ ಮಹಿಮಾ ಲಿಂಗಸ್ಥಾಪನೆ
ವೀರಶೈವಾಚಾರದಂತೆಯೆ ನಡೆಸ್ರೆಂದ ತಾತಾ
ಭೂರಿಜನ ಸೇರಿರುವ ಸಮಯದಿ
ಮಾರಹರ ಕಳೆಯಲ್ಲಿ ಶೋಭಿಪ
ಕಾರಣಿಕ ಶ್ರೀ ತಾತನನು ಜನ ಹೀಗೆ ಕೇಳುತಲೀ

೧೭

ಘನ ಮಹಿಮದುಚಿತಾಸನದಿತಾ
ಮನವು ಶಿವಧ್ಯಾನದಲಿ ನಿಲಿಸಿಹ
ಅನುಪಮದ ಶ್ರೀ ತಾತ ಲಿಂಗಸ್ಥಾಪಿಸಲು ಕೇಳೀ
ವಿನಯದಲಿ ಬುಧಜನರು ಕೇಳುತ
ಘನ ಭಕ್ತಿಯಿಂ ಕೈಯುಮುಗಿಯುತ
ಸನಿಹದಲಿಯಿರುವಂಥ ಭೋಗಾಪುರದ ಗುರು ಸಹಿತಾ

೧೮

ಆಗಾ ಭೋಗಾಪುರದ ಸ್ವಾಮಿಯು
ಈಗ ನಡೆಯುವ ಲಿಂಗಸ್ಥಾಪನೆ
ಯೋಗಿವರ ಶಿವಯೋಗಿ ತಾತನೆ ಮಾಡಬೇಕೆನಲೂ
ಯೋಗದಾ ಘನಶಕ್ತಿಕೊರತೆಯು
ಆಗಿದೆನ್ನುತ ತಾವು ಕಿಂಕರ
ರಾಗಿ ಬಿನ್ನಹ ಮಾಡಿ ತಾತಗೆ ಹೀಗೆ ಹೇಳುತಲೀ

೧೯

ದೊಡ್ಡವರ ಕಾರ್ಯವದು ಸಣ್ಣವ
ರಡ್ಡಿ ಸಡ್ಡಿಯು ಮಾಡಬಾರದು
ದೊಡ್ಡವರು ಆಗಿರುವ ಸಿದ್ಧರೂಢರಾಕಥೆಯೂ
ದೊಡ್ಡ ಮನದಲಿ ಹೇಳಿ ತಾತಗೆ
ದೊಡ್ಡಹಳ್ಳಿ ಹೂಬಳ್ಳಿ ಬಳಿಯ
ದೊಡ್ಡ ಬಸವೇಶ್ವರನ ಜಾತ್ರೆಯ ಸಮಯದಲಿ ತಾನೂ

೨೦

ದೊಡ್ಡಬಸವೇಶ್ವರನ ಮೂರ್ತಿಗೆ
ಅಡ್ಡ ನಿಚ್ಚಣಿಗೆಯಸುಯಿಡುತಲಿ
ಅಡ್ಡಿ ಮಾಡಿಯೆ ಹತ್ತಿಬಸವನ ಮೇಲೆ ತಾಕುಳಿತೂ
ದಡ್ಡನಿವನೆಂದೆಳೆಯಿರೆನ್ನುತ
ಗಡ್ಡಹಿಡಿದೆಳೆಯುತ್ತ ಹೊಡೆಯುತ
ಮಡ್ಡಿತನ ಹೋಗ್ವಂತೆ ಹೊಡೆಯಿರಿಯೆಂದು ಜನಸೇರೀ

೨೧

ಅವರೊಳಗೆಯಿರುವಂಥ ವೃದ್ಧನು
ಸವಿನಯದಿ ಸನಿಹಕ್ಕೆ ಬರುತಲಿ
ಅವನ ಹೊಡೆಯದೆ ಬಿಡಿರಿಯೆನ್ನುತ ದೂರಕರೆದೊಯ್ದೂ
ಅವಗುಣದಿ ಹೀಗೇಕೆ ಮಾಡಿದೆ
ಬುವಿಯ ಜನ ಜಾತ್ರೆಯಲಿ ನೀನೀ
ನಿವಹದಲಿ ವ್ಯಳವಂತೆಯಾಗಲು ಕಾರಣವ ಹೇಳೂ

೨೨

ಆಗ ಸಿದ್ಧಾರೂಢ ವೃದ್ಧಗೆ
ಆಗ ಬಸವನ ಮೂರ್ತಿಯಲಿತಾ
ನಾಗ ಹೋಗಿರುವಂಥ ದೈವೀಕಲೆಯು ತಾ ತುಂಬೀ
ಆಗ ಕಲೆಯನು ತುಂಬದಿದ್ದರೆ
ಸಾಗದಾ ಜಾತ್ರೆಯದು ವರ್ಷದಿ
ಆಗ ದೈವೀ ಶಕ್ತಿಯನು ಆಹ್ವಾನಿಸಿದೆಯೆಂದೂ

೨೩

ಆಗ ವೃದ್ಧನು ಸಂತಸದಿತಾ
ನಾಗ ಕೇಳುತ ಮಾಫಿ ಜನಪರ
ವಾಗಿ ನಮಿಸುತ ಸಾಧು ಪಾದಕೆ ಸಂತಸಂಪಡುತಾ
ಜಾಗ ಮಹಿಮೆಯ ಮಾಡಬಂದಿಹ
ಜಾಗ ಜನಜಾಗೃತಿಯ ಗೊಳಿಸಿದ
ಚಾಗು ಭಲರೇ ಮಹಿಮನೆಂದೇ ವೃದ್ಧತಾ ತಿಳಿದೂ

೨೪

ಕಳುಹಿಸಿದ ಹಣ್ ಕಾಯಿಕೊಡುತಲಿ
ಇಳೆಯೊಳಧಿಕ ಪ್ರೇಮದಿಂದಲಿ
ಚಲುವ ದಿವ್ಯದ ಸಾಧುಪಾದಕೆ ನಮಿಸಿ ಮತ್ತೊಮ್ಮೇ
ಬಳಿಕ ಜನರಿಗೆ ವಿಷಯ ತಿಳಿಸುತ
ಅಲಘು ಮಹಿಮರು ಹುಚ್ಚರೆನ್ನದೆ
ಒಳಗಿನಾ ಕಣ್ಣಲ್ಲಿ ನೋಡುವ ತಿಳಿಯ ನಡೆಬೇಕೂ

೨೫

ಶಿಲೆಯೊಳಗೆ ಶಿವತತ್ವ ಕಲೆಯನು
ಹಲವು ಮಂತ್ರಗಳಿಂದ ತುಂತ್ರದಿ
ಕೆಲವು ಜನ ಸ್ಥಾಪಿಸಿದ ದೇಗುಲದೀಪ ಕಾಣದಲೇ
ಸುಲಭದೊಳಾ ಹಾಳ್ ದೇಗುಲಂ
ಗಳು ಆಗಿ ದಿಕ್ಕಿಲ್ಲದಿರುವವು
ಇಳೆಯೊಳಡವಿಯ ಲಿಂಗಸ್ಥಾಪನೆಗಾಗಿ ತಾತನೂ

೨೬

ಕೇಳಿ ಭೋಗಾಪುರದ ಶ್ರೀಗಳು
ಬಾಳಿನೊಳು ಬೆಳಕನ್ನು ಮೂಡಿಸ
ಹೇಳಿ ತಾತಗೆ ತಾವೇ ಯೋಗ್ಯರು ಎಂದು ಬಿನ್ನೈಸೀ
ವೇಳೆಯಾಗದ ಮುನ್ನ ಕೃಪೆಯನು
ತಾಳೆನೋಡಿಯೆ ಮಾಡಿರೆನ್ನುತ
ಮೇಳ ಮಾಡಿಸಿ ಸಜ್ಜುಗೊಳಿಸುತ ಲಿಂಗಸ್ಥಾಪನಗೇ

೨೭

ಪಾವನಾತ್ಮಕ ಲಿಂಗದೊಳು ತಾ
ದೇವರಾ ಕಳೆಕದಲದಿರುವಿಕೆ
ಭೂವಲಯದೊಳು ಲಿಂಗದೇವ ಪ್ರತಿಷ್ಠೆ ಕೆಲಸಕ್ಕೇ
ಭಾವಿಸಲು ನೀವ್ ಯೋಗ್ಯರೆಂದು
ನಾವೀಗ ನಿರ್ಧರಿಸಿ ಕೇಳುತ
ನೀವು ಲೀಲಾಮೂರ್ತಿಯೆನ್ನುತ ತಾತ ಕೃಪೆಗಾಗೀ

೨೮

ಶರಣ ಶಿವಯೋಗಿಗಳುಯಿರುವಾ
ಧರೆಯು ಪಾವನವೆಂದು ತಿಳಿಯುತ
ಭರದಿ ಹತ್ತಿದ ಬೆಟ್ಟ ಘನತರ ಶ್ರೀ ಪರ್ವತವಾಗೀ
ಯಿರದೆ ಸ್ವೇಚ್ಛೆಯು ಕ್ರೀಡೆಗೆಂದಾ
ಪರಿಯ ಹೊಕ್ಕಿರುವಂಥ ಜಲವದು
ಪರಮ ಪಾವನ ತೀರ್ಥವಾಗುತ ನಿರುತ ಲೀಲೆಯೊಳೂ

೨೯

ಮಾಯಿ ದೇವರ ಶತಕ ಸೂಕ್ತಿಯು
ಸಾಯದಂತಹ ಸತ್ಯಸೂಕ್ತಿಯು
ಬಾಯಿ ಮಾತಾಗಿರದೆ ಜಗದೊಳು ದೈವಪ್ರೇಮದೊಳೂ
ಆಯಿತದಿ ದೇವರನು ಒಲಿಸಿಹ
ಮಾಯೆ ಮನದಾಶೆಯನು ಗೆದ್ದಿಹ
ರಾಯ ಗುರುಶ್ರೀ ಚನ್ನಬಸವರೆ ಯೋಗ್ಯರೆನ್ನುತಲೀ

೩೦

ಮುದದಿ ಭೋಗಾಪುರದ ಶ್ರೀಗಳು
ಹದುಳದೊಳು ಜನವೃಂದ ಸಹಿತದಿ
ಸದಮಲಾಂತಃಕರುಣಿ ತಾತನ ಜಯಕಾರಮಾಡೀ
ವಿದಿತ ಕಾರ್ಯಕೆ ತಾತ ಬರುತಲಿ
ಚದುರ ಶ್ರೀಕರದಿಂದ ಹಿಡಿಯುತ
ಸದಯ ಹೃದಯದಿ ತಾತ ಕಾಸಿಯ ಲಿಂಗಸ್ಥಾಪಿಸಲೂ

೩೧

ಪರಮ ಗೋಪ್ಯದಿ ಲಿಂಗಸ್ಥಾಪಿಸಿ
ಸುರುಚಿರದ ಬಸವಣ್ಣ ಎದುರೊಳು
ಗುರುವರ ಶ್ರೀ ಚನ್ನಬಸವ ಪ್ರತಿಷ್ಠೆಯುಗದೊಳೂ
ನೆರೆದ ಗುರುಜಂಗಮರು-ಸಹಿತದಿ
ಧರೆಯ ಜನಸ್ತೋಮವದು ಹಿಗ್ಗುತ
ಗುರು ತರದ ಮಹಕಾರ್ಯವದು ತಾ ತಾತನಿಂದಾಗೀ

೩೨

ವರುಷ ಜಯನಾಮದೊಳು ಶ್ರಾವಣ
ವರದ ಶುದ್ಧದಿ ಶುಕ್ರವಾರದಿ
ಕೊರತೆಯಿಲ್ಲದೆ ಲಿಂಗಸ್ಥಾಪನೆ ಕಾರ್ಯಕ್ಕೆಗೂಡೀ
ವರಗಣಾರಾಧನೆಯು ಮಾಡಲು
ನೆರೆದ ಜನ ಸಂತೃಪ್ತಿಪಡುತಲಿ
ಧರೆಯೊಳೀ ಕ್ಷೇತ್ರವದು ಧರ್ಮದ ಕ್ಷೇತ್ರವಾಗುತಲೀ

೩೩

ಸಕಲ ಜನಗಳು ನೆರೆದ ಸಮಯದಿ
ಸಕಲರೊಪ್ಪುವ ತೆರದಿ ತಾತನು
ವಿಕಲವಿರದಿಹ ಅಡವಿ ಅಮರೇಶ್ವರನ ನಾಮದೊಳೂ
ಸುಕರದಿಂ ಕರೆಯುತ್ತ ಕ್ಷೇತ್ರಕೆ
ಸಕಲ ವೈಭವದಿಂದ ಮೆರೆಯುಲಿ
ಮುಕುತಿ ತಾಣವದಾಗಿ ಧರೆಯುಲಿಯೆಂದು ಹರಸುತಲೀ

೩೪

ನಾಮದೊಳು ನಿಜಧಾಮವಿರುವುದು
ಭೂಮ ಭೂತಿಯುಲಡವಿಗೊಡೆಯನು
ಭೂಮಲಿಂಗದಿ ಅಮರ ಈಶ್ವರನಾಗಿ ಮೆರೆಯುತಲೀ
ಕಾಮಿತಾರ್ಥವ ಕೊಡುವದೇವನು
ತಾಮಸವ ಕಳೆವಂಥದೇವನು
ಕೋಮಲದಿ ಕಂಗೊಳಿಸಿ ಜಗದೊಳು ಶಿವ ಕ್ಷೇತ್ರವಾಗೀ

೩೫

ಇದುವೆ ಜಾಗ್ರುತ ಸ್ಥಾನವಾಗಲು
ವಿದಿತ ಸದ್ಗುರು ತಾತ ಕಾರಣ
ಚದುರ ಲಿಂಗವ ಕೈಗಳಿಂದಲಿ ಲಿಂಗ ಸ್ಥಾಪಿಸಿದಾ
ಪದುಳದೊಳು ಖ್ಯಾತಿಯನು ಪಡೆಯಲು
ಸದಮಲದ ತಾತನ ಮಹತ್ವವು
ಹದನದಿಂದಲಿ ಕೂಡಿಜಗದೊಳು ಶಿವನ ತೇಜದೊಳೂ

೩೬

ಮುಂದೆ ಮನ್ಮಥವರುಷ ಚೈತ್ರದಿ
ಅಂದು ಕೃಷ್ಣ ಪಕ್ಷದ ಪಂಚಮಿ
ಯಂದು ದಿವ್ಯ ರಥೋತ್ಸವವು ನಡೆದಿಂದು ನಡೆಯುತಲೀ
ಚಂದದಾ ಜಾತ್ರೆಯೊಳು ದನಗಳು
ಬಂದು ಸೇರುತ ಪರಿಶೆಯಾಗುತ
ಬಂದ ಜನಗಳಿಗಂದು ದಾಸೋಹವನು ಮಾಡುತಲೀ

೩೭

ಇನಿತು ವಿಭವದ ಜಾತ್ರೆ ಸಮಯದ
ದಿನಗಳಲಿ ತಾ ಧರ್ಮ ಜಾಗೃತಿ
ಮನವೊಲಿದು ಶಿವಾನುಭಾವದ ಪ್ರವಚನವು ಜರುಗೀ
ತನುಮನಧನದಿಂದ ಕೂಡಿಯಾ
ದಿನ ಮೂರು ದಾಸೋಹ ನಡೆಸುವ
ಘನಮಹಿಮ ಶ್ರೀ ಚನ್ನಬಸವರು ದಿವ್ಯಕೃಪೆಯೊಳಗೇ

೩೮

ಸಕಲ ಜನಗಳಿಗ್ಹರುಷತರುವ
ಸಕಲ ಜಾತ್ರೆಗಳಲ್ಲಿಯಿರದಾ
ಸಕಲ ಮತಪಂಥಗಳ ಜಾತಿ ಶಿವಾನುಭಾವದಲೀ
ಸಕಲ ಸ್ವರ್ಗದ ಸುಖವುನಶ್ವರ
ವಿಕಲ ವಿರದಾಚಾರ ಸ್ವರ್ಗವು
ವಿಕಲ ವಿರುವಾಚಾರ ನರಕವ್ರಯೆಂದು ತಿಳಿಯುತಲೀ

೩೯

ಯೋಜನೆಯು ಯೋಚನೆಯು ಉಳಿಯದೆ
ಯೋಜನೆಯು ಪ್ರತ್ಯಕ್ಷ ರೂಪದಿ
ಯೋಜನೆಯು ಶಿವಾನುಭಾವದ ಮಂಟಪವು ಆಗೀ
ಯೋಜನೆಯು ಶಿವಯೋಗಿ ತಾತನ
ಪೂಜೆಯಾ ಫಲವೆಂದು ತಿಳಿಯುತ
ಮೋಜುರಹಿತದಿ ಭಕ್ತ ವೃಂದವು ಧನ್ಯರಾಗುತಲೀ

೪೦

ಅಡವಿ ಅಮರೇಶ್ವರಗೆ ನಿತ್ಯದಿ
ಅಡವಿಯೊಳು ಅರ್ಚನೆಯು ನಡೆಯುತ
ಅಡವಿಯೊಳು ನೈವೇದ್ಯ ಜೊತೆ ದಾಸೋಹ ನಡೆಯುತಲೀ
ಮೃಡನ ರೂಪದೊಳಿರುವ ತಾತನು
ಜಡದಜನಗಳ ಭಾವ ತೊಲಗಿಸಿ
ಒಡನೆ ಸತ್ಯದ ಶುದ್ಧಕಾಯಕ ಮಾಡುವಂತಾಗೀ

೪೧

ಪರಮ ಪಾವನ ಕ್ಷೇತ್ರದೊಡೆತನ
ಪರಮಗುರುಶ್ರೀ ತಾತಗೊಪ್ಪಿಸಿ
ವರಶೂನ್ಯ ಸಿಂಹಾಸನದಿ ಮೆರೆಸುತ್ತ ಭಕ್ತಜನಾ
ಪರಮ ಪಂಡಿತರಿಂದ ಶೋಭಿಸಿ
ಪರಮ ಕಾಯಕರಿಂದ ರಂಜಿಸಿ
ಪರಮಗುರುಶ್ರೀ ಚನ್ನಬಸವ ನಿರಂಜನದಿ ಬೆಳಗೀ

೪೨

ಮನುಜಗಿರುವಾ ಕಣ್ಗಳೆರಡರಲಿ
ಯೆನಿತು ಭೇದವುಯಿರದೆ ಜಗದಲಿ
ಮನುಜ ನೋಡುವ ನೋಟ ಒಂದೇ ಆಗಿ ಬೆಳಗುತಲೀ
ಅನುಪಮದ ಈ ಉಪಮೆಯೆಂತೆಯೆ
ಘನದ ಶ್ರೀಗುರು ವಿರತರೆಲ್ಲರು
ಸನುಮತದಿ ಸಮವಾಗಿಯಿರಲಾ ವೀರಶೈವವದೂ

೪೩

ಈತೆರನಲಾ ಭಾವದಿಂದಲಿ
ತಾತನೋಡುವ ಸಮತೆ ಭಾವದಿ
ಪೂತಚಿನ್ಮಯ ಗುರುವಿರಕ್ತರ ಐಕ್ಯದಿಂ ಕಂಡೂ
ಪ್ರೀತಿಯಿಂದಲಿ ಭಕ್ತಜನಗಳ
ಸಾತಿಶಯ ಸನ್ಮಾರ್ಗ ಹಿಡಿಸುತ
ಖ್ಯಾತಿ ಬಯುಸದೆ ಸರಳಜೀವನ ಶಿವಮಯದಿ ಕೂಡೀ

೪೪

ವೀರಶೈವರ ಧರ್ಮ ಗುರಿಯದು
ಸಾರತರ ಲಿಂಗಾಂಗ ಸಮರಸ
ಭೂರಿ ಭಕ್ತಿಯ ಭಾವದಿಂದಲಿ ಕೂಡಿ ಷಟ್‌ಸ್ಥಲದೀ
ತೋರದಿಹ ದೇವನನು ತಾವಾ
ಕಾರಣಿಕ ಲಿಂಗದಲಿ ಕಾಣುತ
ಚಾರು ಅರುಹಿನ ಕುರುಹುಯೆನ್ನುತ ಯಿಷ್ಟಲಿಂಗವನೂ

೪೫

ಗುರುವಿನಿಂ ನೆಲೆಕಲೆಯು ತಿಳಿದಿಹ
ದರಿವಿನಿಂ ಬಂದಂಥ ಅನುಭವ
ದೊರಕಿರಲು ಬರುವಂಥ ಆನಂದವನು ಅನುಭವಿಸೀ
ಸರಳ ಸತ್ಯಪ್ರೇಮ ತ್ಯಾಗದಿ
ಬರುವ ಲಿಂಗದ ಗುಣವ ಪಡೆಯುತ
ಭರಿತ ಭಕ್ತಿಯ ಭಾವದಿಂದಲಿ ಜಗದಿ ಬೆಳಗುತಲೀ

೪೬

ಗುರುಕರುಣೆಯಿಂ ಪಡೆದಲಿಂಗವ
ಕರದೊಳಗೆ ಚುಳುಕಾಗಿ ಬೆಳಗುವ
ಕರಿಯು ಕನ್ನಡಿಯೊಳಗೆ ತೋರುಪ ತೆರದಿ ತಾ ತೋರೀ
ಅರಿವು ಕ್ರಿಯೆಗಳ ಮೂರ್ತಿಯಾಗಿಹ
ಅರಿವು ಆಚಾರಗಳು ಪ್ರೇಮದಿ
ಪರಮ ನಿಜಸುಖವನ್ನು ಪಡೆಯುವ ವೀರಶೈವದಲೀ

೪೭

ಲೋಕದೊಳು ಉಪಯುಕ್ತವಾಗಿಹ
ಲೋಕದೊಳು ಬಹುಜಾತಿ ಜನಗಳ
ಏಕಭಾವದಿ ಪೂಜೆಮಾಡುವ ಸುಲಭ ಮಾರ್ಗದೊಳೂ
ನಾಕನರಕಗಳಿಲ್ಲೆಯಿರುವುವು
ಬೇಕುಬೇಡಗಳೆಂಬದರಿವಿನ
ಚಾಕಚಕ್ಯದಿ ನಡೆದು ಸತ್ಯದ ಶುದ್ಧ ಕಾಯಕದೀ

೪೮

ಜಗದಿ ಜಂಗಮುಕಳಿವು ಯಿರದಲೆ
ಜಗದಿ ಸ್ಥಾವರಕಳಿವುಯೆನ್ನುತ
ಜಗದಿ ಸ್ಥಾವರ ದುಡ್ಡುಯೆನ್ನುವ ಅರ್ಥವಾಗಿರುತಾ
ಬಗೆಯೆ ಜಂಗಮ ದುಡಿತವಾಗಿಪ
ದುಗುಡವದು ಜೀವನದೊಳಿರದಲೆ
ಸೊಗಸಿನೊಳು ತಾ ಸ್ವಾವಲಂಬನ ಜೀವನದಿ ಕೂಡೀ

೪೯

ಉಳ್ಳವರು ಮಾಡ್ವಂಥ ಕಾರ್ಯವು
ಬಲ್ಲವರ ಕೃಪೆಯೊಳಗೆ ಆಗುವ
ಸಲ್ಲಲಿತ ಶಿವಲಿಂಗ ಸ್ಥಾಪನೆ ಅಡವಿಯೊಳು ಗೈದೂ
ಎಲ್ಲ ಮತಪಂಥಗಳ ಜನಗಳು
ಅಲ್ಲಿ ಕೈಲಾಸವನು ಕಾಣುವ
ಒಳ್ಳೆಕಾರ್ಯವ ತಾತ ಕೃಪೆಯಲಿ ಮಾಡಿ ಭಕ್ತಜನಾ

೫೦

ಓಂ ನಮೋ ಅಡವೀಶದೇವನೆ
ಓಂ ನಮೋ ಅಮರೇಶ್ವರಂಶನೇ
ಓಂ ನಮೋ ಲಿಂಗಾವತಾರದಿ ಅಡವಿಯೊಳು ನೆಲಸೀ
ಓಂ ನಮೋ ಶ್ರೀ ತಾತ ವಂದಿತ
ಓಂ ನಮೋ ಶ್ರೀ ಸಕಲ ರಕ್ಷಕ
ಓಂ ನಮೋ ಅಮರೇಶ್ವರದೊಳಾಲಿಂಗ ಲಿಂಗ ಬೆಳಗುತಲೀ

ಹನ್ನೊಂದನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೧ ಕ್ಕಂ ಪದಗಳು ೫೫೩ ಕ್ಕಂ ಮಂಗಳಂ

# ಹನ್ನೆರಡನೆಯ ಸಂಧಿ

**ಸೂಚನೆ :—**

ಧರೆಯುಜನವಾಂಛಿತವ ಕರುಣಿಸಿ
ಭರದಿ ಜನರುದ್ಧರಿಸಿ ಜಗದೊಳು
ಪರಮ ಗುರು ಶ್ರೀ ಚನ್ನಬಸವ ಪವಾಡಪುರುಷಾಗೀ

೧

ಮಠಕೆ ಬರುವ ಸಮಸ್ತ ಭಕ್ತರ
ಜಟಿಲವಾದ ಸಮಸ್ಯೆ ಬಿಡಿಸುತ
ಕುಟಿಲ ಗುಣಗಳ ಕಳೆದು ತಾತನು ಮಂಗಲವ ಕೊಡು ತಾ
ಕಠಿಣ ಕರ್ಮಗಳನ್ನು ಕಳೆಯುತ
ಘಟಿತ ಕೋಟಲೆ ಕಳೆವ ಯೋಗಿಯು
ದಿಟದಿ ತಾತನು ತ್ರಿವಿಧ ದಾಸೋಹದೊಳು ಸಂತೈಸೀ

(ಪ್ರಸಂಗ -೧)

೨

ಸಿಂಧನೂರಿನ ಸನಿಹದಲ್ಲಿಹ
ಚಂದವಾದ ಹೊಸಳ್ಳಿಯೊಳಗಾ
ನಂದದಲಿ ಯಿರುವಂಥ ಪಂಪಾಪತಿಗೆ ಒಬ್ಬ ಮಗಾ
ನಂದದಲಿ ವೆಂಕಣ್ಣ ನಾಮದಿ
ಚಂದ ನವಸಂಸಾರದೊಳಗಾ
ನಂದ ಪಡೆವಾ ಸಮಯದೊಳು ತಾ ಜಾಡ್ಯ ಬಂದೊದಗೀ

೩

ನುರಿತ ವೈದ್ಯರಿಗಂದು ತೋರಿಸಿ
ಭರಿತ ದುಃಖದಿ ಪಂಪಪತಿಯಾ
ತರುಣ ಮಗನಿಗೆ ಬಂದ ಜಾಡ್ಯವು ಘೋರವಾಗಿಹುದೂ
ತೆರೆದ ಮನದಲಿ ಸಲಹೆ ಮಾಡಿದ
ಬರಿದೆ ದಿನ ಕಳೆಯದಲೆ ನೀವ್
ಕರೆದು ಒಯ್ಯಿರಿ ಮಿರ್ಜಿ ಶಹರಕೆ ಎಂದನಾವೈದ್ಯಾ

೪

ವೈದ್ಯರ್ಹೀಗಿರುವವರು ವಿರಳವು
ವೈದ್ಯರಲಿ ವಿನಯಾದಿಗುಣಗಳು
ವಿದ್ಯೆಗನುಗುಣವಾಗಿಯಿರಲದು ಶೋಭಿಪದು ಜಗದೀ
ಮದ್ಯ ಕುಡಿದಮಲಿನಲಿ ನೋಡುವ
ಮಧ್ಯದಲಿ ಶಸ್ತ್ರಗಳ ಬಿಡುತಲಿ
ಮಧ್ಯದಲಿ ಹೊಲಿಗೆಗಳು ಹಾಕಿಯೆ ರೋಗಿಯನು ಕೊಲ್ಲೀ

೫

ತಮದಗುಣ ಹಣದಾಶೆಯಿಂದಲಿ
ತಮಗೆ ಮಿಕ್ಕಿದ ಜಾಡ್ಯ ನೋಡಲು
ಅಮರಕಂಟಕರಾಗಿ ಹೆಸರನು ಕೆಡಿಸಿಕೊಳ್ಳುತಲೀ
ಸುಮನದಲಿ ಮಾರ್ಗವನು ತೋರಿಸಿ
ವಿಮಲ ಗುಣದಲಿ ವೈದ್ಯತನವನು
ಗಮನ ಗಂಭೀರದಲಿ ಮಾಡುವ ವೈದ್ಯರೇ ಶ್ರೇಷ್ಠಾ

೬

ಇರುವ ಮಗನೊಬ್ಬನಿಗೆ ಬಂದಿಹ
ದುರಿತ ಕರ್ಮದ ಫಲವು ಏನೋ
ಪಿರಿದು ಜಾಡ್ಯಕೆ ದಿಕ್ಕು ತೋಚದೆ ತಂದೆ ಮರುಗಿದನೂ
ಪರಮದೊಳ ಬಳ್ಳಾರಿ ತಾತನ
ಕರೆಸಿಕೊಂಡರು ಸಿಂಧನೂರಿಗೆ
ಶರಣನಾ ಬಾದರ್ಲಿ ವೆಂಕಟಗೌಡರಾ ಮನೆಗೇ

೭

ತಾತ ಬಂದಿಹ ಸುದ್ದಿ ತಿಳಿಯುತ
ತಾತನಲ್ಲಿಗೆ ಮಗನ ಜೊತೆಯಲಿ
ಯಾತನೆಯು ಪರಿಹಾರಕಾಗಿಯೆ ಕರೆದು ಒಯ್ಯುತಲೀ
ಭೀತ ದುಃಖದಿ ವಿಷಯ ತಿಳಿಸುತ
ಭೂತ ಹಿಡಿದವರಂತೆ ಯಿರುವಾ
ಮಾತನಾಡದೆ ಯಿರುವ ಮಗನನು ತಾತಗೊಪ್ಪಿಸುತಾ

೮

ಪುರದ ಗೌಡರ ಮನೆಯೊಳಗೆ ತಾ
ವರ ಗಣಾರಾಧನೆಯು ನಡೆಯಿತು
ನೆರೆದ ಭಕ್ತರು ಹರಪ್ರಸಾದವ ಸವಿದು ತೃಪ್ತಿಯಲೀ
ಕರೆದು ಪಂಪಾಪತಿಯ ಮಗನನು
ಶಿರವ ಮುಟ್ಟುತ ಮೈಯದಡವುತ
ಕರುಣೆ ತೋರುವ ಅಡವಿ ಅಮರೇಶ್ವರನ ಸೇವಿಸಲೂ

೯

ಎಂದು ಹೇಳುತ ತಾತನಾಗಲೆ
ಚಂದದೃಷ್ಟಿಯು ಬೀರಿ ಕರೆಯುತ
ಮುಂದಿರುವ ವೆಂಕಣ್ಣ ತಂದೆಯ ನೋಡಿ ಹೀಗೆನುತಾ
ಕುಂದು ಮಾಡದೆ ಸ್ವಾಮಿಸೇವೆಯು
ಒಂದುದಿನ ಬಿಡದಂತೆ ಪೂಜಿಸಿ
ದಂದು ನಾಲ್ವತ್ತೊಂದು ದಿನಗಳು ಪೂರ್ಣಗೊಳಿಸುತಲೀ

೧೦

ನಂಬಿ ಅಮರೇಶ್ವರನ ಸೇವೆಯು
ತುಂಬಿ ಮನದಲಿ ಮಾಡಿರೀಗಲೆ
ಇಂಬುಗೊಡುವಮರೇಶ್ವರನ ನೀವ್ ಬಿಡದರ್ಚಿಸಲೂ
ಡಂಬ ರಹಿತದ ನಿಷ್ಠೆ ಪೂಜೆಗೆ
ಮುಂಬರುವ ಸುದಿನಗಳುಯೆಲ್ಲವು
ಶಂಭುಲಿಂಗನ ಕೃಪೆಯೊಳಗೆ ತಾರೋಗ ಪರಿಹಾರಾ

೧೧

ಇದಕೆ ಸಂಶಯ ಬೇಡವೆನ್ನುತ
ಬದುಕಿನಲಿ ಬೆಳಕನ್ನು ಕಾಣುತ
ಮುದದಿ ತಾತನು ಚಿಂತೆ ಮಾಡದೆ ಹೋಗಿ ಬನ್ನೆಂದೂ
ಹದುಳದಾಶೀರ್ವಾದ ಪಡೆಯುತ
ಬದುಕಿನಾಶಾಕಿರಣ ನೋಡುತ
ಸದಯ ತಾತಗೆ ತಂದೆಮಕ್ಕಳು ಪಾದಕೊಂದಿಸುತಾ

೧೨

ಜೊತೆಯಲಿದ್ದಾ ಹಾಲ್ವಿ ಶ್ರೀಗಳು
ಮತಿಯಿರದ ವೆಂಕಣ್ಣಾಗಲೆ
ಜೊತೆಯಲಂದೇ ಮಗನ ಕೂಡಿಯೆ ಕ್ಷೇತ್ರಕ್ಕೋಗೆನುತಾ
ಸುತನಿಗೊದಗಿದ ರೋಗಹೋಗ್ವದು
ಅತನು ಹರತೇಜದಲಿ ತಾತನು
ಪತಿತರನು ಪಾವನವಗೊಳಿಸುವ ಪರಮಗುರುವಾಗೀ

೧೩

ತಮ್ಮ ಊರಿಗೆ ಬಂದು ತೆರಳುತ
ತಮ್ಮ ಸಾಮಾನುಗಳ ಜೊತೆಯಲಿ
ತಮ್ಮ ಮಗನನು ಕರೆದುಕೊಂಡೇ ಕ್ಷೇತ್ರ ಸೇರಿದರೂ
ತಮ್ಮ ನಿಷ್ಠಾ ಭಕ್ತಿಯಲಿ ತಾ
ಒಮ್ಮನದಿ ಅಮರೇಶ್ವರಗೆ ತಾ
ಕಮ್ಮಿಗೊಳಿಸದೆ ಪೂರ್ಣ ಪೂಜೆಯ ಮಾಡಿ ಮುಗಿಸಿದರೂ

೧೪

ಬಿಡದೆ ನಾಲವತ್ತೊಂದು ದಿನಗಳ
ಮೃಡಲಿಂಗ ಅಮರೇಶ ಪೂಜೆಗೆ
ಒಡನೆ ವೆಂಕಣ್ಣನಿಗೆ ಬಂದಿಹ ಜಾಡ್ಯ ಹೋಗುತಲೀ
ಗಿಡದ ತೆರಸ್ಮೃತಿಯಿರದೆಬಳಲಿ
ಪೊಡವಿಯೊಳು ಹೊಸಜನುಮ ಪಡೆದಿಹ
ಕುಡಿಯೊಡೆದು ವಂಶವನು ಬೆಳಗುವ ಮಗನ ತಾ ನೋಡೀ

೧೫

ತಾತ ಕೃಪೆ ಯಿದಕೆಲ್ಲ ಕಾರಣ
ತಾತನವರ ಹಸಾದ ವಾಣಿಯು
ಭೂತನಾಥನ ಕೃಪೆಯು ತಾತನು ತಮಗೆ ಕೃಪೆ ಮಾಡೀ
ತಾತನೇ ಭವರೋಗ ವೈದ್ಯನು
ತಾತನೇ ಅನಿಮಿತ್ತ ಬಂಧುವು
ತಾತನೇ ಪರಮಾತ್ಮನೆನ್ನುತ ಭಜಿಸಿ ಭಕ್ತಿಯಲೀ

೧೬

ಅಡವಿ ಅಮರೇಶ್ವರನ ಲಿಂಗಕೆ
ಸಡಗರದಿ ವೆಂಕಣ್ಣನಾಗಲೆ
ನಡೆಸಿ ನಾಲ್ವತ್ತೊಂದು ದಿನಗಳ ಪೂಜೆ ಮುಗಿದಂದೂ
ಪೊಡವಿಯೊಳು ಅತಿ ಪೂಜ್ಯವಾಗಿಹ
ಮೃಡಲಿಂಗ ಶ್ರೀ ಕ್ಷೇತ್ರದೊಡೆಯಗೆ
ಒಡನೆ ಮಾಡಿಸಿ ರುದ್ರದಭಿಷೇಕವನು ಕ್ರಮದೊಳೂ

೧೭

ಮುದದಿ ಶ್ರೀಗಳ ಕೃಪೆಯು ಮಗನಿಗೆ
ಮೊದಲಿನಾರೋಗ್ಯವದು ಭಾಗ್ಯವು
ಪದುಳದಿಂ ಬಂದುಳಿದು ಜಗದಲಿ ಬಾಳ ಬೆಳಕಾಗೀ
ಇದರ ವಿಷಯವ ತಾತನಿಗೆ ತಾ
ಮೊದಲು ತಿಳಿಸಲು ಮಗನ ಸಹಿತದಿ
ವಿದಿತದೊಳಬಳ್ಳಾರಿ ಕ್ಷೇತ್ರಕೆ ಬಂದು ಹರುಷದಲೀ

೧೮

ಅಂದು ಭಕ್ತರ ಹರಸುತಲಿ ತಾ
ವಂದು ಮಂಚದ ಮೇಲೆ ಮಂಡಿಸಿ
ದಂದು ವಚನಗ್ರಂಥದವಲೋಕನದಿ ಗುರುವಿರಲೂ
ಚಂದ ಶ್ರೀಗಳ ದಿವ್ಯಪಾದಕೆ
ಬಂದು ನಮಿಸುತ ಸುತನ ಸಹಿತದಿ
ಮಂದಹಾಸದಿ ವಿಷಯ ತಿಳಿಸುತ ಭಕ್ತಿಭಾವದಲೀ

೧೯

ಭಕುತ ಪಂಪಾಪತಿಯು ಮಾಡಿದ
ಭಕುತಿಯಲಿ ತಾತನಿಗೆ ಬಿನ್ನಹ
ಸಕಲ ಮನಸಲಿ ತಮ್ಮ ಊರಿಗೆ ಬಂದು ಹರಸಲಿಕೇ
ಭಕುತ ಬಿನ್ನಹಕೊಪ್ಪಿ ತಾತನು
ಭಕುತನೂರಿಗೆ ಬಂದು ತಾತನು
ಭಕುತನಾಪರಗಣಾರಾಧನೆ ನಡೆಸಿಕೊಡುತಾಗಾ

೨೦

ಶ್ರೀ ಗುರುಗಳಾ ಪಾದಕಾಣಿಕೆ
ಗಾಗಿ ಪಂಪಾಪತಿಯು ಕೂಡಲೆ
ಬಾಗಿ ಕೊಡುತ್ತಿರೆ ನೂರಾವೊಂದಾರೌಪ್ಯಗಳೆಂದೂ
ತ್ಯಾಗಿ ತಾತನು ತಾನು ಮುಟ್ಟದೆ
ಆಗ ಸಲ್ಲಿಸಿದಂಥ ಕಾಣಿಕೆ
ಈಗ ಅಮರೇಶ್ವರನ ಕಟ್ಟಡಕಾಗಿ ಸಲಿಸೆಂದೂ

೨೧

ಹಣದ ಕಾಣಿಕೆ ನೀಡಲದನನು
ಬಣಗು ಮನದಲಿ ತೆಗೆದುಕೊಳ್ಳದೆ
ಧಣಿಯ ಧನವದು ಧರ್ಮಕಾಗಿಯೆ ಸಲ್ಲಲದು ಧನ್ಯಾ
ಗುಣವು ಒಳಿತಾಗಿರಲು ಜಗದಲಿ
ಗಣನೆ ಮಾಡುತ ಗಮ್ಯಭಾವದಿ
ಮಣಿಹ ಮನ್ನಣೆ ಪಡೆವುದಾಗಲೆಯೆಂದನಾ ತಾತಾ

೨೨

ಜಂಗಮಕೆ ಧನಕೊಟ್ಟರದು ತಾ
ಮಂಗಳದ ಕಾರ್ಯಕ್ಕೆ ಸಲುವುದು
ಮಂಗಗುಣದಲಿ ಸ್ವಾರ್ಥಕುಪಯೋಗಿಸದೆ ಲೋಕದೊಳೂ
ಲಿಂಗಕ್ಕೆ ಕೊಟ್ಟಿರುವ ಮನದಲಿ
ತುಂಗ ಗುರುವಿಗೆ ತನುವಸವೆಸುತ
ಸಂಗದೊಳು ಮಬ್ಬನ್ನು ಕಳೆಯುತ ಬೆಳಗು ಮಾರ್ಗದೊಳೂ

೨೩

ನೆಟ್ಟ ಲಿಂಗವು ತಾವು ಆಗದೆ
ಕೆಟ್ಟ ಕಾರ್ಯಕೆ ಮನವು ಕೊಡದಲೆ
ಕಟ್ಟಿಕೊಂಡಿಹಲಿಂಗ ಮೆಚ್ಚಿವ ಕಾರ್ಯ ತಾ ಮಾಡೀ
ದಿಟ್ಟದಿಂ ನಡೆ ಲಿಂಗವಾಗುತ
ಹುಟ್ಟಿ ಸಾಯುವ ಜಗದ ಜನರನು
ಮುಟ್ಟಿಸುತ ತಾ ಮುಕ್ತಿ ಮಾರ್ಗಕೆ ತಾತ ತಾನಾಗೀ

೨೪

ತಾತನಾಶೀರ್ವಾದ ಪಡೆಯುತ
ಸಾತಿಶಯದಾನಂದದಿಂದಲಿ
ಕಾತುರದಿ ತಾ ತಂದೆಮಕ್ಕಳು ಹಿಂದಿರುಗಿ ಬಂದೂ
ಪೂತ ಚಿನ್ಮಯ ತಾತನು ತಾವ್
ವೀತರಾಗದೊಸಳ್ಳಿಗ್ರಾಮದಿ
ರೀತಿಯೋಳ್ ಹಬ್ಬವನು ಮಾಡುತ ತಾತನು ಕಳಿಸೀ

೨೫

ಇತ್ತ ಕೆಲ ದಿನಗಳಲಿ ತಾತನ
ಹೊತ್ತ ಹರಕೆಯು ಕೈಯಗೂಡುತ
ಮೊತ್ತದಲಿ ವೆಂಕಣ್ಣ ಸಂಸಾರದಲಿ ಸುಖಿಸುತಲೀ
ಮುತ್ತಿನಂತಹ ಪುತ್ರನುದಯಿಸಿ
ಅತ್ತೆಮಾವರು/ಸೊಸೆಯ ಪ್ರೀತಿಸಿ
ಎತ್ತಿ ಮೊಮ್ಮಗನನ್ನು ಆಡಿಸಿ ತಾತ ಕೃಪೆಯೊಳಗೇ

(ಪ್ರಸಂಗ ೨)

೨೬

ಅತಿಭಯಂಕರ ಕ್ಷಯವು ಕ್ಯಾನ್ಸ
ರತಿಶಯದ ರೋಗಗಳು ಜಗದಲಿ
ಸತಿಸುತರು ದೂರಿದ್ದು ಭಯದಲಿ ಅನ್ಯಭಾವದಲೀ
ಅತಿಬಡವರಾಹುತಿಯು ಆಗ್ವರು
ಅತಿಧನಿಕರಾಧನವು ಹಾನಿಯು
ಸತತ ಕಾಡುತ ಬಡವಬಲ್ಲಿದರೆಂಬ ಭೇದದಲೀ

೨೭

ಇದಕೆ ಘನ ಸರಕಾರ ತಾನಾ
ವಿಧವಿಧದಿ ಮಾರ್ಗದೊಳು ಪರಿಹರಿ
ಸಿದನು ಕಳೆಯಲು ಬಹಳ ಶ್ರಮದಲಿ ಯೋಜನೆ ಮಾಡೀ
ಪದುಳವಿರದಜ್ಞಾನ ಜನಗಳಿ
ಗೊದಗಿರುವ ಬಡತನವು ರೋಗವು
ಮುದದಿ ಮೂರನು ಕಳೆಯಲಾ ಸರಕಾರ ಶ್ರಮಿಸುತಾ

೨೮

ಎನಿತು ವಿಜ್ಞಾನದಲಿ ಶ್ರಮಿಸಲು
ಎನಿತು ದುಡ್ಡಿನಪಾರಖರ್ಚಲಿ
ಅನುಭವನಾಯಕರ ಶ್ರಮಕದು ಪೂರ್ಣಫಲವಿರದೇ
ಘನಗುರು ಶಿವಯೋಗ ಪ್ರಭೆಯೊಳು
ಅನುಭವವು ಶಿವಭಾವದೊಳಗಿಹ
ಜನರಿಗೊದಗಿದ ರೋಗರುಜಿನಗಳಿರದೆ ಕೃಪೆಯೊಳಗೇ

೨೯

ಇದಕೆ ಸಂಬಂಧಿಸಿದ ಕಥೆಯನು
ಅದರ ಪರಿಚಯ ಪೂರ್ಣ ಹೇಳುತ
ಅದಕೆ ತುತ್ತಾಗಿರುವ ಭಕ್ತನ ರೀತಿಯನು ತಿಳಿಸೀ
ಪದಕೆರಗಿ ಸೋತಿರುವ ಭಕ್ತರಿ
ಗೊದಗಿರುವ ರೋಗಗಳು ಹೋಗುತ
ಸದುಗತಿಯು ಶಿವಯೋಗಿ ದೃಷ್ಟಿಯಲಾಗಿ ಜಗದೊಳಗೇ

೩೦

ಮಾನವೀ ತಾಲೂಕಿನೊಳಗಿಹ
ಭಾನದಮರಾವತಿಯಗ್ರಾಮದ
ಆನುವಂಶದ ಸಿದ್ಧರಾಮಪ್ಪೆಂಬ ಧನಿಕಿರಲೂ
ಹೀನದಶೆಯಲಿ ಕ್ಷಯದ ರೋಗ
ನ್ಯೂನದಿಂ ಕಾಡುತಲಿ ಧನಿಕನ
ಮಾನಸಿಕ ವ್ಯಥೆಗೀಡು ಮಾಡುತ ರೋಗ ಹೆಚ್ಚಿಸೀ

೩೧

ಧನಿಕನಾ ಧನ ಖರ್ಚು ಆದರು
ಎನಿತು ರೋಗವು ಕಡಿಮೆಯಾಗದೆ
ಘನ ವೈದ್ಯದಿಂ ನೋಡಿದರು ತಾ ಗುಣವಾಗದಲೇ
ದಿನದಿನಕೆ ಹೆಚ್ಚುತಲಿ ರೋಗವು
ಮನಕೆ ನೆಮ್ಮದಿ ನೀಡದಲೆ ತಾ
ಅನವರತ ಕಾಡಿತ್ತು ಧನಿಕನ ಧೈರ್ಯ ಕುಗ್ಗಿಸುತಾ

೩೨

ದಾನ ಜಪಹೋಮಗಳು ಆದರು
ಮಾನಸಿಕ ಶಾಂತಿಯದು ಸಿಗದಲೆ
ದೀನಮನ ವ್ಯಸನದೊಳು ಭ್ರಮಣೆಯು ಧನಿಕಗಾಗೀ
ಏನು ಕೆಟ್ಟರು ಕೆಡಲಿ ಜಗದಲಿ
ಮಾನವನ ಮತಿ ಕೆಡದೆ ಇಳೆಯೊಳು
ಸಾನುರಾಗದಿ ಮತಿಗೆ ಮಂಗಳ ಪಡೆದಾತ ಧನ್ಯಾ

೩೩

ಎನಿತು ಸಂಪತ್ತಿದ್ದರೇನದು
ಅನಿಶದಿಂ ಆರೋಗ್ಯವಿರದಿರೆ
ದಿನವು ಸಾಯುತ ಹುಟ್ಟಿ ಬರುತಲಿ ಬಾಳುಗೋಳಾಗೀ
ಧನಿಕ ಸಿದ್ರಾಮಪ್ಪ ಮನೆಗಾ
ಜನರು ಬರುತಲಿ ಮಾತನಾಡಿಸಿ
ಘನದ ವಳಬಳ್ಳಾರಿ ತಾತನ ಮಠಕೆ ಹೋಗ್ರೆಂದೂ

೩೪

ಹೇಳಿದಾ ಜನಮನದ ಮಾತಿಗೆ
ಬಾಳಿ ಬದುಕುವ ಮಾರ್ಗ ಹುಡುಕುತ
ಕಾಳರಾತ್ರಿಯ ದಿನದಿ ಕನಸನು ಕಂಡ ಧನಿಕಾಗಾ
ಕೋಳಿ ಕೂಗುವ ಸಮಯದಲಿತಾ
ಏಳಿಗೆಯ ಶುಭ ಕಿರಣದುದಯದಿ
ಹೇಳಲನುಪಮ ತಾತದರ್ಶನ ಧನಿಕನಿಗೆ ಲಭಿಸೀ

೩೫

ಸಹಜ ಸುಂದರ ಸ್ವಪ್ನಸಂಗತಿ
ಅಹಿಧರನ ಕೃಪೆಯಲಿ ಕಾಣುತ
ಮಹಿಮ ಶ್ರೀಗುರು ತಾತನನು ಕಾಣಲಿಕೆ ಹಾತೊರೆದೂ
ತಹ ತಹದ ಮನದಿಂದ ಧನಿಕನು
ವಿಹಿತ ಮಾರ್ಗದಿ ತಾತನಲ್ಲಿಗೆ
ಸಹಿತ ಸ್ನೇಹಿತರನ್ನು ಕೂಡಿಯೆ ಬಂದ ದರ್ಶನಕೇ

೩೬

ತಾತ ಸಂಗತಿ ತಿಳಿದ ನಂತರ
ಓತುವಿಂದಲಿ ಹರಸುತಲಿ ತಾ
ತಾತ ಅಮರೇಶ್ವರನ ಪೂಜಿಸಲೆಂದು ಧನಿಕನಿಗೇ
ಈ ತೆರದಿ ಹೇಳುತ್ತ ತಾತನು
ಭೀತಿಯನು ಬದಿಗೊತ್ತಿ ಭಕ್ತಿಯ
ಸಾತಿಶಯದಲಿ ಎರಡುವರೆ ತಿಂಗಳನು ಕಳೆಯೆಂದೂ

೩೭

ಹೀಗೆ ಮಾಡಲು ಕ್ಷಯವು ನಶಿಸಿ
ಹೋಗುವುದು ಜೊತೆಯಲ್ಲಿ ಭ್ರಮಣ
ರೋಗವೆರಡರ ನಿವಾರಣೆಯಲಿ ಕೃಪೆಯು ಆಗುವುದೂ
ಯೋಗ ಮುಖದಲಿ ತಾತಹರಸುತ
ಆಗ ವಂದಿಸಿದಂಥ ಧನಿಕಗೆ
ಹೋಗೆಂದು ಅಮರೇಶ ಕ್ಷೇತ್ರಕೆ ಹೇಳಿಕಳುಹಿಸೀ

೩೮

ಸಿದ್ಧರಾಮಪ್ಪೆಂಬ ಧನಿಕನು
ಶುದ್ಧ ಮನದಲಿ ಕ್ಷೇತ್ರದೊಳಗೆ
ಇದ್ದಡವಿ ಅಮರೇಶ್ವರನವೊಲುಮೆಗೆ ಪೂಜೆ ಮಾಡೀ
ಬುದ್ಧಿ ಭ್ರಮಣೆಯ ಜೊತೆಗೆ ಕ್ಷಯವು
ಸದ್ದು ಗದ್ದಲ ಮಾಡದಲೆ ತಾ
ವಿದ್ದ ಸ್ಥಳವನು ಖಾಲಿ ಮಾಡುತ ಧನಿಕನನು ಬಿಟ್ಟೂ

೩೯

ಗೆದ್ದಮನ ಹರುಷದಲಿ ಧನಿಕನು
ಯಿದ್ದ ಕ್ಷೇತ್ರದ ಮಹಿಮೆ ತಿಳಿಯುತ
ಸಿದ್ಧಪುರುಷನು ಯೋಗಿ ಪುಂಗವನೆಂದ ತಾತನನೂ
ಸಿದ್ಧದೌಷಧಗಳಿಗೆ ಹೋಗದೆ
ಯಿದ್ದ ರೋಗ ನಿವಾರಣೆಗೆ ತಾ
ಬದ್ಧ ಕಂಕಣ ಪೂಜೆಯಿಂದಲಿ ಮರಳಿ ಹುಟ್ಟುತಲೀ

೪೦

ಹೊಸ ಜನುಮ ಪಡೆದಂಥ ಧನಿಕನು
ಹೊಸ ಹುರುಪಿನಿಂ ತಾತನಲ್ಲಿಗೆ
ಹೊಸ ವಿಷಯವೆಲ್ಲವನು ತಿಳಿಸುವ ಕಾತುರದಿ ಹೋಗೀ
ಶಶಿಧರನ ಕಳೆಯಲ್ಲಿ ಶೋಭಿಪ
ಪಶುಪತಿಯ ಯೋಗದೊಳು ಮೆರೆಯುವ
ವಸುಧೆಯೊಳು ಖ್ಯಾತಿಯನು ಪಡೆದಿಹ ತಾತನಿಗೆ ನಮಿಸೀ

೪೧

ನಿಮ್ಮ ಕೃಪೆಯಲಿ ಬದುಕಿಬಂದೆನು
ನಿಮ್ಮ ಕೃಪೆ ಹೊಸ ಜನುಮ ಕೊಟ್ಟಿತು
ನಿಮ್ಮ ದಿವ್ಯ ಪ್ರಸಾದ ವಾಣಿಯು ಋತುಸತ್ಯವಾಗೀ
ನಿಮ್ಮನೋಟದನಂತಸುಖವಾ
ನಿಮ್ಮ ಕೂಟವು ಪರಮ ಸುಖವಾ
ನಿಮ್ಮ ಶ್ರೀಕರ ಪಾದಸ್ಪರ್ಶದಿ ಧನ್ಯತೆಯ ಪಡೆದೂ

೪೨

ಧನಿಕನಾ ಹೊಗಳಿಕೆಗೆ ಹಿಗ್ಗದೆ
ಧನಿಕನಾ ಪರಿವರ್ತನೆಗೆ ತಾ
ಘನಮನದಿ ನುಡಿಯುತ್ತಯೆಲ್ಲವು ಶಿವನಕೃಪೆಯೆಂದೂ
ಚಿನುಮಯಾತ್ಮಕನಾದ ತಾತನು
ಅನುಭವದ ಮಾತನ್ನು ಹೇಳುತ
ಬಿನದಿಲೀಲೆಯ ಮಾಡುತಲಿ ತಾ ಹರಸಿ ಧನಿಕನನೂ

೪೩

ಹರಸಿ ಕೊಂಡಿಹ ಧನಿಕನಾಗಲೆ
ಹರುಷದಾವೇಶದಲಿ ಭಕ್ತಿಯ
ಕರಗಳಂ ಜೋಡಿಸಂತ ಕಾಣಿಕೆ ವಿಷಯ ತಿಳಿಸುತಲೀ
ಗುರುವರಗೆ ನಾಲ್ಕೆಕರೆ ಭೂಮಿಯು
ಸರಳ ಮನದಲಿ ದಾನಕೊಡುವಾ
ಪರಿಯ ತಿಳಿಸುತ ತಾತ ಸನ್ನಿಧಿಯಲ್ಲಿ ತಾ ನಿಂತೂ

೪೪

ನೀವು ಕೊಡುವಾ ಭೂಮಿಯಿಂದಲಿ
ಯಾವ ಪುರುಷಾರ್ಥವದು ಆಗ್ವದು
ನಾವು ಮಠಕಿರುವಂಥ ಭೂಮಿಯು ನೋಡಿದರೆ ಸಾಕೂ
ನಾವು ಸಂಸಾರಿಗಳು ಆಗದೆ
ನಾವು ಸಹಜದಿ ವಿರತರಾಗುತ
ನಾವು ಮಠದಲಿ ತ್ರಿವಿಧ ದಾಸೋಹವನು ನಡೆಸುತಾ

೪೫

ಜನರ ಬಾಳಿಗೆ ಬೆಳಕ ನೀಡುತ
ಜನರಿಗಿರುವಾತಮವ ಕಳೆಯುತ
ಜನರು ಬದುಕುವ ಬಾಳಿನರ್ಥವು ಸಾರ್ಥಕವ ಮಾಡೀ
ಜನರ ಯೋಗಕ್ಷೇಮವೇ ತಾ
ದಿನದಿ ಹರಸುತ ಹರನ ಯೋಗದಿ
ಅನುಪಮದ ಶಿವಯೋಗೀ ಪುಂಗವರಾಗಿ ಜಗದೊಳಗೇ

೪೬

ಇದ್ದುಯಿಲ್ಲದೆ ನೀರು ಕಮಲದಿ
ಇದ್ದು ಜನಹಿತಕಾಗಿ ಬಾಳುತ
ಸದ್ದುಗದ್ದಲ ಮಾಡಿಕೊಳ್ಳದೆ ಮಠದೊಳಗೆಯಿರುತಾ
ಶುದ್ಧ ಸತ್ಯದ ಕಾಯಕವತಾ
ವಿದ್ದು ನಡೆಸುತ ವಿರತಿ ಭಾವದಿ
ಗೆದ್ದು ಮನದಿ ಮಹಂತರಾಗುತ ಜಗದೊಳಗೆ ಬೆಳಗೀ

೪೭.

ಹೀಗೆನಗೆ ಮುಖದೊಳಗೆ ಹೇಳುತ
ರೋಗ ಪರಿಹಾರವನು ಮಾಡಿದ
ಯೋಗ ಶಿವಯೋಗದಲಿರಮಿಸುವ ತಾತನನು ನೋಡೀ
ಬಾಗಿಬೇಡುತ ನಿರಾಭಾರಿಯು
ಆಗಿ ಜನತಾ ಸೇವೆ ಮಾಡುವು
ದಾಗಿ ವಸುಧೈವದ ಕುಟುಂಬಿಯು ತಾತನೆನ್ನುತಲೀ

೪೮

ಸಂತನಾದ ವಿನೋಬಭಾವೆಯು
ಸಂತಸದಿ ಭೂದಾನ ಕಾರ್ಯವ
ನಿಂತು ನಿರ್ವಹಿಸುತಲಿ ಜಗದಲಿ ಸ್ವಾರ್ಥರಹಿತದಲೀ
ಇಂತು ಹೇಳಿದ ಧನಿಕ ತಾತಗೆ
ಶಾಂತಿ ಕರುಣಿಸಿದಂಥ ತಾತಗೆ
ಅಂತು ಒಪ್ಪಿಸಿ ಭೂಮಿಯನು ದಾಸೋಹಮತಕಾಗಾ

೪೯

ತನ್ನ ಉದ್ಧಾರವನು ಮಾಡಿದ
ಉನ್ನತೋನ್ನತ ಸಿದ್ಧಪುರುಷರು
ತನ್ನ ವಿಜ್ಞಾಪನೆಯ ಮನ್ನಿಸಿದಾಗ ಸಂತಸದೀ
ಬನ್ನ ತೊಲಗಿಸಿಕೊಂಡ ಧನಿಕನು
ಚನ್ನಬಸವಸ್ವಾಮಿ ಕೃಪೆಯಲಿ
ಚನ್ನ ಸಂಸಾರದಲಿ ಸುಖಿಸಿದ ಸಿದ್ಧರಾಮಪ್ಪಾ

೫೦

ಧರೆಯೊಳಗೆ ಸತಿಸುತರು ಸಹಿತದಿ
ಧರೆಯೊಳಗೆ ಧನಧಾನ್ಯದಾದಿಯ
ಪರಿ ಪರಿಯ ಮೋಹದಲಿ ಹುಚ್ಚರು ಆಗಿ ಜಗದೊಳಗೇ
ಪರಮದೇವೋನ್ಮಾದ ಹೆಚ್ಚುವ
ಪರಿಯ ತಿಳಿಸುತ ಪಾರಮಾರ್ಥಕೆ
ತಿರುಗಿಸುವ ಮಹದಿವ್ಯದರ್ಶಿಯು ನಮ್ಮ ಈ ತಾತಾ

೫೧

ಘನ ವಿರಾಗದ ಚನ್ನಬಸವರ
ಚಿನುಮಯಾತ್ಮಕ ಚರಿತೆ ಬರೆಯುವ
ಘನಮನದ ಮಹಶಕ್ತಿ ಕರುಣಿಸು ವೀರಭದ್ರಗುರೂ
ಮನಕೆವೊಪ್ಪಿರುವಂಥ ವಿಷಯವ
ಜನಕೆ ತಿಳಿಸುವ ಮಹದ ಚೇತನ
ಅನುದಿನದ ಕೃಪೆಗಾಗಿ ಬೇಡುವೆ ಚನ್ನಬಸವರನೂ

(ಪ್ರಸಂಗ ೩)

೫೨

ಮತ್ತೆ ಒಂದು ಪ್ರಸಂಗದೊಳಗೆ
ಕುತ್ತು ಕಣ್ಣಿಗೆ ಬಂದ ಭಕ್ತಗೆ
ಇತ್ತು ಕಣ್ಣಿಗೆ ದೃಷ್ಟಿಶಕ್ತಿಯು ನಮ್ಮ ಈ ತಾತಾ
ಮೊತ್ತದಲಿ ಲೋಕದಲಿ ಕುರುಡರು
ಎತ್ತನೋಡಿದಡತ್ತಯಿದ್ದರು
ಮೊತ್ತದಲಿ ಮೂರ್ವಿಧವು ಜಗದೊಳು ಈ ತೆರದಿಯಿದ್ದೂ

೫೩

ಹುಟ್ಟುಗುರುಡರು ಒಂದು ತೆರನಲಿ
ಕೆಟ್ಟು ಕುರುಡರು ಇತರ ತೆರನಲಿ
ಒಟ್ಟಿನಲಿ ಕಣ್ಣಿದ್ದು ಕುರುಡರು ಸೇರಿ ಮೂರೆನಿಸೀ
ಹುಟ್ಟುಗುರುಡರ ಕೆಟ್ಟು ಕುರುಡರ
ಗೆಟ್ಟಿಗೆನೆ ಮಾಡ್ಬಹುದು ಜಗದಲಿ
ದಿಟ್ಟ ಕಣ್ಗಳ ಕುರುಡುತನವನು ಕಳೆಯಲತಿಕಷ್ಟಾ

೫೪

ಜಗದ ಜನರಿಗೆ ಕಣ್ಗಳಿದ್ದರು
ಜಗದಿ ಕಾಮಾಸಕ್ತಿ ನೋಟವು
ಜಗಕೆ ಚಲುವನು ಕೊಟ್ಟ ಈಶನ ಮರೆತು ಕಾಮದೊಳೂ
ಬಗೆಬಗೆಯ ಭಾವದಲಿ ಸ್ತ್ರೀಯರ
ಬಗೆಯು ಸೌಂದರ್ಯವನು ನೋಡುತ
ಜಗದಿ ಕಾಮಿಗಳಾಡಿ ತಾ ಕಣ್ಣಿದ್ದು ಕುರುಡಾಗಿ

೫೫

ಧರೆಯ ಕೊಟ್ನೆಕಲ್ಲು ಗ್ರಾಮದೊ
ಳಿರುವ ಶಿವಕಾಂತಪ್ಪ ಭಕ್ತರಿಗೆ
ಯೆರಡು ಕಣ್ಗಳು ಕಾರಣಾಂತರದಿಂದ ಕುರುಡಾಗೀ
ಪರಿಪರಿಯ ಪುರಗಳನು ತಿರುಗುತ
ಪಿರಿದು ಪಟ್ಟಣ ಬೆಂಗಳೂರಿಗೆ
ಮರಳಿ ಯತ್ನದಿ ಹೋಗಿ ವೈದ್ಯಚಿಕಿತ್ಸೆ ಮಾಡಿದರೂ

೫೬

ಫಲವು ಕೊಡದಲೆ ಗುಣವು ಆಗದೆ
ಹಲವು ತೆರನಲಿ ದುಃಖಿಯಾಗುತ
ಜಲುವು ಜಗದೊಳು ಕಾಣದಲೆ ತಾ ಅಂಧಕನು ಆಗೀ
ಬಳಿಕ ಏನ್ಮಾಡ್ಬೇಕುಯೆನ್ನುತ
ನಲಿವು ಜೀವನದಲ್ಲಿ ಸಿಗದಲೆ
ಅಲಘು ಶ್ರೀಗುರು ಚನ್ನಬಸವಸ್ವಾಮಿ ಮೊರೆಹೊಕ್ಕೂ

೫೭

ಆರುಮುಗಿದೇಳನೆಯ ಯತ್ನವು
ಆರು ಪರಿಹರಿಸದಲೆಯಿರುವೀ
ಘೋರ ಕಣ್ಕುತ್ತನ್ನು ಕಳೆಯುವ ಕಣ್ಮಣಿಯ ಹುಡುಕೀ
ಭೂರಿ ಗುರುವನು ಪ್ರಾರ್ಥಿಸುತಲಿ
ಭಾರಿ ದುಃಖದಿಯೆಲ್ಲ ಹೇಳುತ
ಬೇರೆ ದಾರಿಯು ಕಾಣದಲಿ ತಾ ದೈವ ಸನ್ನಿಧಿಯೋಳ್

೫೮

ಆಗ ಶ್ರೀಗುರು ಚನ್ನಬಸವರು
ಯೋಗದೃಷ್ಟಿಯಲಿಂದ ಪರಿಕಿಸಿ
ಬೇಗದಿಂ ಮುಕ್ಕಣ್ಣನನ್ನೇ ಮೊರೆಯು ಹೋಗೆನುತಾ
ಹೀಗೆ ಹೇಳಿದ ಮಾತು ಕೇಳಿದ
ನಾಗ ಶಿವಕಾಂತಪ್ಪ ತಾತಗೆ
ಹೇಗೆ ಕಾಣುವ ಕಾಣದಿಹ ಮುಕ್ಕಣ್ಣ ಜಗದೊಳಗೇ

೫೯

ಧರೆಯೊಳಗೆ ಕಾಣಸದೆಯಿರುವಾ
ಪರಿಯು ಮುಕ್ಕಣ್ಣನಲಿ ನಂಬುಗೆ
ಯಿರದ ತನ್ನಾ ತಾತನನೆ ಮುಕ್ಕಣ್ಣನೆನ್ನುತಲೀ
ಗುರುತರದಿ ಭಕ್ತಿಯಲಿ ಬೇಡುತ
ಚರಣಕೆರಗುತ ಕೈಯು ಜೋಡಿಸಿ
ಪೊರೆಯು ಬೇಕೆಂದಾಗ ಭಕ್ತನು ವಿನಯದಿಂಕೇಳೀ

೬೦

ಅಡವಿ ಅಮರೇಶ್ವರನ ಸನ್ನಿಧಿ
ಗೊಡನೆ ಹೋಗಿಯೆ ಮೂರು ತಿಂಗಳು
ಬಿಡದೆ ಭಕ್ತಿಯು ಭಾವದಿಂದಲಿ ಪೂಜಿಸೆನ್ನುತಲೀ
ಮೃಡನ ಕೃಪೆಯದು ನಿನಗೆ ಆಗ್ವದು
ನಡೆಯು ಸತ್ಯದಲಿರುವ ಭಕ್ತಗೆ
ಕೊಡುವ ಕಣ್ಗಳು ಎಂದ ತಾತನು ಭಕ್ತನಿಗೆ ಹರಸೀ

೬೧

ಒಳಿತು ತಾತನ ಆಜ್ಞೆಯಂತೆಯೆ
ಬಳಿಕ ಶಿವಕಾಂತಪ್ಪನಾಗಲೆ
ತಿಳಿಮನದಿ ತಮ್ಮವರ ಜೊತೆಯಲಿ ಕ್ಷೇತ್ರ ಸೇರುತಲೀ
ಬಳಲಿ ಬಂದಾ ಎಲ್ಲಭಕ್ತರ
ಬಳಲಿಕೆಯು ತಾ ಕಳೆವ ಈಶನು
ತೊಳಗಿ ಬೆಳಗುವ ಅಡವಿ ಅಮರೇಶ್ವರನು ಜಗದೊಳಗೇ

೬೨

ಮೂರು ತಿಂಗಳು ಸಕ್ರಮದಿ ತಾ
ಚಾರು ಲಿಂಗವ ಪೂಜೆ ಮಾಡುತ
ಪಾರ ವಶ್ಯದಿ ಭಕ್ತ ಶಿವಕಾಂತಪ್ಪ ಕ್ಷೇತ್ರದೊಳೂ
ಭೂರಿ ಲಿಂಗದ ಶಕ್ತಿ ಕಿರಣವು
ಬೀರುತಲಿತಾ ಭಕ್ತ ಕಣ್ಗಳ
ಸೇರಿ ಶಿವಕಾಂತಪ್ಪನಂಧತ್ವವನು ಕಳೆಯುತಲೀ

೬೩

ಆಗ ಶಿವಕಾಂತಪ್ಪ ಹರ್ಷದಿ
ಸಾಗಿ ಹೋಗುತ ತಾತನಲ್ಲಿಗೆ
ಬೇಗದಿಂ ವಿಷಯವನು ತಿಳಿಸುತ ಪಾದಕೊಂದಿಸುತಾ
ತ್ಯಾಗ ಬುದ್ಧಿಯು ಭಕ್ತಿ ಭಾವದಿ
ಭೋಗ ಭೂಮಿಯ ಎಂಟು ಎಕರೆಯ
ಯೋಗಿ ಶ್ರೀಗುರು ಚನ್ನಬಸವರಿಗರ್ಪಿಸುತ ಮುದದೀ

೬೪

ಗುರುಗಳಾ ವರ ದಿವ್ಯದೃಷ್ಟಿಯು
ಗುರುಗಳಾವರ ಸತ್ಯವಾಕ್ಯಕೆ
ಗುರುಗಳಾವರ ದಿವ್ಯ ಹಸ್ತದಿ ಪಾವನವು ಆಗೀ
ಗುರುಗಳಾ ಸಮ್ಮುಖದಿ ತಾನಾ
ವರಗಣಾರಾಧನೆಯು ಮಾಡಿದ
ಧರೆಯೊಳಗೆ ಶ್ರೀ ತಾತನವರಾಮಹಿಮೆ ಬೆಳಗುತಲೀ

೬೫

(ಪ್ರಸಂಗ ೪) ಸಂಸ್ಮರಣೆ

ಜಗದೊಳಗೆ ವಾದವನು ಮಾಡಲು
ಹಗೆತನದಿ ಬೆಂಕಿಯದು ಮೂಡದೆ
ಸೊಗಸಿನಲಿ ಬೆಳಕದುವೆ ಮೂಡಲು ಸಾರ್ಥವುಯೆನಿಸೀ
ಗಗನಮಣಿಯಂತಿರುವ ಗುರುವನು
ಸುಗತಿ ಪಥವನು ತೋರ್ವಗುರುವನು
ಸುಗಮದಲಿ ಸೇವೆಯನು ಮಾಡಿಯ ಸದ್ಗತಿಯು ಹೊಂದೀ

೬೬

ಪರಮ ಗುರುವೆ ಶಿವಸ್ವರೂಪನು
ಕರುಣ ಚಿತ್ಕಲೆ ಮೂರ್ತಿಯೆನಿಸಿಹ
ವರದ ಹಸ್ತದಿ ಅಭಯ ಕೊಡುತಲಿ ತತ್ವಬೋಧಿಸುತಾ
ಗುರುವೆ ಲಿಂಗವು ಜಂಗಮವು ತಾ
ಧರೆಯೊಳಗೆ ಸಹಜದಲಿ ಪೂಜಿಸಿ
ಸರಳದಲಿ ಸಂಬಂಧದಾಚರಣೆಯನು ಮಾಡುತಲೀ

೬೭

ಗುರುವು ಶಿಷ್ಯರ ಮಧ್ಯದೊಳಗಾ
ಅರುಹಿನಾ ಕುರುಹನ್ನು ತಿಳಿಯುವ
ನಿರತಿಶಯದಲಿ ಸಂವಿದಾತ್ಮನ ತಿಳಿವ ತವಕದಲೀ
ತಿರೆಯೊಳಗೆ ನಿಜ ತತ್ವ ಹೇಳುವ
ಕುರಿತು ಗುರುವಾಗಿರದೆ ತಾನಾ
ಅರಿತು ಅನುಭಾವದಲಿ ಗುರುಪಾಜ್ಞಾನದಾಸೋಹೀ

೬೮

ಚಾರು ಮೂರುತಿ ಚರವರೇಣ್ಯರು
ಕಾರಣಾಂತರದಿಂದ ಚಾಗಿಗೆ
ಓರೆಕೋರೆಗಳನ್ನು ತಿದ್ದಲು ಹೋಗಿ ಮಠದೊಳಗೇ
ಪೂರಪರ ತೇಜದಲಿ ಬೆಳಗುವ
ಘೋರ ಪಾಪದಿ ಬೆಂದಜನಗಳ
ಪಾರುಗಾಣಿಸಿ ಪರಮ ಸುಖವನು ಕೊಡುವ ಶ್ರೀ ತಾತಾ

೬೯

ಊರು ಗುರುಗಳ ಜೊತೆಗೆವಾದವ
ತೋರಿ ಲಿಂಗಣ್ಣೆಂಬ ಭಕ್ತನು
ತೀರಿ ಹೋಗಿರುವಂಥ ಮಕ್ಕಳ ನೆವನವನು ಹೂಡೀ
ಸಾರಿ ಹೋಗದೆ ಎಂದು ಕರೆಯದೆ
ಜಾರಿಕೊಳ್ಳುತ ನಡೆಯುತಪ್ಪುತ
ತೂರಿ ಬಿಡುತಲಿ ಹಬ್ಬಹುಣ್ಣಿಮೆ ಮಾಡದಲೆ ತಾನೂ

೭೦

ವರುಷ ಪದ್ಧತಿಯಂತೆ ಮಾಡುವ
ಪರುಷದಲಿ ತಾ ಗಣಾರಾಧನೆ
ಮೂರು ವರುಷದಿಂ ನಿಲ್ಲಿಸಿದ ಲಿಂಗಣ್ಣೆಂಬ ಭಕ್ತಾಗಾ
ವರಮಹಾ ಶಿವರಾತ್ರಿ ದಿನದಲಿ
ಗುರುಗಣಾರಾಧನೆಯು ಮಾಡದೆ
ಗುರುವಿಗೆರಡನು ಬಗೆದು ನಿಲ್ಲಿಸಿದಾಗ ಲಿಂಗಣ್ಣಾ

೭೧

ಇದರ ವಿಷಯವ ತಿಳಿದ ಶ್ರೀಗಳು
ಸದಯ ಹೃದಯದಿ ಕರೆಸುತಲಿತಾ
ಪದುಳದಿಂ ಭಕ್ತಗೆ ಮಾರ್ಗ ತೋರಿಸುತಾ
ಒದಗಿ ಬಂದಿಹ ದುಃಖ ಕಳೆಯಲು
ಮುದದಿ ಗುರುಗಳ ಮತ್ತೆ ಕರೆಯಲು
ಸುದಿನಗಳು ಬಂದಾಗ ಮಗನೊಬ್ಬಾತ ಹುಟ್ಟುವನೂ

೭೨

ಎಂದು ಹೇಳುತ ಶ್ರೀಗಳಾಗಲೆ
ಚಂದದಿಂ ಭಾಷೆಯನುಕೊಡುತಲಿ
ಮುಂದಿನಾ ಭವಿಷತ್ತು ಹೇಳುತ ತಾತ ಸಂತೈಸೀ
ಹಿಂದೆ ನಡೆದಿರುವಂಥ ಘಟನೆಯ
ಅಂದೆ ಲಿಂಗಣ್ಣೆಂಬ ಭಕ್ತನು
ಮುಂದಿನಾಲೋಚನೆಯ ಮಾಡುತ ಎಲ್ಲವನು ಮರೆತೂ

೭೩

ಶ್ರೀಗಳಾ ಪಾದಕ್ಕೆ ವಂದಿಸಿ
ಶ್ರೀಗಳಾಜ್ಞೆಯ ನಡೆಸುತಲಿತಾ
ಶ್ರೀಗುರುವ ಕರೆತಂದು ಮನೆಯಲಿ ಪೂಜೆ ಮಾಡಿಸುತಾ
ಶ್ರೀಗುರುವು ಸಮ್ಮುಖದಿ ತಾನಾ
ಶ್ರೀಗಣಂಗಳ ತೃಪ್ತಿ ಪಡಿಸುತ
ಶ್ರೀಗಳಾ ಕೃಪೆಯಲ್ಲಿ ಮಗನೊಬ್ಬಾತನನು ಪಡೆದೂ

೭೪

ತಾತನಪ್ಪಣೆಯಂತೆ ಮಗನಿಗೆ
ಓತುವಿಂ ಲಿಂಗಣ್ಣ ಕರೆದನು
ಆತನಿಗೆ ತಿರುನೀಲಕಂಠನು ಎಂದು ಹೆಸರಿಡುತಾ
ಪೂತ ಚಿನ್ಮಯ ಗಾತ್ರನಾಗಿಹ
ತಾತನಾಶೀರ್ವಾದ ಬಲದಲಿ
ಸಾತಿಶಯದಲಿ ಸುಖವ ಕಂಡನು ಧನ್ಯಜಗದೊಳಗೇ

(ಪ್ರಸಂಗ ೫)

೭೫

ಶ್ರೀ* ವಿಳಂಬಿಯ ನಾಮವರುಷದಿ
ಜಾವದೊಳು ಎದ್ದಲಬನೂರಿಗೆ
ಭಾವ ಜೀವಿಯು ಸಾಧುಪುರುಷನು ತಿರುಗುತಲಿ ಬಂದಾ
ಜೀವಿಗಳ ಸುಖದುಃಖ ಹೇಳುತ
ಭಾವಿತದಿ ಬರುವಂಥ ಮಾರಿಕ
ಸಾವು ನೋವಿನ ವಿಷಯ ತಿಳಿಸಿದ ಸಾಧು ಭಕ್ತರಿಗೇ

---

*ಪದ್ಯ ೭೫–೧೯೫೪

೭೬

ಇದಕುಪಾಯವು ಹೇಳುತಲಿತಾ
ಮುದದಿ ಸಪ್ತಾಹದೊಳು ಭಜನೆಯು
ಪದುಳದಿಂ ಮಾಡಿದರೆ ದೇವಿಗೆ ಶಾಂತಿಯಹುದೆಂದೂ
ಸದಯ ಹೃದಯದ ಸಾಧು ಪುರುಷನು
ಸದರಿ ವಿಷಯವ ತಿಳಿಸುತಲಿತಾ
ಸದಮಲದಿ ಭಕ್ತರನು ಹರಸುತ ಪಯಣ ಬೆಳಸಿದನೂ

೭೭

ಮರಣಕಂಜದ ಮನುಜರಿಹರೇ
ಧರೆಯೊಳಗೆ ಅಪರೂಪವೆನಿಸುತ
ನೆರೆದ ಜನಗಳು ಭಜನೆ ಮಾಡಲು ಸಿದ್ಧಗೊಳಿಸಿದರೂ
ವರದ ಅಲ್ಲಮನೂರಿನೊಳಗಿಹ
ವರಮಠದ ಜಂಗಮರು ಆಗಿಹ
ಸರಳ ಭಾವದ ಬಸವಲಿಂಗಾ ಶಾಸ್ತ್ರಿಗಳಿಗ್ಹೇಳೀ

೭೮

ತಿಳಿದ ವಿಷಯವ ಶಾಸ್ತ್ರಿಗಳುತಾ
ತಿಳಿಸಲಿಚ್ಛಿಸಿ ತಾತನಲ್ಲಿಗೆ
ಹೊಳೆಬಳ್ಳಾರಿಗೆ ಶಾಸ್ತ್ರಿಗಳು ತಾ ಅವಸರದಿ ಬಂದೂ
ಬಳಿಕ ಮೆಲುದನಿಯೊಳಗೆ ಶಾಸ್ತ್ರಿಯು
ತಿಳಿಸಿ ಸಪ್ತಾಹದೊಳು ಭಜನೆಯಾ
ಸೆಳೆತಕೊಪ್ಪಿರುವಂಥ ಭಕ್ತರ ಮನದ ಪರಿ ತಿಳಿಸೀ

೭೯

ಪರಮ ಪಂಚಾಕ್ಷರಿಯ ಮಂತ್ರವ
ಹೊರಗೆ ಕೇಳಿಸುವಂತೆ ಹೇಳದೆ
ಪರಮ ಮನದಲಿ ಜಪಿಸುವುದು ಕ್ರಮವಿಹುದು ಜಗದೊಳಗೇ
ಗುರುತರದ ಸಪ್ತಾಹ ಭಜನೆಯು
ಹರನಗುಣಗಾನದೊಳು ಕೀರ್ತನೆ
ಭರದಿ ಮಾಡಲಿಬೇಕುಯೆಂದಾ ಭಕ್ತರಿಗೆ ತಿಳಿಸೂ

೮೦

ಎಂದು ಹೇಳುತ ಶ್ರೀಗಳಾಗಲೆ
ಚಂದದಿಂದಲಿ ಮಂತ್ರ ಮಹಿಮೆಯ
ಮುಂದಿರುವ ಶಾಸ್ತ್ರಿಗಳಿಗಾಗಲೆ ವಿವರಿಸುತ ಮುದದೀ
ಸಂದೆಯವ ಪರಿಹರಿಸಿ ಶಾಸ್ತ್ರದಿ
ಚಂದರಾಗದಿ ತಾಳ ನೃತ್ಯದಿ
ಎಂದು ಉಪಯೋಗಿಸಲು ಬಾರದು ಮಂತ್ರ ಭಜನೆಯೊಳೂ

೮೧

ಅಪಶಬ್ದದ ವಲಯಗಳಿಂದಲಿ
ಜಪಿಸುತಲಿ ತಾ ಅನಾದರಣೆಯ
ಉಪಯುಕ್ತಗೊಳಿಸಲು ಶಾಸ್ತ್ರದುಲ್ಲಂಘನೆಯು ಜಗದೊಳಗೇ
ಕೃಪೆಯೊಳಗೆ ಶ್ರೀ ತಾತನವರಾ
ಉಪದೇಶ ಸಾರವನು ತಿಳಿಸುತ
ಉಪಕರಿಸಿ ಶಾಸ್ತ್ರಿಗಳು ಅಲ್ಲಮನೂರು ಭಕ್ತರಿಗೇ

೮೨

ಊರು ದೈವದ ಭಕ್ತರೆಲ್ಲರು
ಸಾರಿ ಶ್ರೀಗಳ ಮಠಕೆ ಬಂದರು
ಮಾರಹರ ತೇಜದಲಿ ಬೆಳಗುವ ತಾತನಿಗೆ ನಮಿಸೀ
ವೀರಶೈವದ ಧರ್ಮ ತತ್ವವ
ಚಾರು ಶ್ರೀಗಳ ದಿವ್ಯ ಮುಖದಲಿ
ಬೀರಿ ಬೆಳಗುವ ಬೆಳಕು ಕಾಣಲು ಹರುಷದಿಂಕೂಡೀ

೮೩

ಪರಮ ಪತಿವ್ರತೆ ತನ್ನ ಗಂಡನ
ಪರಮ ಪ್ರೇಮದ ನಾಮವನು ತಾ
ಬರಿದೆ ಹಗಲೆಲ್ಲವನು ಹೇಳದೆ ನಾಚುತಲಿ ತಾನೂ
ಶರಣ ಸತಿ ತಾ ಲಿಂಗಪತಿಯಾ
ವರದ ಹೆಸರಿನ ಶಿವನ ಮಂತ್ರವು
ಪರಮ ಗೋಪ್ಯದಿ ಹೇಳ್ವ ಪದ್ಧತಿ ರೂಢಿಯೊಳಗಿಹುದೂ

೮೪

ಮನೆಯ ಬಾಗಿಲ ಪಟ್ಟಿಯದು ತಾ
ಮನೆಯೊಡೆಯ ಅಜಗಣ್ಣ ಶರಣನ
ಘನ ಹಣೆಗೆ ಬಡಿದಾಗ ಶಿವಮಂತ್ರವನು ಉಚ್ಚರಿಸೀ
ತನುವಿನೊಳಗಿಹ ಪ್ರಾಣವಾಯುವು
ತನುವಿನಿಂದಲಿ ಹೊರಗೆ ಹೋಗುತ
ಅನುಪಮದ ಲಿಂಗೈಕ್ಯಸ್ಥಿತಿಯನು ಪಡೆದನಜಗಣ್ಣಾ

೮೫

ಹೀಗೆ ಬಹಿರಂಗದಲಿ ಹೇಳಿದ
ಹಾಗೆ ಮಾಡಲು ಬಾರದದು ತಾ
ರಾಗದಿಂ ತಾ ಉದಾತ್ತನುದಾತದಲಿ ಸ್ವರಿತದೊಳೂ
ಹೇಗೆ ಜಪಿಸಲಿಬೇಕು ಎಂಬುದು
ಹೋಗಿ ಅನುಭಾವಿಗಳ ಸಂಗದಿ
ಯೋಗ ಮುಖದಲಿ ವಿಧಿಯ ತಿಳಿಯುತ ಜಪಿಸಬೇಕೆಂದೂ

೮೬

ವಿವಿಧ ರೀತಿಯಲಾಗ ತಾತನು
ಅವರಿಗಾಗಲೆ ವಿವರಿಸುತ ತಾ
ಸವಿನಯದ ಸದ್ಭಕ್ತ ವೃಂದಕೆ ಪರಮ ಭಾವದೊಳೂ
ಅವಧರಿಸಿದಾ ಭಕ್ತ ಜನರಿಗೆ
ಹವಣು ಸೂಚಿಸಿ ಮಾರ್ಗಬದಲಿಸಿ
ಅವರಿಗಂದು ಶಿವಾನುಭಾವ ಪ್ರವಚನವ ಹೇಳೀ

೮೭

ಅದಕವರು ಒಪ್ಪುತಲಿ ತಾವಾ
ಚದುರದಿಂ ಶಿವಭಜನೆ ಮಾಡದೆ
ಹದುಳದಿಂ ಶಿವಾನುಭಾವದ ಕಾರ್ಯಕ್ರಮಕೆಳಸೀ
ಸದಯ ಹೃದಯದ ತಾತನಂದೇ
ಮುದದಿ ಭಕ್ತರು ಕರೆದು ಒಯ್ಯುತ
ಹದಳದಿಂ ಶ್ರೀ ವೀರಭದ್ರನ ಗುಡಿಯೊಳಗೆ ಸೇರೀ

೮೮

ಅಲ್ಲಮನ ಊರೊಳಗೆ ಸಂಭ್ರಮ
ಸಲ್ಲಲಿತದಿಂ ಪಟ್ಟಿ ಬರೆಯುತ
ಎಲ್ಲರೊಕ್ಕಟ್ಟಿನಲಿ ಧನಸಂಗ್ರಹವ ತಾ ಮಾಡೀ
ಎಲ್ಲರಭಿಮತದಂತೆ ತಾತನ
ಅಲ್ಲೆ ಉಳಿಸುತ ಅಲಬನೂರಿನ
ಬಲ್ಲ ಭಕ್ತರ ಕಾರ್ಯಕ್ರಮದಧ್ಯಕ್ಷರಾಗಿರು ತಾ

೮೯

ತಳಿರು ತೋರಣದಿಂದಲಂಕೃತ
ಒಳಹೊರಗೆ ಶ್ರೀ ವೀರಭದ್ರನ
ಕಳೆಯೊಳಗೆ ಶೋಭಿಸುವ ಗುಡಿಯನು ಶೃಂಗರಿಸಿ ಜನರೂ
ಬಳಿಕ ಗುಡಿಯಂಗಳದ ನೆಲದಲಿ
ಚಲುವ ಹಂದರದಿಂದ ಕೂಡಿದ
ಚಳಕದೊಳು ಪ್ರವಚನದ ಮಂಟಪ ತಾವು ಕಟ್ಟುತಲೀ

೯೦

ಪಂಡಿತರು ಗಾಯಕರ ಕರೆಸುತ
ತಂಡ ತಂಡಗಳಿಂದ ಜನಗಳು
ಬಂಡಿ ತುಂಬಿದ ಅಕ್ಕಿಬೇಳೆಯು ಬೆಲ್ಲವನು ತರುತಾ
ತಿಂಡಿ ತಿನಸುಗಳನ್ನು ಮಾಡುತ
ಉಂಡೆ ಮಾಡಿಸಿ ಹಂಡೆ ತುಂಬಿಸಿ
ಖಂಡಪದಿ ತಾವೆಲ್ಲ ಸರ್ವದ ಸಿದ್ಧತೆಯು ಮಾಡೀ

೯೧

ನೆರೆಯ ಹಳ್ಳಿಯ ಜನರು ಕೂಡುತ
ಗುರುತರದ ಕಾರ್ಯವನು ಮಾಡುವ
ಪರಮ ಉತ್ಸಾಹದಲಿ ಸೇವೆಯ ಮಾಡುತಲಿ ಕೂಡೀ
ಕೊರತೆಯಿಲ್ಲದೆ ಸಜ್ಜುಗೊಳಿಸುತ
ನಿರುತ ಜನಭಕ್ತಿಯಲಿ ತಾತನ
ವರಮಹಾನೇತೃತ್ವದಲ್ಲಿಯೆ ಕಾರ್ಯಸಾಗಿಸುತಾ

೯೨

ಸಡಗರದಿ ಪ್ರವಚನವ ಕೇಳುತ
ಮೃಡನ ಅನುಭವ ತಾವು ತಿಳಿಯುತ
ಪಡುವಣದ ಗಾಳಿಯಲಿ ಜನಗಳು ಮೈಯ ಮರೆದಿಹರೂ
ಒಡನೆ ಗಾಳಿಯು ಹೆಚ್ಚು ಬೀಸಲು
ಒಡಿದು ಸೀಮೆಯ ಎಣ್ಣೆ ದೀಪವು
ಒಡನೆ ಪತ್ತಿತು ಉರಿಯು ತಾಗುತ ಮಂಟಪವು ಸುಡುತಾ

೯೩

ಮಾರಿ ಮುನಿದೆದ್ದಗ್ನಿರೂಪದಿ
ಸಾರಿ ಬರುತಲಿ ಕುಡಿಯ ಚಾಚುತ
ಭಾರಿ ಎತ್ತರದಲ್ಲಿ ಉರಿಯುತ ಜನರ ಕಂಗೆಡಿಸೀ
ನಾರಿಯರು ತಾ ಎದ್ದು ಹೋದರು
ಜಾರಿದರು ಜಾರಣ್ಣ ಭಕ್ತರು
ಘೋರ ಘಟನೆಯು ನೋಡುತಲಿ ತಾತಾತಕುಂತಿಹನೂ

೯೪

ಕೂತು ಕದಲದೆ ಧ್ಯಾನಮಗ್ನದಿ
ತಾತ ಶಿವಧ್ಯಾನವನು ಮಾಡುತ
ಓತುವಿಂದಲಿ ಜನರ ರಕ್ಷಿಸು ಎಂದು ಮೊರೆಯಿಡುತಾ
ಕೂತ ಮಂಟಪಕೇನೂ ಆಗದೆ
ಆತುರದಿ ಮುಂದೆಲ್ಲ ಮಂಟಪ
ಯಾತರದು ಉಳಿಯುವಲಿ ಸುಡುತಲಿಕರುಕು ಬೀಳುತಲೀ

೯೫

ಶಿವ ಶಿವಾಯಿದು ಯಾವರೀತಿಯು
ಶಿವ ಶಿವಾಯಿದು ಯಾವನ್ಯಾಯವು
ಶಿವ ಶಿವಾಯಿದು ನಿನಗೆ ಸಲ್ಲದು ಯೆನ್ನುತಲಿ ತಾತಾ
ಶಿವ ಶಿವಾಯಿದು ಭಕ್ತಿಕೊರತೆಯು
ಶಿವ ಶಿವಾಯಿದು ಭಾವ ಕೊರತೆಯು
ಶಿವ ಶಿವಾಯೆನ್ನುತಲಿ ತಾತನು ಸಾಂಬನನುನುತಿಸೀ

೯೬

ಧರೆಯು ಸುಕೃತದ ಕಾರ್ಯಕೆಲ್ಲಡೆ
ಭರದಿ ಬಹು ವಿಘ್ನಗಳು ಬರುವುವು
ಪರನ ಅನುಗ್ರಹವಿದ್ದರೆಲ್ಲವು ಸಾಧ್ಯ ಜಗದೊಳಗೇ
ನೆರೆದ ಜನಗಳಿಗಭಯ ನೀಡುತ
ಗುರುತರದಿ ಘನಕಾರ್ಯ ಬಿಡದಲೆ
ಪರಮಗುರು ಶ್ರೀ ವೀರಭದ್ರಗೆ ಅಭಿಷೇಕ ಮಾಡೀ

೯೭

ಜೊತೆಗೆ ಶ್ರೀ ಬಸವಣ್ಣ ಸಹಿತದಿ
ಹಿತದಿ ಅಭಿಷೇಕವನು ಮಾಡುತ
ಮತಿಯು ಕೆಡಿಸದೆ ಮಂಟಪವು ತಾ ಮಾಡಿರೆನ್ನುತಲೀ
ಅತಿಶಯದ ಭಕ್ತಿಯಲಿ ಭಕ್ತರು
ಕ್ಷಿತಿಯೊಳಗೆ ಶ್ರೀ ತಾತ ಹೇಳಿದ
ನತಿವಿನೂತನ ಮಂಟಪವ ನಿರ್ಮಿಸುವ ಭರದೊಳಗೇ

೯೮

ಮುಗಿಸಿ ನೂತನ ಮಂಟಪವು ತಾ
ಸೊಗಸಿನಲಿ ಸರ್ವಾಂಗ ಸುಂದರ
ಬಗೆ ಬಗೆಯ ಬಣ್ಣಗಳ ಕಾಗದ ಗುಬ್ಬಿಗಳ ಕಟ್ಟೀ
ಮುಗ ಮುಗದ ಹೂಹಾರದಿಂದಲಿ
ಗಮುಗಮಿಸಿ ತೋರಣದ ಚಂದದಿ
ಝುಗ ಝುಗಿಸಿ ಹೊಳೆವಂಥ ಭವ್ಯಗುಳಾಪುಗಳ ಕಟ್ಟೀ

೯೯

ತಾತ ನೋಡುತ ಮೈಯ ಮರೆಯುತ
ಪ್ರೀತಿಯಲಿ ಮಾಡಿರುವ ಭಕ್ತರ
ಶಾಂತ ಗುಣಗಾನವನು ಮಾಡುತ ಭಕ್ತಿ ಪ್ರಿಯರಾಗೀ
ಮಾತು ಬರುವವು ಮೂಗನಿಗೆ ತಾ
ತಾತ ಕೃಪೆಯಲಿ ಹೆಳವ ನಡೆವನು
ಸಾತಿಶಯದಲಿ ಘಟನೆ ನಡೆವುವು ಈಶ ಕೃಪೆಯೊಳಗೇ

೧೦೦

ಭಂಗರಹಿತ* ವಿಳಂಬಿ ವರ್ಷದಿ
ಪೊಂಗಿ ನಲಿಯುತ ಭಕ್ತ ಜನಗಳು
ತುಂಗ ವೈಶಾಖನೊಳು ಶುದ್ಧದ ದಶಮಿ ದಿನಗಳಲೀ
ತುಂಗದಲಿ ಸಪ್ತಾಹ ಕಾರ್ಯವು
ಮಂಗಳದಿ ಕವಿಗಮಕಿ ಪಂಡಿತ
ರಂಗವಿಸಿ ಸಾಂಗದಲಿ ನಡೆದವು ದಿವ್ಯ ಭಾವದೊಳೂ

೧೦೧

ಸಾರಿ ಬಂದಿಹ ಜನ ಸಹಿತತಾ
ಊರವರಿಗೇನೊಂದು ಆಗದೆ
ಮಾರಿಕಾಂಬೆಯು ಶಾಂತಿ ಮಾಡುತ ಗಣತೃಪ್ತಿಪಡಿಸೀ
ಭೂರಿದಕ್ಷಿಣೆ ಸೇವೆ ಮಾಡಿದ
ಚಾರು ವೆಂಕಟರಾಯ ಭಕ್ತನ
ಸೇರಿ ಸರ್ವದ ದೈವ ಭಕ್ತರ ಹರಸಿ ಶ್ರೀ ತಾತಾ

(ಪ್ರಸಂಗ ೬)

೧೦೨

ಆಲಬನೂರಿನ ಗ್ರಾಮದೊಳಗಿಹ
ಬಲು ಸೊಗಸು ಬಡಿಗಾರ ಕೆಲಸವ
ಹಲವು ವಿಧದಲಿ ಮಾಡುವಂಥವ ಈಶ್ವರಪ್ಪಿರಲೂ
ಒಲವಿನಲಿ ತಾವಾಗಳ ಮದುವೆಯು
ಚಲುವಿನಲಿ ಮಾಡ್ವಂಥ ಭರದಲಿ
ತಿಳಿವು ನೀಡುವ ಪ್ರವಚನಕೆ ತಾ ಹೋಗದಲೆಯಿರಲೂ

೧೦೩

ಮನದ ದುಗುಡದ ಭಾರ ಇಳಿಸುವ
ಘನಮನದ ಶ್ರೀ ತಾತನಲ್ಲಿಗೆ
ಮನದಿ ವಂಚನೆ ಮಾಡದಲೆ ತಾ ಬಂದು ವಿವರಿಸಿದಾ
ಮನೆಯೊಳಗೆ ತಾನೊಬ್ಬನೆನ್ನುತ
ತನಗೆ ಮಗಳೊಬ್ಬಾಕೆಯೆನ್ನುತ
ದಿನದಿನದಿ ಕಾರ್ಯದೊಳು ಮುಳುಗುತ ಮದುವೆ ಕೆಲಸದೊಳೂ

*ವಿಳಂಬಿನಾಮ ಸಂವತ್ಸರ:-೧೯೫೮

೧೦೪

ವಿಹಿತ ಕೆಲಸವ ಮಾಡಿರುವೆನೀ
ಸಹಜ ಜಗದೊಳು ತಂದೆ ಮಾಡುವ
ಸಹಜ ಕೆಲಸವ ಮಾಡಿ ಮುಗಿಸುವ ಯೋಗ್ಯ ಕೆಲಸವದೂ
ಅಹಿಥರನು ಕಲ್ಯಾಣ ಕಾರ್ಯಕೆ
ಅಹಿತವನು ಮಾಡದಲೆ ಜಗದಲಿ
ಮಹಿಮೆಯಿಂದಲಿ ಕೃಪೆಯ ಮಾಡುವಯೆಂದ ಶ್ರೀ ತಾತಾ

೧೦೫

ಎಂದು ಹರಸುತ ಈಶ್ವರಪ್ಪನ
ನಂದು ಕಳುಹಿಸಿ ಮದುವೆ ಕಾರ್ಯವ
ಚಂದದಿಂ ಮಾಡೆಂದು ಹೇಳುತ ತಾತ ಕಳುಹಿಸಿದಾ
ಬಂದನಾಗಲೆ ಈಶ್ವರಪ್ಪನು
ತಂದ ತಂದೆಯ ಕೆಲಸ ಮಾಡಿದ
ನಂದು ಸಿದ್ದಾಪುರಕೆ ಹೊರಡುವ ಮಗಳ ಮದುವೆಯಲೀ

೧೦೬

ಕರೆಯುತಲಿ ತಾ ಬಂಧು ಮಿತ್ರರ
ಭರದಿ ಭಂಡಿಗಳನ್ನು ಕಟ್ಟಿಸಿ
ವರನ ಊರಿಗೆ ಪಯಣ ಬೆಳಸುತ ಗೆಜ್ಜೆನಾದದಲೀ
ತರತರದ ಕೋಡಣಸುಗೊಂಡೆಯ
ತರತರದ ಜೂಲುಗಳು ಧರಿಸಿಹ
ಸುರುಚಿರದ ಎತ್ತುಗಳು ಓಡುತ ಬಾಲ ಬೀಸುತಲೀ

೧೦೭

ಒಂದು ಗಾವುದ ದೂರಹೋಗಲು
ಬಂದುವೈ ಕಾರ್ಮೋಡಗಳು ತಾ
ವಂದು ಕವಿಯುತ ಕತ್ತಲಾಗುತ ಮುಗಿಲನಾವರಿಸೀ
ಅಂದು ಕೋಲ್ಮಿಂಚುಗಳ ಜೊತೆಯಲಿ
ಬಂದು ತಾ ಮಲ್ಲಯ್ಯ ಗುಡುಗಲು
ಕಂದಗಳ ನೆದೆಗವಚಿಕೊಳ್ಳುತ ತಾಯಿ ತಂದೆಗಳೂ

೧೦೮

ಎತ್ತಣಿಂದಲಿ ಬಂದಿತೀ ಮಳೆ
ಎತ್ತಣಿಂದಲಿ ಮೋಡಗಳು ತಾ
ವೆತ್ತಣಿಂದಲಿ ಬಂದು ರಭಸದ ಮಳೆಯು ಸುರಿಯುತಿದೇ
ಇತ್ತ ಬಾರದೆ ಮಳೆಯು ಹಿಂದಕೆ
ಅತ್ತ ಸುರಿವುದು ರಭಸದಿಂದಲಿ
ಮೊತ್ತದಲಿ ತಮ್ಮತ್ತ ಬರದಲೆ ಮಳೆಯು ಬರುತಿಹುದೂ

೧೦೯

ಊರು ಮುಟ್ಟುವ ತನಕ ಹೀಗೆಯೆ
ಸಾರಿ ಬರುತಲಿ ಮಳೆಯು ಹಿಂದಕೆ
ಭಾರಿ ಮಳೆಗಾಳಿಯದು ಸೋಂಕದೆ ಭಂಡಿಗಳು ಸಾಗೀ
ಊರು ಸೇರುತ ನೆನೆದು ತಾತನ
ಭಾರವಿಳಿದಿಹ ಹಗುರತನದಲಿ
ಮಾರಹರ ಕೃಪೆಯಲ್ಲಿಯೆಲ್ಲರು ಕ್ಷೇಮದಲಿ ಸೇರೀ

೧೧೦

ಮುಕ್ತ ಕಂಠದಿ ಹೊಗಳಿ ತಾತನ
ಶಕ್ತಿಯಿಂದಲಿ ಭಯವು ತೊಲಗುತ
ಯುಕ್ತಿಯಿಂದಲಿ ಈಶ್ವರಪ್ಪನು ಮಗಳ ಮದುವೆಯನೂ
ಮುಕ್ತ ಮನಸಲಿ ಮಾಡಿ ಮುಗಿಸಿದ
ಮುಕ್ತ ಮನಸಲಿ ತಾತನಲ್ಲಿಗೆ
ರಿಕ್ತ ಹಸ್ತದಿ ಹೋಗದಲೆ ತಾ ಕಾಣಿಕೆಯು ಹಿಡಿದೂ

೧೧೧

ಜಗದ ಜನಗಳ ಗತಿಯು ನೀನೇ
ಜಗದ ಜನಗಳ ಹಿತನು ನೀನೇ
ಜಗದ ಜನಗಳ ಪಿತನು ನೀನೇ ಎಂದು ಹೊಗಳುತಲೀ
ಬಗೆಯು ಭಾವದಿ ಈಶ್ವರಪ್ಪನ
ಬಗೆಯು ನೋಡಿದ ತಾತನಾಗಲೆ
ಜಗದ ಈಶನ ಕೃಪೆಯದೆಂದೇ ಹೇಳಿ ಹರಸಿದರೂ

## (ಪ್ರಸಂಗ ೭)

೧೧೨

ಇಳೆಯೊಳಗೆ ಹುಟ್ಟಿರ್ದ ಬಳಿಕಾ
ಇಳೆಯ ಬಯಕೆಗಳೆಲ್ಲ ಬಯಸುತ
ಬೆಳೆಸಿದಾಸೆಗಳೆಲ್ಲ ಫಲಿಸಲುಬೇಕುಯೆನ್ನುತಲೀ
ಇಳೆಯ ಸೊಗಸಿನ ಸತ್ಯಸುಂದರ
ಇಳೆಯು ಶಿವಮಯವೆಂದು ತಿಳಿಯದೆ
ಇಳೆಯ ಭೋಗದ ಭಾಗ್ಯಕೆಲ್ಲಕೆ ಹೊಡೆದು ಬಡಿದಾಡೀ

೧೧೩

ಎಲ್ಲ ಕಾರ್ಯಕೆ ತಾನೆ ಕಾರಣ
ಎಲ್ಲ ತನ್ನಿಂದಾದುವೆನ್ನುತ
ಎಲ್ಲ ಸಚರಾಚರಕೆ ಕಾರಣ ಪುರುಷನನು ಮರೆತೂ
ಎಲ್ಲ ಕಾಮದ ಮೂಲ ಹೆಣ್ಣಾ
ಎಲ್ಲ ಚೇತನ ಸೃಷ್ಟಿಯೊಳಗಾ
ಎಲ್ಲ ಸುಖದುಃಖಗಳ ಕಾರಣ ಹೆಣ್ಣುಯೆನಿಸುತಲೀ

೧೧೪

ಹೊನ್ನು ಹೆಣ್ಮಣ್ಣುಗಳ ಜೊತೆಯಲಿ
ಚನ್ನ ಮಕ್ಕಳು ಮಡದಿಗಿರದಿರೆ
ಬನ್ನ ತಪ್ಪದು ಶಾಂತಿಸಿಗದಲೆ ಬಂಜೆಯೆನಿಸುತಲೀ
ಹೊನ್ನು ರನ್ನದ ಹಾರ ಧರಿಸುತ
ಚನ್ನ ಚಲುವಿನ ಸೊಗಸು ಕೂಡಿರೆ
ತನ್ನ ತಾಯ್ತನವಾಗದಲೆ ತಾ ಸುಖವು ಸಿಗದೆಂದೂ

೧೧೫

ಪರಮ ನಾಗರಹಾಳು ಗ್ರಾಮದಿ
ಪರಮ ಶ್ರೀ ದೊಡ್ಡಯ್ಯ ಶಾಸ್ತ್ರಿಗ
ಪರಗುರುವಿಗೊರ ಶಿಷ್ಯಲಿಂಗನಗೌಡನಾಗಿರು ತಾ
ಪರಮ ಪತಿವ್ರತೆ ವೀರಮಾಂಬೆಯು
ವರದ ಲಿಂಗನಗೌಡನಾಸತಿ
ಗಿರದೆ ಮೊಮ್ಮಕ್ಕಳನು ಆಡಿಸುವಂಥ ಭಾಗ್ಯವಿದೂ

೧೧೬

ಒಳಗೊಳಗೆ ಕುದಿವಂಥ ತಾಯಿಗೆ
ತಿಳಿದ ಮಗ ನಾಗ್ರೆಡ್ಡಿಗೌಡನು
ತಿಳಿಪುನದಿ ತಿಳಿಹೇಳುತಲಿ ತಾ ಸತಿಯು ಸಂತಯಿಸೀ
ಇಳೆಯು ಜನಗಳ ನಿಂದೆ ಸಹಿಸದೆ
ಗಳಗಳನೆ ಅಳುವಂಥ ಸತಿಯುನು
ಅಳುವ ಕಾರಣವಿಲ್ಲವೆನ್ನುತ ಸತಿಯು ಪಾರ್ವತಿಗೇ

೧೧೭

ಹರಗುರುವು ಚರವರರ ಕೃಪೆಯದು
ಧರೆಯ ಜನತೆಗೆಯಿದ್ದರೆಲ್ಲವು
ಸರಳದಲಿ ಸಂಸಾರ ನೌಕೆಯು ಮುಂದೆ ಸಾಗುವುದೂ
ಪರಮನಾಕೃಪೆಗಾಗಿ ಕಾಯುವ
ಅರಿತು ನಡೆಯುವ ಧೀರಬುದ್ಧಿಯು
ವರಸತಿಯು ಪಾರ್ವತಿಗೆ ಕರುಣಿಸುಯೆಂದು ಮೊರೆಯಿಡುತಾ

೧೧೮

ಉರುಳಿದಾ ವರುಷಗಳ ನೆಣಿಸುತ
ನೆರೆಹೊರೆಯ ಜನನಿಂದೆ ಹೊರೆಯುನು
ಹೊರದೆ ತತ್ತರಿಸುತ್ತ ಪಾರ್ವತಿ ದುಗುಡದಲಿ ಬೆಂದೂ
ಎರಡನೆಯ ಮರು ಮದುವೆ ಮಾಡಿಯೆ
ಕೊರತೆ ನೀಗಿಸಬೇಕುಯೆನ್ನುತ
ಭರಿತ ದುಃಖದಿ ಅತ್ತೆ ಗುರುಮಠಕಂದು ಗಮಿಸುತಲೀ

೧೧೯

ವೀರಮಾಂಬೆಯುಂ ವಿಷಯ ತಿಳಿಸುತ
ಸಾರಿಬೇಡುತ ಮಾರ್ಗತೋರಲು
ಊರು ಗುರುಮಠದೊಡೆಯ ಶ್ರೀ ದೊಡ್ಡಯ್ಯಶಾಸ್ತ್ರಿಗಳೂ
ಕೋರಿದಾ ವರವೀವ ತಾತನು
ಭೂರಿ ಗುರುವರ ಚನ್ನಬಸವನು
ದಾರಿ ತೋರುವ ಕೈಯ ಹಿಡಿವನು ಭಕ್ತರುದ್ಧರಿಸೀ

೧೨೦

ಇದಕೆ ಸಂಶಯ ಬೇಡವೆನ್ನುತ
ಸದಯ ಹೃದಯದಿ ತಿಳಿಯ ಹೇಳುತ
ಸದಮಲಂತಃಕರುಣಿ ತಾತನ ಮಠಕೆ ಹೋಗ್ರೆನಲೂ
ಒದಗಿದಾಪತ್ತುಗಳು ಕಳೆಯುವ
ಉದಯರವಿ ತೇಜದಲಿ ಬೆಳಗುವ
ಬದುಕು ಸಾರ್ಥಕಗೊಳಿಸುವಂಥಹ ಧೀರ ಶಿವಯೋಗೀ

೧೨೧

ಒಂದು ದಿನ ದಂಪತಿಗಳೀರ್ವರು
ಚಂದದಾ ಜೋಡೆತ್ತು ಗಾಡಿಯ
ಮಂದ ಹಾಸದಿ ಮಾಡಿಕೊಂಡೇ ಪಯಣ ಬೆಳಸಿದರೂ
ಅಂದು ಒಳಬಳ್ಳಾರಿ ಮಠದಲಿ
ಬಂದ ಭಕ್ತರಿಗೆಲ್ಲ ಹರಸುತ
ಚಂದ ಭಾವದಲಿದ್ದ ತಾತನು ಸತಿಪತಿಯ ಕಂಡೂ

೧೨೨

ಎಂದಿನಂತೆಯೆ ಬನ್ನಿರೆನ್ನುತ
ವಂದನೆಯ ಮಾಡಿರುವ ಭಕ್ತರ
ಕುಂದು ಕೊರತೆಯ ಕೇಳುತಲಿ ತಾವಂದು ಸಲುಗೆಯಲೀ
ನೊಂದ ನವದಂಪತಿಗಳಾಗಲೆ
ಬಂದ ವಿಷಯವ ತಿಳಿಸಿ ತಾತಗೆ
ಸಂಧಿ ಕಾಲದಿ ಮಾರ್ಗತೋರಿದ ಶಾಸ್ತ್ರಿಗಳ ನೆನಸೀ

೧೨೩

ಊರು ಗುರು ಮಠದೊಡೆಯ ಶಾಸ್ತ್ರಿಗ
ಪಾರ ಪ್ರೇಮವ ತೋರುವಂಥಹ
ಚಾರು ದಂಪತಿಗಳನು ಹರಸುತ ಮಕ್ಕಳಾಗಲ್ಕೇ
ಕೋರಿಕೆಯು ಫಲಿಸುವುದು ಯೆನ್ನುತ
ಮಾರಹರ ಕೃಪೆ ಮಾಡ್ವನೆನ್ನುತ
ಮಾರಹರ ಮೈ ಬೆಳಗು ಭಸಿತವ ಕೊಟ್ಟು ಕ್ರಮ ಹೇಳೀ

೧೨೪

ಭಕ್ತಿಯಿಂದಲಿ ಭಸಿತ ಧರಿಸುತ
ಭಕ್ತಿಯಿಂದಲಿ ಶಿವನನೆನಸುತ
ಭಕ್ತಿಯಿಂ ದಂಪತಿಗಳೀರ್ವರು ಪೂಜೆಮಾಡ್ರೆನಲೂ
ಭಕ್ತಿಯಿಂದಲಿ ಪೂಜೆಮಾಡುತ
ಭಕ್ತಿಯಿಂದಲಿ ಸೇವೆ ಗೈಯ್ಯುತ
ಭಕ್ತಿಯಿಂ ವೊಂದಿಸುತ ತಾತನ ಅಪ್ಪಣೆಯ ಕೇಳೀ

೧೨೫

ತಮ್ಮ ಊರಿಗೆ ಬಂದ ನಂತರ
ಒಮ್ಮನದಿ ಶಿವಪೂಜೆ ಮಾಡುತ
ಹಮ್ಮು ಬಿಮ್ಮುಗಳಳಿಸಿ ಭಗವತ್ ಪ್ರೇಮದೊಳುಕೂಡೀ
ಕಮ್ಮನುಪಚಾರವನು ಮಾಡದೆ
ಇಮ್ಮನದ ಭಾವವನು ತೋರದೆ
ಲೊಮ್ಮೆಯಾದರು ಸಿಡುಕು ತೋರದೆ ಸತಿಪತಿಯು ಕೂಡೀ

೧೨೬

ಆವರ ಭಕ್ತಿಗೆ ಮೆಚ್ಚಿದಾ ಶಿವ
ನವರ ಭಕ್ತಿಗೆ ವಲಿದು ಕರುಣಿಸಿ
ದವರ ಭಕ್ತಿ ಪ್ರೇಮ ಕಡಲೊಳಗುದಿಸಿ ಮಗುವೊಂದೂ
ಬುವಿಗೆ ಬಂದಿಹ ಹೆಣ್ಣು ಮಗುವಿಗೆ
ಶಿವನ ಕೃಪೆಯಲಿ ತಂದೆಯಾಗುತ
ತವಕದಲಿ ಮಗುವನ್ನು ನೋಡುತ ಹಿಗ್ಗಿ ಸತಿಸಹಿತಾ

೧೨೭

ಸೊಸೆಯು ಹೆತ್ತಿಹ ಮಗುವ ನೋಡುತ
ಹಸುಳೆಯಾ ಮುಗುಳ್ನಗೆಯು ಕಾಣುತ
ಸಸಿನೆಯಿಂ ಸೈಯೆಂದಳಾತನ್ ಸೊಸೆಯು ಹರಸುತಲೀ
ಹೊಸತನದ ಹುಮ್ಮಸದಿ ಮನೆಯಲಿ
ನಶಿಸಿ ಬಂಜೆಯು ಬರಡು ಜೀವನ
ಹೊಸ ತಿರುವು ಬಾಳಲ್ಲಿ ಕಾಣುತ ಭಾಗ್ಯಕೆಣೆಯಿಲ್ಲಾ

೧೨೮

ಇದುವೆ ಶ್ರೀಗುರು ತಾತನಾದಯು
ಇದುವೆ ತಾತನ ಪರಮ ಕೃಪೆಯದು
ಹದುಳದಿಂ ಪರಿಹರಿಸಿ ಜನಗಳ ಕಷ್ಟಸುಖವನ್ನೂ
ಸದಮಲಂತಃಕರುಣಿ ತಾತನ
ಮುದದಿ ಜನಗಳು ಹೊಗಳಿ ತಾತನ
ಇದುವೆ ತಾತನ ಮಹಿಮೆಯಲ್ಲದೆ ಮತ್ತೆ ಬೇರೇನೂ

೧೨೯

ರೋಗ ರುಜಿನಗಳಿಂದ ಬಳಲುವ
ಭೋಗ ಭಾಗ್ಯಗಳಿರದೆ ತೊಳಲುವ
ರಾಗ ರಂಜನೆಯಿಂದ ಕೆಟ್ಟವರೆಲ್ಲ ಹರಸುತಲೀ
ಗೂಗೆ ಗುಣಗಳ ದುಷ್ಟ ಜನಗಳ
ಮಾಗಿ ಮನಗಳ ಪಕ್ವಗೊಳಿಸುತ
ಯೋಗ ಶಿವಯೋಗದೊಳು ರಮಿಸುತ ದಿವ್ಯಶಿವಯೋಗೀ

**(ಪ್ರಸಂಗ ೮)**

೧೩೦

ಕೋಮಟಿಗ ಕುಲದೀಶ್ವರಯ್ಯನು
ಕೋಮಲದ ಮಾನ್ವಿಯೊಳುಯಿರುವಾ
ಕೋಮಲದ ಅಮರಾವತೀ ಗ್ರಾಮದೊಳು ನೆಲಸಿಹನೂ
ಕೋಮಲಾಂಗಿಯಿ ಸತಿಯು ಕೂಡಿರೆ
ಸೋಮಧರ ಕೃಪೆ ಅವರಿಗಿರಪಲೆ
ಸಾಮರಸ್ಯದ ಸುಖವು ಸಿಗದಲೆ ನಷ್ಟಸಂತಾನಾ

೧೩೧

ಮೂರು ಹೆಣ್ಣುಗಳಾದ ಮೇಲೆಯೆ
ಚಾರು ರೂಪದ ಹೆಣ್ಣು ಹುಟ್ಟಿತು
ಬಾರಿಬಾರಿಗು ಅಳುವ ಮಗುವಿಗೆ ತಾಯಿ ಹಾಲಿರದೇ
ಕೋರಿದರು ಮನೆದೇವ ಬಸವಗೆ
ಸಾರಿ ಬೇಡುತ ತೀರ್ಥಪಡೆಯುತ
ಸಾರಿ ಸಾರಿಗು ತೀರ್ಥ ಕುಡಿಸುತ ಮಗುವ ಬೆಳೆಸುತಲೀ

೧೩೨

ಇದರ ಚಿಂತೆಯೊಳಿರುವ ಸತಿಪತಿ
ಗೆದುರು ಬಂದಾಗ್ರಹವು ಬಡಿಯುತ
ಬದುಕಿನಲಿ ಕಾಡುತ್ತಲವರಿಗೆ ಬಾಧಿಸುತ ವಿಧದೀ
ಒದಗಿದಾಪತ್ತಿನಲಿ ಜನಗಳ
ಗುದದಿ ಗುಹ್ಯಗಳಿಂದ ಪ್ರಾಣವು
ನಿಧನ ಕಾಲದಿ ಹೋಗಲವರಿಗೆ ಭೂತಜನ್ಮವದೂ

೧೩೩

ಭೂತ ಜನ್ಮವ ಪಡೆದ ಭೂತವು
ಭೂತ ಚೇಷ್ಟೆಗಳಿಂದ ಕಾಡುತ
ಕಾತರದಿ ಕಾಡೀಶ್ವರಯ್ಯನ ಯೆಡೆಬಿಡದೆ ದಿನದೀ
ಆತನುಂಡನ್ನವದು ಜೀರ್ಣಸ
ದಾತನಿಗೆ ವಾಂತಿಯದು ಆಗುತ
ಆತನಿಗೆ ಹೊಟ್ಟೆಯದು ಉಬ್ಬುತ ವಿಧವಿಧದಿ ಬಳಲೀ

೧೩೪

ತಾತನಲ್ಲಿಗೆ ತಾವು ಹೋಗುತ
ತಾತನಿಗೆ ವಿಷಯವದು ತಿಳಿಸುತ
ತಾತನಡಿಗಳ ಹಿಡಿದು ಗ್ರಹ ಪರಿಹಾರ ಕೇಳುತಾ
ಭೂತಲದ ಬಯಕೆಗಳು ತೀರದೆ
ಭೂತ ಜನುಮವ ಪಡೆದು ಜಗದೊಳು
ಭೂತದುಪಟಳದಿಂದ ಜನಗಳು ತತ್ತರಿಸಿ ಜಗದೀ

೧೩೫

ಮದ್ದು ಮಾಟವ ಮಾಡ್ವ ಜನಗಳು
ಉದ್ದ ತಗಡಿನ ಯಂತ್ರ ಬರೆಯುವ
ಉದ್ದನೆಯ ಮಂತ್ರವನು ಹೇಳುತ ಹೊಟ್ಟೆ ಹೊರೆಯುತಲೀ
ಬುದ್ಧಿಯಿಲ್ಲದ ಜನಗಳಿಂದಲಿ
ಇದ್ದ ಹಣವನು ಸುಲಿಗೆ ಮಾಡುತ
ಹದ್ದು ನಾಯ್ನರಿಯಂತೆ ಜನಗಳ ಹರಿದು ತಿನ್ನುತಲೀ

೧೩೬

ಭೂತದಾರಾಧನೆಯ ಮಾಡುವ
ಭೂತ ಬಲಿಗಳ ಕೊಡುವ ಜನಗಳು
ಭೂತ ಯಜ್ಞವಗೈದು ಜಗದೊಳು ಯಜ್ಞಪಶುವಾಗೀ
ಭೂತ ಚೇಷ್ಟೆಗಳನ್ನು ಕಳೆಯಲು
ಭೂತನಾಥನೆ ಸರ್ವಶಕ್ತನು
ಭೂತದಯೆವುಳ್ಳಂಥ ಶಿವಯೋಗಿಗಳೆ ಮೇಲೆನಿಸೀ

೧೩೭

ಮೇಲು ಕೀಳಿನ ಭಾವತೋರದೆ
ಕಾಲ ಕರ್ಮವ ಜಯಿಸಿದಂಥಹ
ಆಲಿ ಕೆಟ್ಟವರಾಗದೆಯೆ ಶಿವಯೋಗಿಗಳು ಆಗೀ
ಶೂಲಿಯೋಗದ ಶಕ್ತಿಯಿಂದಲಿ
ಶೂಲಿಗಳ ಸಂಹರವ ಮಾಡುವ
ಶೂಲಿ ಕೃಪೆಯಲಿ ಮಂಗಳವ ಕೊಡುವಂಥ ಶಿವಯೋಗೀ

೧೩೮

ಅಡವಿ ಅಮರೇಶ್ವರನ ಕ್ಷೇತ್ರಕೆ
ಮೃಡನವೊಲುಮೆಗೆ ಹೋಗಿರೆನ್ನುತ
ಒಡನೆ ಬಿಡದಲೆ ಅಲ್ಲೆಯಿರುತಲಿ ಪೂಜೆಮಾಡ್ರೆಂದೂ
ನಡೆದುಕೊಳ್ಳುವ ರೀತಿ ಹೇಳುತ
ಕೊಡುತ ಫಲಪುಷ್ಪದೊಳು ಹರಸುತ
ನಡೆಯಿರೆನ್ನುತ ತಾತನಪ್ಪಣೆ ಮಾಡಿದವರಿಂಗೇ

೧೩೯

ತಾತನಪ್ಪಣೆಯಂತೆ ಹೋಗಿಯೆ
ಓತುವಿಂದಲಿ ಪೂಜೆಮಾಡುತ
ರೀತಿಯಲಿ ನಡೆಯುತ್ತಲಮರೇಶ್ವರನ ಕೃಪೆಗಾಗೀ
ಸೋತ ದೇಹದಿ ಬೆಂದುಬಳಲುತ
ತಾತನನು ಧ್ಯಾನಿಸುತ ನಿತ್ಯದಿ
ಪ್ರೇತಗ್ರಹ ಬಿಡುಗಡೆಗೆ ಕಾಯುತ ದಿನಗಳೆಣಿಸುತಲೀ

೧೪೦

ಬಿಡದೆ ಕಾಡುತ ಮನೆಯ ಜನಗಳ
ಕುಡಿವ ನೀರಲಿ ಮೂತ್ರ ಬಿಡುತಲಿ
ಪಡಿಪದಾರ್ಥದಿ ಮಲವ ಮಾಡುತ ಕಾಡಿ ಬಹುವಿಧದೀ
ಎಡರು ವೊಡ್ಡಿದ ವೇಳೆಯೊಳುತಾ
ವೆಡರಿ ಗಂಜದೆ ಧೈರ್ಯದಿಂದಲಿ
ಎಡವಿ ಬೀಳದೆ ನಿಂತು ನಡೆವನು ಧೀರಜಗದೊಳಗೇ

೧೪೧

ಮನೆಯ ಎತ್ತಿನ ಕೊಂಬುಮುರಿಯುತ
ಮನೆಯ ಮಕ್ಕಳ ಪ್ರಾಣ ತೆಗೆಯುತ
ಅನುದಿನದಿ ಕಾಡುತ್ತ ಗ್ರಹವದು ಗೃಹವಬಿಡದೆಂದೂ
ಎನಿಸು ಕಾಲದಿ ಪೂಜೆ ಮಾಡಿದ
ರೆನಿತು ಆಸ್ಪದ ಕೊಡದೆ ಕಾಡುತ
ಅನುಗೆಡಿಸಿದನು ತಾಪಮಾಡುತ ಗ್ರಹದ ಚೇಷ್ಟೆಯೊಳೂ

೧೪೨

ಇದಕುಪಾಯವದೇನು ಯೆನ್ನುತ
ಸದಯ ತಾತನ ಮತ್ತೆ ಕೇಳುತ
ಒದಗಿದಾಪತ್ತನ್ನು ಕಳೆಯಲು ಬೇಡಿಕೊಳ್ಳುತಲೀ
ಹೆದರಿ ಕಂಗೆಟ್ಟೇಶ್ವರಯ್ಯನು
ಗದಗದದಿ ನಡುಗುತ್ತಲಾತನು
ಉದಿತ ಮಾರ್ಗವ ತೋರಿಸೆನ್ನುತ ಮುಗಿದ ಕೈಗಳಲೀ

೧೪೩

ಡಿಳ್ಳ ಮನಸಲಿ ತಾತಗೊಂದಿಸಿ
ಜೊಳ್ಳು ಬೆದರಿಕೆಕಳೆಯಲಿಕೆತಾ
ಒಳ್ಳೆ ಭಾವದಿ ತಾತನಡಿಗಳ ಹಿಡಿದು ಕೇಳುತಲೀ
ಪೊಳ್ಳು ಬೆದರಿಕೆ ಗಂಜದಿರು ನೀ
ಸುಳ್ಳು ಕಟ್ಟುಕಥೆಗಳನು ನಂಬದೆ
ತಳ್ಳು ದುಗುಡವನೆಂದ ತಾತನು ಧೈರ್ಯ ಹೇಳುತಲೀ

೧೮೪

ಈವರೆಗೆ ಇರುವಂಥ ಮನೆಯನು
ನೀವು ಕೆಲದಿನ ಬಿಟ್ಟು ಬೇರೆಯ
ಠಾವಿನೊಳು ವಾಸಿಸಿರಿಯೆನ್ನುತ ತಾತ ಹೇಳುತಲೀ
ನಾವು ಹೇಳಿದೆವೆಂದು ಹಾಲ್ವಿಯ
ಪಾವನದ ಶ್ರೀ ರುದ್ರಮುನಿಗಳ
ಭಾವಭಕುತಿಯ ಮನದಿ ಬಿನ್ನಹ ಮಾಡಿರೆನ್ನುತಲೀ

೧೮೫

ಅವರ ಪೂಜೆಯು ನಿಮ್ಮಮನೆಯಲಿ
ಅವಿಕಲದ ಭಾವದಲಿ ನಡೆಯಲಿ
ಕವಿದ ಕಾರ್ಗತ್ತಲನು ಕಳೆಯಲುಯಿದುವೆಸಾಧನವೂ
ಭುವಿಯೊಳಗೆ ಭೂತಗಳು ಹೋಗಲು
ಶಿವಮಹಾಯೋಗಿಗಳ ಪೂಜೆಯು
ಭುವಿಯೊಳಗೆ ಆವಶ್ಯವೆನ್ನುತ ತಾತ ಹೇಳುತಲೀ

೧೮೬

ತಾತನಾಜ್ಞೆಯೊಳೀಶ್ವರಯ್ಯನು
ತಾತಗಭಿವಂದಿಸುತ ಹೊರಟನು
ಪೂತ ಕ್ಷೇತ್ರವುಯೆನಿಸಿದಂತಹ ಹಾಲ್ವಿ ಮಠಕ್ಕೋಗೀ
ತಾತ ಹೇಳಿದ ವಿಷಯ ತಿಳಿಸುತ
ಭೂತ ವಾಸಿಸಿದಂಥ ಮನೆಯಲಿ
ಪೂತ ಚಿನ್ಮಯರಾದಸ್ವಾಮಿಯ ಪೂಜೆಮಾಡಲಿಕೇ

೧೮೭

ಘನಮಠದ ಶ್ರೀ ರುದ್ರಮುನಿಗಳ
ಚಿನುಮಯದ ಪಾದಗಳ ಹಿಡಿಯುತ
ದಿನದಿ ಕಾಡುವ ಭೂತಹೋಗಲು ಪೂಜೆ ಮಾಡ್ರೆನುತಾ
ಮನದಿ ಮಿಡುಕುತ ಭಕ್ತನೆಬ್ಬಿಸಿ
ಅನಘ ಗುರುವನು ತಾವು ನೆನಸುತ
ಮನವುಪೊಪ್ಪದೆ ಹಿಂದೆ ನಡೆದಾ ಘಟನೆಯನು ಹೇಳೀ

೧೪೮

ತಮ್ಮ ಗುರು ಶ್ರೀ ರುದ್ರಮುನಿಗಳು
ಒಮ್ಮೆ ನೈಚಾರ ಪ್ರಾಂತ್ಯದೂರಿನ
ಇಮ್ಮನದ ಶ್ರೀಮಂತನೋರ್ವನ ಬಿನ್ನಹಕೆ ವೊಪ್ಪೀ
ಕೆಮ್ಮನುಪಚಾರವನು ಮಾಡುತ
ಗುಮ್ಮಡಿಯ ಗೃಹದೊಳಗೆ ಶ್ರೀಗಳು
ಸಮ್ಮತಿಸಿ ಪೂಜೆಯನು ಮಾಡುವ ಸಮಯ ನೋಡುತಲೀ

೧೪೯

ಕರದೊಳಗೆಯಿರುವಿಷ್ಟಲಿಂಗವು
ಭರದಿ ಮಾಯವದಾಗಿ ಹೋಗಲು
ಗುರುಗಳೌಪಾರುತಲಿ ಮನದಲಿ ಭೂತಚೇಷ್ಟೆಯೊಳೂ
ಹೊರಗಿರುವ ಭಕ್ತರನು ಕರೆಯುತ
ಮರಿಗಳೊಬ್ಬರ ಬಿಟ್ಟು ಯೆಲ್ಲರು
ಇರದೆ ಹೋಗ್ರೆಂದಪ್ಪಣೆಯ ಮಾಡಿದರು ಶ್ರೀ ಗುರುವೂ

೧೫೦

ಭೂತಚೇಷ್ಟೆಗೆ ಧೃತಿಯುಗೆಡದಲೆ
ಭೂತಿಯನು ಮತ್ತೊಮ್ಮೆ ಮಂತ್ರಿಸಿ
ಭೂತನಾಥನ ಮನದಿ ನೆನೆಯುತ ಭಸ್ಮಲೇಪನದೀ
ಘಾತುಕದ ಶ್ರೀಮಂತ ಮಾಡಿದ
ಪಾತಕದ ಕೆಲಸಕ್ಕೆ ಮರುಗುತ
ಪೂತಚಿನ್ಮಯರಾಗಿ ಶಿವನೆಡೆಬಿಡದೆ ಧ್ಯಾನಿಸುತಾ

೧೫೧

ದಿನಪ ಮುಳುಗುವ ತನಕ ಧ್ಯಾನಿಸಿ
ದಿನಕರನ ತೇಜದಲಿ ಹೊಳೆಯುವ
ದಿನದ ಪೂಜೆಯು ಮಾಡ್ದ ಶ್ರೀ ಗುರು ಸತ್ಯದಾಗ್ರಹದೀ
ಘನ ಮನದ ಶಿವಯೋಗ ಶಕ್ತಿಗೆ
ಅನುದಿನದಿ ಕಾಡ್ವಂತ ಭೂತವು
ವಿನಯದಿಂ ಮಣಿಯುತ್ತ ಶ್ರೀಗಳ ಲಿಂಗವನು ಕೊಡುತಾ

೧೫೦

ನೀವು ಜಗದೊಳಗತಿಸಮರ್ಥರು
ನೀವು ಬ್ರಹ್ಮದ ಶಿವನ ರೂಪಿಯು
ನೀವ್ರುಯೆನ್ನಯ ನೂರು ಅಪರಾಧಗಳ ಮನ್ನಿಸುತಾ
ನೀವು ಯೆನ್ನಯ ಬ್ರಹ್ಮರಾಕ್ಷಸ
ಯಾವ ಗುಣ ಬಿಡದಿಂದು ಕಳೆಯುತ
ತಾವು ಯೆನ್ನುದ್ಧರಿಸಬೇಕೆಂದಾಗ್ರುಹವು ಕೇಳೀ

೧೫೩

ಮಾನವನ ಜನ್ಮದಲಿ ಮುಗಿಸದ
ಮಾನವನ ಬಯಕೆಗಳು ಅದುಮಿಸಿ
ಮಾನವನ ಜೀವನದ ಹರಣವು ಕೊನೆಯು ಕೊಲೆಯೊಳಗೇ
ಮಾನವನಿಗಾಗಿರದೆ ಆತ್ಮವು
ದಾನವನ ದೇಹವದು ಹುಡುಕುತ
ದಾನವನ ದೇಹವನು ಸೇರಿಯೆ ಬ್ರಹ್ಮರಾಕ್ಷಸಿಯೂ

೧೫೪

ಜಗದೊಳೀಷಣ ತ್ರಯಗಳಿಂದಲಿ
ಜಗದೊಳಗೆ ಬಾಧಿಸುತ ವಿಧದಲಿ
ಜಗದೊಳಗೆ ಹೊನ್ ಹೆಣ್ಣು ಮಣ್ಣುಗಳಿಂದ ಬಳಲುತಲೀ
ಜಗದ ಈಶನ ಸತ್ಯಸುಂದರ
ಬಗೆಯು ಭಾವದ ದಿವ್ಯರೂಪವ
ಬಗಿದು ನೋಡದೆ ಒಳ್ಳೆ ಕಣ್ಗಳ ನೋಟ ಚೆಲುವನಿಸೀ

೧೫೫

ಧನಿಕನಾಗ್ರುಹದೊಳಗೆ ಗ್ರುಹವದು
ಘನಗುರುವಿನಾ ಪೂಜೆಯಿಂದಲಿ
ಅನುಪಮದ ಮೋಕ್ಷವದು ಪಡೆಯುತ ಪರಮ ಶಾಂತಿಯಲೀ
ಚಿನುಮಯದ ಮಹಶಕ್ತಿಯಿರದಿಹ
ಯೆನಗೆ ಸಾಧ್ಯವೆ ಯೆನ್ನುತಾಗಲೆ
ಸನುಮತವು ಸೂಚಿಸದೆ ಶ್ರೀಗುರು ಭಕ್ತನಾಗ್ರುಹಕೇ

೧೫೬

ತಾತನಪ್ಪಣೆಯಂತೆ ಬಂದೆವು
ತಾತ ನಿಮ್ಮನು ಕರೆಸಿರೆನ್ನುತ
ಭೂತದುಪಟಳ ಕಳೆಯಲಿಕೆ ತಾ ನಿದುವೆ ಸಾಧನವೂ
ತಾತ ನಿಮ್ಮಯ ಜೊತೆಯಲಿರುವರು
ಯಾತರದ ಸಂಶಯವು ಪಡವಲೆ
ಭೀತಿಯಿಂದಿರುವಂಥ ತಮ್ಮನು ರಕ್ಷಿಸೆನ್ನುತಲೀ

೧೫೭

ಅವರ ಮಾತಿಗೆ ಹಾಲ್ವಿ ಶ್ರೀಗಳು
ಅವಿಕಲಾನಂದದಲಿ ಒಪ್ಪುತ
ಭುವಿಯ ಜನರುದ್ಧಾರ ಮಾಡ್ವದು ಅವರಗುರಿಯೆಂದೂ
ಧವಳ ಶಿವತೇಜದಲಿ ಬೆಳಗುವ
ಸವಿನಯದ ತಾತನನುವೊಂದಿಸಿ
ಭುವಿಯ ಲೋಕದ ದಿವ್ಯಕನಸನು ಕಂಡ ಕಣ್ಮಣಿಯೂ

೧೫೮

ಮಾರನೆಯ ದಿನ ಹಾಲ್ವಿ ಶ್ರೀಗಳು
ಕಾರಣಿಕ ಶಿವಯೋಗಿ ನೆನೆಯುತ
ಧೀರತನದಲಿ ಪಯಣ ಮಾಡುತ ಭಕ್ತ ಜೊತೆಯಾಗೀ
ವೀರ ಗುರುವರ ಚನ್ನಬಸವರ
ಪಾರ ಮಹಿಮಾ ಭಕ್ತಿಶಕ್ತಿಯು
ಸಾರಿ ಸಾರಿಗು ಹೊಗಳುತೊಳ ಬಳ್ಳಾರಿ ಮಠಸೇರೀ

೧೫೯

ಇರುವ ವಿಷಯವನೆಲ್ಲ ವಿವರಿಸಿ
ಧರೆಯೊಳಮರಾವತಿಯಗ್ರಾಮಕೆ
ವಿರತ ಶ್ರೀಗುರು ತಾತಜೊತೆಯಲಿ ಪಯಣ ಮಾಡಿದರೂ
ಬರುತಲಮರಾವತಿಯ ಗ್ರಾಮಕೆ
ಕರಿಯ ಕಾಗೆಯು ಕಾಕಯೆನ್ನುತ
ಇರುತ ಭಂಡಿಯು ಸುತ್ತು ಹಾಕುತ ಬಿಡದೆ ಕಾಡುತಲೀ

೧೬೦

ಭೂತ ವಾಸಿಸಿದಂಥ ಮನೆಯಲಿ
ತಾತ ಜೊತೆಯಲಿ ಹಾಲ್ವಿ ಶ್ರೀಗಳು
ಯಾತುಧಾನದ ಉಗ್ರದುಪಟಳ ಕಳೆಯಲನುವಾಗೀ
ಭೀತಿ ಭಕ್ತಿಯ ಭಾವದಿಂದಲಿ
ತಾತನವರಾ ದಿವ್ಯ ಪೂಜೆಗೆ
ಪ್ರೇತವೋಡಿಸಲೀಶ್ವರಯ್ಯನು ಸಜ್ಜುಗೊಳಿಸಿದನೂ

೧೬೧

ದೊಡ್ಡಸಮೆ ದೀಪಗಳ ಬೆಳಕಲಿ
ದೊಡ್ಡ ಮನಸಲಿ ಧೂಪಹಾಕುತ
ದೊಡ್ಡ ಗುಣದಲಿ ಲಿಂಗ ಪೂಜೆಯ ಮಾಡಿ ಶ್ರೀ ತಾತಾ
ಅಡ್ಡಿ ಮಾಡುತ ದೃಶ್ಯರೂಪದಿ
ಒಡ್ಡಿದುದು ಮಹಜಾಲ ಭೂತವು
ಗೊಡ್ಡದುಪಟಳ ಮಾಡುತಲಿ ತಾ ಉಭಯ ಶ್ರೀಗಳಿಗೇ

೧೬೨

ಸರಳ ಸದ್ಭಕ್ತಿಯಲಿ ಪೂಜೆಯು
ದುರಿತ ಕರ್ಮವ ಕಳೆಯಲಿಕೆ ತಾ
ಜರುಗಿಸುತ ಶ್ರೀ ತಾತ ಜೊತೆಯಲಿ ಹಾಲ್ವಿಸ್ವಾಮಿಗಳೂ
ಪರಮ ಪಾವನ ಹಾಲ್ವಿ ಶ್ರೀಗಳ
ಚರಣಗಳಿಗಭಿಷೇಕ ಮಾಡಿಸಿ
ಪರಮ ನೇತೃತ್ವದಲಿ ತಾತನ ಸನ್ನಿಧಾನದೊಳೂ

೧೬೩

ಹೊರಗೆ ತಾತನು ನಿಂತು ಹೊರಡಲು
ಕರಿಯ ಕಾಗೆಯು ಕಾಕ ಯೆನ್ನುತ
ಪರಿಪರಿಯ ವಿಧದಿಂದ ಸುತ್ತುತ ವಿಘ್ನವನು ಮಾಡೀ
ಗುರುಗಳಾ ಮರಿ ಬೆತ್ತ ಹಿಡಿಯುತ
ಭರದಿ ಬೆದರಿಸಿ ಬೆತ್ತವಾಡಿಸಿ
ಕರವನೆತ್ತಿಯೆ ಕಾಗೆ ವೋಡಿಸುವಂಥ ಕಾಯಕದೀ

೧೬೪

ಹರನ ಸಾಸಿರ ನಾಮ ಜಪಗಳ
ವರಗಣಾಧೀಶ್ವರರ ಸಾಸಿರ
ಪರಮ ನಾಮದ ದಿವ್ಯ ಪಾರಾಯಣವ ಮಾಡುತಲೀ
ವರಗಣಾಧೀಶ್ವರರ ತೃಪ್ತಿಯು
ಸರಳ ಭಾವದಲೀಶ್ವರಯ್ಯನು
ಗುರುತರದಿ ತಾ ಗೈದು ಶ್ರೀಗಳ ಅಪ್ಪಣೆಯು ತೆರದೀ

೧೬೫

ತಾತನ ಚಲದ ನಿಷ್ಠೆ ಪೂಜೆಗೆ
ಭೂತನಾಥನು ಕೃಪೆಯು ಮಾಡುತ
ನಾಥ ಭಕ್ತನಿಗಭಯು ನೀಡುತ ತಾತ ಕೃಪೆಯೊಳಗೇ
ಭೂತ ಮನೆಯನು ಬಿಟ್ಟು ಹೊರಟಿತು
ಭೀತಿಯಿಂದಲಿ ಕಾಗೆ ಸತ್ತಿತು
ಪ್ರೇತದುಪಟಳ ಕಳೆದ ತಾತಗೆ ವಂದಿಸುತ ಮುದದೀ

೧೬೬

ಅಭಯ ನೀಡಿದ ತಾತನನು ತಾ
ಅಭಿನವದ ಶಿವನೆಂದು ನುತಿಸುತ
ರಭಸದಿ ಕೃಪೆ ಮಾಡಿದಂಥ ಸ್ವಾಮಿಗಳ ಹೊಗಳೀ
ಉಭಯ ಶ್ರೀಗಳ ಪಾದಕೊಂದಿಸಿ
ಅಭಿಮತದಿ ಕಾಣಿಕೆಯು ಸಲ್ಲಿಸಿ
ಉಭಯ ಶ್ರೀಗಳ ಕೃಪೆಯು ಪಡೆದಾ ಈಶ್ವರಯ್ಯಂದೂ

೧೬೭

ಜಗದ ಜನಗಳ ದುಃಖ ಕಳೆಯುತ
ಜಗದ ಜನರಿಗೆ ಸುಖವ ಕರುಣಿಸಿ
ಜಗದಳುವು ತನಗಿರಲಿಯೆನ್ನುತ ದಿವ್ಯಶಿವಯೋಗೀ
ಜಗದ ಜನರಿಗೆ ತಾತನೆನ್ನಿಸಿ
ಜಗದ ಜನಗಳ ತಪ್ಪು ಮನ್ನಿಸಿ
ಜಗದ ಕಲ್ಯಾಣವನು ಬಯಸಿದ ಭವ್ಯ ಶ್ರೀ ತಾತಾ

(ಪ್ರಸಂಗ ೯)

೧೬೮

ಗೊರವ ಬಾಳಿನ ಬೆಳಕಲಿರುವಾ
ಧರೆಯಲಿರುವಾಗೊರೇ ಬಾಳಿನ
ಲಿರುವ ಗ್ರಾಮದ ಅಖಿಳ ಜನಗಳು ಸುಖದಲಿರುವಾಗಾ
ಬರವು ಬಂದಿತು ದುಗುಡ ಕೊಡುತಲಿ
ವರುಣ ಕೃಪೆಯಾಗದಲೆ ಜನರಿಗೆ
ಧರೆಯಲಿಹ ದನಗಳಿಗೆ ಕುಡಿಯಲು ನೀರು ದೊರಕದಲೇ

೧೬೯

ಶರಣ ಬಸವೇಶ್ವರ ಪುರಾಣವು
ಹರನ ಕೃಪೆಯಾಗಲಿಕೆ ಜಗದೊಳು
ಗುರು ತರದಿ ಪ್ರಾರಂಭ ಮಾಡಿರಿ ಎಂದ ಶ್ರೀ ತಾತಾ
ಪರಮಗುರು ಶ್ರೀ ತಾತನಾಜ್ಞೆಯ
ಪರಿವಿಧಾನದಿ ಗೊರೇ ಬಾಳಿನ
ಲಿರುವ ಭಕ್ತರು ವರಪುರಾಣವ ಹೇಳಿಸುತ ಮುದದೀ

೧೭೦

ಆದರೀ ಜಗದೊಳಗೆ ಜನಗಳು
ಬಾಧಿಸುವ ಬರದೊಳಗೆ ಬಳಲುತ
ಕಾದ ಮಣ್ಣಿನ ಭೂಮಿ ತಾಪದಿ ತತ್ವಬೇಡನಿಸೀ
ನಾದ ಕಾಲದಿ ಓದುತಲಿತಾ
ಸ್ವಾದದಿಂ ಪ್ರವಚನವ ಮಾಡುವ
ಭೇದವಿರದೆ ಗವಾಯಿ ಶಾಸ್ತ್ರಿಗಳಿಂದ ಮುನ್ನಡೆದೂ

೧೭೧

ಯಾರಿಗಾಗಿ ಪುರಾಣ ಹೇಳ್ವದು
ಯಾರು ಕೇಳಲಿ ಕಂದು ಬರದಿರೆ
ಮಾರಹರ ಕೃಪೆಗಾಗಿ ಬರದಲಿ ಬಳಲಿದಾ ಜನರೂ
ಊರಲಿಹ ಯಜಮಾನರೆಲ್ಲರು
ಸೇರಿವೊಂದೆಡೆ ಮಾತನಾಡುತ
ಕಾರಣಿಕ ಶ್ರೀ ತಾತನವರನು ಕರೆಸಬೇಕೆನುತಾ

೧೭೨

ಧರೆಯೊಳೊಳಬಳ್ಳಾರಿ ಮಠದಲಿ
ಪರಮ ವೈರಾಗ್ಯದಲಿ ಶೋಭಿಪ
ಚರವರೇಣ್ಯರು ಚನ್ನಬಸವರು ತಾತರಾಗಿರುವಾ
ಗುರುವಿನಾ ಗುರುವೆಂದು ಭಾವಿಪ
ಗೊರವ ಬಾಳಿನ ಊರುಭಕ್ತರು
ಬರದ ಪರಿಯನು ತಿಳಿಸಿ ತಾತಗೆ ಮಠಕೆ ಬಂದಾಗಾ

೧೭೩

ಹಿಡಿದ ಕಾರ್ಯವ ಬಿಡದೆ ಮಾಡಿರಿ
ಮೃಡನ ಕರುಣೆಯು ಆಗೆ ಆಗ್ವದು
ಉಡುವಿನಾ ಭಾವದಲಿ ಭಕ್ತಿಯು ಶಕ್ತಿಯಿಂ ಕೂಡೀ
ನಡೆಯಿರೆನ್ನುತ ತಾತ ಹೇಳುತ
ಒಡನೆ ಎತ್ತಿನ ಭಂಡಿ ಹತ್ತುತ
ಮೃಡನ ನೆನಸುತ ಗೊರೇ ಬಾಳಿಗೆ ಬಂದುಸೇರುತಲೀ

೧೭೪

ತಾತನಾದರ್ಶನಕೆ ಭಕ್ತರು
ಆತುರದಿ ತಾವೆಲ್ಲ ಬರುತಲಿ
ತಾತನಾ ಶ್ರೀಪಾದ ಪದ್ಮಕೆವೊಂದಿಸುತ ಮುದದೀ
ಪ್ರೀತಿಯಿಂ ಶರಣಯ್ಯ ಓದುವ
ಪ್ರೀತಿಯಿಂದ ಪುರಾಣ ಹೇಳುವ
ನಾತನೇ ವರವಿರೂಪಾಕ್ಷಶಾಸ್ತ್ರಿಯಾಗಿರುತಾ

೧೭೫

ಮುದ್ದರೆಡ್ಡಿಯು ಮುಂದೆ ಬರುತಲಿ
ಇದ್ದ ಯಮುನಪ್ಪನನು ಸರಿಸುತ
ಹೊದ್ದ ಶಾಲಿನ ಪರ್ವತಯ್ಯನ ಸನಿಹದಲಿ ಕೂತೂ
ಬದ್ಧ ಕಂಕಣರಾದ ಜನರಿಗೆ
ಸದ್ದು ಮಾಡದೆಯಿರಲು ಹೇಳುತ
ಲಿದ್ದು ನೆಟೆಕಲ್‌ರಾಮಚಂದ್ರನು ನಿಷ್ಠೆ ಭಕ್ತಿಯಲೀ

೧೭೬

ತಾತನಭಿನೇತೃತ್ವದಲ್ಲಿಯೆ
ತಾತನಪ್ಪಣೆಯಂತೆ ಭಕ್ತರು
ಮಾತು ನಡೆಸುತವರ ಪುರಾಣವ ಮುಂದುವರಿಸುತಲೀ
ಪೂತ ಚಿನ್ಮಯ ಚನ್ನಬಸವರು
ಓತುವಿಂದಲಿ ಗೊರೇ ಬಾಳಲಿ
ಚಾತುರದಿ ಕಾರ್ಯವನು ನಡೆಸುತ ಬರದ ಕಾಲದೊಳೂ

೧೭೭

ಧನವು ಧರ್ಮದ ಕಾರ್ಯಕಾಗಿಯೆ
ಅನುದಿನದ ಗಣತೃಪ್ತಿಗೋಸುಗ
ವಿನಯದಿಂದಲಿ ಖರ್ಚು ಮಾಡುತ ಧರ್ಮ ಕಾರ್ಯದೊಳೂ
ದಿನಗಳುರುಳಲು ಮಳೆಯು ಬಾರದೆ
ಜನರು ಚಿಂತಾಗ್ನಿಯೊಳು ಬೇಯುತ
ಘನಮನದ ಶಿವಯೋಗಿ ಕೃಪೆಯನು ತಾವುಬೇಡುತಲೀ

೧೭೮

ಇನಿತುಕರುಣವದಿಲ್ಲ ಶಿವನಿಗೆ
ಯೆನುತತಾತನು ಮರುಗಿ ಜನರಿಗೆ
ದಿನವು ನಡೆಯುವ ವರಪುರಾಣವ ನಿಲ್ಲಿಸಲು ಹೇಳೀ
ದಿನಪ ಮೂಡದ ಮುನ್ನ ತಾತನು
ಮುನಿದು ದೇವರ ದೇವನನುತಾ
ನೆನಸುತಲಿ ಪಯಣವನು ಮಾಡುತ ವಿರತ ಮಠಕಾಗಾ

೧೭೯

ಇತ್ತ ಗೊರೆ ಬಾಳಲ್ಲಿ ಮೋಡವು
ಸುತ್ತ ಕವಿಯುತ ಕತ್ತಲಾಗುತ
ಎತ್ತ ನೋಡಿದಡತ್ತ ಕೋಲ್ ಮಿಂಚಾಗಿ ಘುಡುಗುತಲೀ
ವೊತ್ತದಲಿ ಭೋರ್ಗರೆದು ಮಳೆಯದು
ಬಿತ್ತರದಿ ಬೀಳುತಲಿ ಧರೆಯಲಿ
ಗೊತ್ತುಗುರಿಯಲಿ ಗೊರೇಬಾಳಿನ ಜನರ ಸಂತಯಿಸೀ

೧೮೦

ಇದುವೆ ಒಳಬಳ್ಳಾರಿ ತಾತನು
ಮುದದಿ ಮಾಡಿದ ವರ ಪವಾಡವು
ಇದುವೆ ತಾತನ ಘನಮಹಿಮೆಯೆಂದಾಗ ಹೊಗಳುತಲೀ
ಮೊದಲು ವಿಷಯವು ತಾತಗರುಹಲು
ಪದುಳದಿಂ ಪಯಣವನು ಮಾಡುತ
ಉದಿತ ಮಾರ್ಗದಿ ಕೆಲವು ಭಕ್ತರು ಹೋಗಿ ಮಠಕಾಗಾ

೧೮೧

ಮಳೆಯು ವಿಷಯವ ತಿಳಿಸಿ ತಾತಗೆ
ಕಳೆಯು ಬಂದಿತು ನಿಮ್ಮ ಕೃಪೆಯಲಿ
ಪುಳಕಿತದಿ ಶ್ರೀ ತಾತಗೊಂದಿಸಿ ಹೊಗಳಿ ಭಕ್ತಜನಾ
ಬಳಿಕ ತಾತನು ಗೊರೇಬಾಳಿಗೆ
ತಿಳಿಮನದಿ ತಾ ಬಂದು ಭಕ್ತರ
ಉಳಿದ ಪರಮ ಪುರಾಣ ಮಂಗಲ ಮಾಡಿರೆನ್ನುತಲೀ

೧೮೨

ಭಕ್ತರಭಿಮತದಂತೆ ತಾತನು
ಭಕ್ತರೊಡಗೂಡುತಲಿ ಬಂದನು
ಭಕ್ತಿ ಶಕ್ತಿಯು ಸಾಮರಸ್ಯದಿ ಮಂಗಲವ ಮಾಡೀ
ಭಕ್ತಿಕೊರತೆಯು ಮಾಡದಂತೆಯೆ
ಮುಕ್ತ ಮನದಲಿ ಧರ್ಮಕಾರ್ಯವ
ಶಕ್ತಿಯಿಂ ಪ್ರತಿವರ್ಷ ಬಿಡದಲೆ ಮಾಡಿರೆನ್ನುತಲೀ

೧೮೩

ಈತೆರದಿ ಹನ್ನೆರಡು ವರುಷದಿ
ತಾತನಪ್ಪಣೆಯಂತೆ ಮಾಡಿದ
ಪ್ರೀತಿ ಪಾತ್ರರು ಆದ ಭಕ್ತರ ಕರೆಸಿ ಮಠಕಾಗಾ
ಓತುವಿಂದಲಿ ಶರಣಬಸವರ
ಪೂತ ಚರಿತೆಯು ನಡೆದ ಕುರುಹಿಗೆ
ರೀತಿಯಲಿ ಶ್ರೀ ಶರಣಬಸವರ ಗುಡಿಯು ಮಾಡ್ರೆಂದೂ

೧೮೪

ಗುಡಿಯು ಕಟ್ಟಿಸುವಂಥ ಸ್ಥಳವ
ನೊಡನೆ ತೋರಿಸಿಕೊಟ್ಟರೀಗಲೆ
ಎಡೆಬಿಡದೆ ಕಾರ್ಯವನು ಮಾಡುವನೆಂದ ಭಕ್ತಜನಾ
ಮೃಡನ ನೆನಸುತ ಮನದಿ ಯೋಚಿಸಿ
ಒಡನೆ ತಾತನು ನುಡಿಯುತೀಪರಿ
ಸಡಗರದಿ ಲಿಂಗೋಜಿ ಭಾವಿಯ ಹತ್ತಿರದ ಜಾಗಾ

೧೮೫

ಬಹಳ ಯೋಗ್ಯದ ಜಾಗವೆನ್ನುತ
ಮಹಿಮೆಯಿಂದಲಿ ಗುಡಿಯ ಕಾರ್ಯವು
ಗಹನವಾದರು ಬಿಡದೆ ಮಾಡಿರಿಯೆಂದ ಶ್ರೀ ತಾತಾ
ಸಹಜದಲಿ ಹಣಕೊಟ್ಟು ಹರಸುತ
ಅಹಿಧರನ ಕೃಪೆಯಲ್ಲಿ ಕಾರ್ಯವ
ಸಹಕರಿಸಿ ಮಹತ್ಯಾಗದಿಂದಲಿ ಕೂಡಿ ಮಾಡ್ರೆಂದೂ

೧೮೬

ಅರವತ್ತೆಂಟರ ವರುಷದೊಳಗಾ
ಪರಮಪಾವನ ಗುಡಿಯು ಕಟ್ಟಲು
ಹರುಷದಿಂದಲಿ ಭಕ್ತಜನಗಳು ಮುಂದೆ ಬರುತಾಗಾ
ವರವಿನೂತನ ಗುಡಿಯ ಕಾರ್ಯವು
ಭರದಿ ಸಾಗಿಸಿ ಭಕ್ತಿ ಭಾವದಿ
ಗುರುತರದಿ ಗುಡಿಗೋಪುರಂಗಳು ಮುಗಿಸಿ ಭಕ್ತಜನಾ

೧೮೭

ಧರೆಯೊಳೆಪ್ಪತ್ತೆಂಟು ವರುಷದ
ಪರಮ ಪಾವನ ಪರ್ವಕಾಲದಿ
ಶರಣಬಸವೇಶ್ವರನ ಮೂರ್ತಿಯು ಸ್ಥಾಪಿಸುತ ತಾತಾ
ಗುರುಕರುಣದಲಿ ದಿವ್ಯಕ್ಷೇತ್ರದಿ
ಪರಶಿವನ ಮಹಶಕ್ತಿ ಪಾತದಿ
ನಿರುಪಮದ ಮಹಜ್ಯೋತಿ ಬೆಳಗಿಸಿ ಭಕ್ತರುದ್ಧರಿಸೀ

೧೮೮

ತಾತನೆಂದರೆ ಕೊಡುವದಾತನು
ತಾತ ಮೂಲೋಕದೊಳು ಖ್ಯಾತಿಯು
ತಾತ ಭಕ್ತರ ಪ್ರೀತನಾಗಿಹ ಹರನ ಕರುಣೆಯಲೀ
ತಾತನೇ ಮಹದಾನಿ ಜಗದೊಳು
ತಾತ ಮಹದಾಸೋಹಿ ಧರೆಯೊಳು
ತಾತನನು ಅಹರ್ನಿಶದಿ ನೆನೆವರು ಧನ್ಯಜಗದೊಳಗೇ

(ಪ್ರಸಂಗ ೧೦)

೧೮೯

ಚೆಲುವ ಕನ್ನಡನಾಡಿನೊಳಗಿಹ
ಕಳೆಯು ಕುಂದದೆ ಬೆಳೆದು ಬಂದಿಹ
ನಳನಳಿಸುವೆಳೆ ಪೈರಿನಿಂ ಶೋಭಿಸುವ ಬಳ್ಳಾರೀ
ಉಳಿಸಿ ಧರ್ಮವ ಬೆಳಸಿ ಸಂಸ್ಕೃತಿ
ಯೊಳಗೆ ಹೆಸರನು ಪಡೆದ ಮಠವೇ
ಇಳೆಯೊಳಗೆ ಕೊಟ್ಟೂರುಸ್ವಾಮಿಯ ಮಠವು ಬೆಳಗುತಲೀ

೧೯೦

ಹಿಂದಿನಾ ಸ್ವಾಮಿಗಳ ನಂತರ
ಮುಂದೆ ಸ್ವಾಮಿಗಳಾರುಯಿರದಲಿ
ಹೊಂದಿಕಿರದಲೆ ಮಠಗಳೆಲ್ಲವು ಕಳೆಯು ಕುಂದಿರಲೂ
ಕುಂದಿದಾಕಳೆ ತುಂಬುವಂಥಹ
ಚಂದನಡೆನುಡಿಯಿಂದ ಕೂಡಿಹ
ಬಂಧುರದ ದೇಶಿಕರ ಹುಡುಕುತ ಪಟ್ಟ ಮಾಡಲಿಕೇ

೧೯೧

ಭಕ್ತ ಜನಗಳು ಸೇರಿ ಒಂದೆಡೆ
ಮುಕ್ತ ಮನದಲಿ ಮಾತನಾಡುತ
ರಕ್ತಿಯಿರದ ವಿರಕ್ತ ದೇಶಿಕರನ್ನು ಅರಸುತಲೀ
ಶಕ್ತಿ ಶ್ರೀಮಂತದಲಿ ಭವ್ಯದಿ
ಭಕ್ತಿಭಾವಕೆ ಮೆರಗು ಗೊಡುವಾ
ದತ್ತಿದಾಸೋಹದಲಿ ಬೆಳಗುವ ಮಠವು ಹೂಬಳ್ಳೀ

೧೯೨

ಮೂರು ಸಾವಿರ ಮಠವು ಧನ್ಯದಿ
ಭೂರಿ ಗುರುಗಂಗಾಧರಾಖ್ಯದಿ
ವೀರ ಶ್ರೀ ಗುರು ಜಗದಗುರುವಾಗಿರುವ ಮಠದೊಳಗೇ
ಚಾರುಗುರು ಮಠದಲ್ಲಿ ಕೂಡುತ
ಆರಿಸುವ ದೇಶಿಕರ ವಿಷಯುವ
ದೂರ ನೋಟದಿ ವಿಷಯ ಚರ್ಚಿಸಿದಂಥ ಭಕ್ತಜನಾ

೧೯೩

ದೂರವಿಹ ಬಳ್ಳಾರಿ ಪುರದಿಂ
ಸಾರಿ ಬಂದಿಹ ಭಕ್ತಜನರಿಗೆ
ಧೀರ ಸಂಗನ ಬಸವದೇಶಿಕರನ್ನು ಸೂಚಿಸುತಾ
ದಾರಿ ತೋರಿಸುವಂಥ ದೇಶಿಕ
ವೀರಶೈವಾಚಾರದಿಂವಿಹ
ಧಾರುಣಿಯೊಳತಿಖ್ಯಾತಿ ಪಡೆವನುಯೆಂದು ಹೇಳುತಲೀ

೧೯೪

ಪರಮ ಗಂಗಾಧರ ಜಗದ್ಗುರು
ಭರತ ವಾಕ್ಯವ ನಡೆಸುತಾಜನ
ಕರೆದು ತಂದರು ದೇಶಿಕರ ಬಳ್ಳಾರಿಪುರವರಕೇ
ನೆರೆದು ಮಠದಂಗಳದಿ ಜನಗಳು
ಪರಮ ತೇಜದಿ ಹೊಳೆವದೇಶಿಕ
ಗುರುವರೇಣ್ಯರ ದಿವ್ಯ ಕೃಪೆಯನು ನಂಬಿ ಹೊಗಳುತಲೀ

೧೯೫

ಪರಮ ಗುರುಗಳ ಹುಡುಕುತಾ ಜನ
ಧರೆಯಳೊಳ ಬಳ್ಳಾರಿಸೇರುತ
ಪರಮ ಷಟ್‌ಸ್ಥಲ ಬ್ರಹ್ಮದುಪದೇಶವನು ಮಾಡಲಿಕೇ
ಭರದಿ ಒಪ್ಪಿಸಿ ತಾತಗೊಂದಿಸಿ
ತೆರಳಿದರು ಹೊಸಪೇಟೆಗಾಗಲೆ
ಕರೆದು ಆತುರ ಸಭೆಯ ನಡೆಸುತ ವಿಷಯ ಚರ್ಚಿಸುತಾ

೧೯೩

ಗುರುವರನ ಪಟ್ಟಾಭಿಷೇಕವ
ಗುರುತರದಿ ಹೊಸಪೇಟೆಯಲ್ಲಿಯೆ
ನೆರೆದು ಮಾಡಲಿಬೇಕುಯೆನ್ನುತ ಸಜ್ಜುಗೊಳಿಸುತಲೀ
ಧರೆಯಲಿಹ ಕಪನಳ್ಳಿ ಶ್ರೀಗಳ
ವರದನುಗ್ರಹವಾಗಿ ದೇಶಿಕ
ನಿರುಪಮದಗುರು ನಿರಾಭಾರಿಯ ಪಟ್ಟದಭಿಷೇಕಾ

೧೯೭

ವರತಪೋಧನ ಚೆನ್ನಬಸವರ
ಕರಕಮಲದಿಂ ಸಡೆದು ಧನ್ಯದಿ
ಧರೆಯಲಿಹ ಕೊಟ್ಟೂರುಸ್ವಾಮಿಯ ಮಠಕೆ ನೇಮಿಸುತಾ
ಪರಮ ಮಠದಧಿಕಾರ ವಹಿಸಿದ
ಗುರುಕರುಣೆ ಪಡೆದಂಥ ದೇಶಿಕ
ಧರೆಯೊಳೊಳಬಳ್ಳಾರಿ ತಾತನ ಕೃಪೆಯು ತಾ ಪಡೆದೂ

೧೯೮

ಎನಿತು ಜನುಮದ ಪುಣ್ಯಫಲವೋ
ಅನುಪಮದ ಗುರು ಕರುಣೆಯಾಯಿತು
ಅನುಭವದ ಅನುಭಾವಿ ದಿವ್ಯಾಮೃತವ ಪಡೆಯುತಲೀ
ಅನಘ ಶ್ರೀಗುರು ಕರದಿ ಜನಿಸುತ
ಸನುಮತದಿ ಅಧಿಕಾರ ವಹಿಸಿದ
ಜನರನೊಪ್ಪಿಸಿದಂಥ ಸಂಗನ ಬಸವ ಶಿವಯೋಗೀ

೧೯೯

ಧರೆಯಲೆಪ್ಪತ್ತೆರಡು ವರುಷದ
ಪರಮನಿಜ ವೈಶಾಖ ಬಹುಳದ
ವರಬೃಹಸ್ಪತಿವಾರದೊಳಗಾಗುರುವನುಗ್ರಹವೂ
ಹರಗುರು ಚರವರರ ಪ್ರೀತಿಗೆ
ಹಿರಿದು ಪಾತ್ರವ ವಹಿಸಿ ಜಗದೊಳು
ವಿರತ ಶ್ರೀಗುರು ತಾತಕೃಪೆಯಲಿ ಸ್ವಾಮಿಯಾಗಿರುತಾ

೨೦೦

ಓಂನಮೋ ಶ್ರೀ ಚನ್ನಬಸವರು
ಓಂನಮೋ ಶ್ರೀ ಪರಮಗುರುಗಳು
ಓಂನಮೋ ಶ್ರೀ ತಾತದಾತನು ನಿತ್ಯದಾಸೋಹೀ
ಓಂನಮೋ ಶ್ರೀ ಕರುಣರೂಪಿಯು
ಓಂನಮೋ ಶ್ರೀ ಪರಮ ತಪಸಿಯೆ
ಓಂನಮೋ ಶ್ರೀ ತಾತನೆನ್ನುತನುತಿಸಿ ಭಕ್ತಜನಾ

(ಪ್ರಸಂಗ ೧೧)

೨೦೧

ಒಂದು ದಿನ ಅರುಣೋದಯದಿತಾ
ನಂದು ಪ್ರಕೃತಿಯ ರಮ್ಯನೋಟದಿ
ಚಂದದಾ ಮರಗಿಡದ ಬಳ್ಳಿಗಳೆಲ್ಲ ನೋಡುತಲೀ
ಅಂದದಮರೇಶ್ವರನ ಕ್ಷೇತ್ರದಿ
ಸುಂದರದ ಪರಿಸರದಿ ತಾತನು
ಸುಂದರದ ಶ್ರೀಪಾದ ಪದ್ಮಗಳಿಡುತ ನಡೆದಾಡೀ

೨೦೨

ನಡೆದು ನಿಲ್ಲುತ ಭಾವಲೋಕದಿ
ಮೃಡನ ಧ್ಯಾನಾಸಕ್ತದಿಂದಲಿ
ಒಡನೆ ಹೊಳೆಯಿತು ಮನವ ಸೆಳೆಯಿತು ಕಲ್ಪಭಸ್ಮವ್ರತಾ
ಸಡಗರದ ಸಂಭ್ರಮದಿ ಮಾಡುವ
ಎಡರು ತೊಡರುಗಳಿಲ್ಲದಲೆತಾ
ಒಡನೆ ಮಾಡಲಿಬೇಕುಯೆಂಬಾತುರದಿ ಶ್ರೀತಾತಾ

೨೦೩

ಕರೆದು ಮರಿದೇವರಿಗೆ ಹೇಳುತ
ಸರಳ ಮನದಲಿ ಭಕ್ತವೃಂದಕೆ
ಹರನ ಕೃಪೆಯಲಿ ಕಲ್ಪಭಸ್ಮದ ವ್ರತವಮಾಡ್ರೆನುತಾ
ಗುರುಗಳಾಜ್ಞೆಗೆ ಹಿಗ್ಗಿಭಕ್ತರು
ಮರಿಯ ದೇವರು ಸಹಿತಯೋಚಿಸಿ
ಧರೆಯೊಳಧಿಕದ್ಭುತಗಮ್ಯಕಾರ್ಯವ ಮಾಡಲೆಳಸುತಲೀ

೨೦೪

ಹರನತೇಜದ ಶ್ರೀ ವಿಭೂತಿಯು
ಗುರುತರದಿ ನಿರುಪಾಧಿಕವ್ರತಾ
ಹರನಜ್ಞಾನದಿ ಉದಿಸಿ ಚಿದ್ಭಸಿತಾಗಿ ಜಗದೊಳಗೇ
ಧರೆಯೊಳಗೆ ಸೋಪಾಧಿಕವು ತಾ
ವರದ ಭಸ್ಮವ ಪಡೆವ್ವುದಕೆ ತಾ
ಪರಿಪರಿಯ ವಿಧವಾಗಿ ಮಾಡುವ ಕ್ರಮವು ಹೇಳುತಲೀ

೨೦೫

ಶಿವನ ಸದ್ಯೋಜಾತ ಮುಖದಲಿ
ನವಕಪಿಲ ವರ್ಣದೊಳು ನಂದೆಯು
ನವ ಹೆಸರು ಗೋಮಾತೆಯಲಿ ಹುಟ್ಟಿರುವ ವಿಭೂತೀ
ಭುವನದೊಳುತಾ ವಾಮದೇವನ
ನವಮುಖದಿ ಜನಿಸಿರುವ ಕಪ್ಪಿನ
ನವಹೆಸರಿನಾ ಭದ್ರೆಯೆಂಬಾಕಳಲಿ ಭಸಿತವದೂ

೨೦೬

ಶಿವನಸುಂದರ ಘೋರ ಮುಖದಲಿ
ಧವಲ ವರ್ಣದ ಸುರಭಿಗೋವಿನ
ಭುವನದಲಿ ಜನಿಸುತ್ತಸಿದ್ಧಿಸಿ ಭಸ್ಮವಾಗಿಹುದೂ
ಶಿವನೆ ತತ್ಪುರುಷಾದ ಶ್ರೀಮುಖ
ಜವದಿ ಜನಿಸಿದ ಧೂಮ್ರ ವರ್ಣದ
ನವದ ಗೋಮಾತೆಯಲಿ ಸಿದ್ಧಿಸಿ ಕ್ಷಾರವಾಗಿಹುದೂ

೨೦೭

ಹರನಶ್ರೀ ಈಶಾನ್ಯ ಮುಖದಲಿ
ತಿರೆಯೊಳಗೆ ತಾ ರಕ್ತ ಬಣ್ಣದ
ಉರುಹಿನಾಕಳ ಸುಮನ ನಾಮದಿ ರಕ್ಷೆ ಸಿದ್ಧಿಸುತಾ
ಧರೆಯೊಳಗೆ ರಕ್ಷೆಯನು ಧರಿಸಲು
ಭರದಿ ಭೂತ ಪ್ರೇತ ಭಯಗಳು
ಯಿರದೆ ಓಡುತ ಶಾಂತಿ ನೆಲಸುತ ಮೋಕ್ಷ ಕಾರ್ಯದೊಳೂ

೨೦೮

ವರವಿಭೂತಿಯು ಧರಿಸಲದರಲಿ
ಗರಳಧರನರ್ಚನೆಯು ಕರ್ಮಾದಿ
ಕರದಿ ಧರಿಸಲು ನಿತ್ಯದಲಿ ತಾ ಅಷ್ಟಸಿದ್ಧಿಯದೂ
ಧರೆಯೊಳಗೆ ಭಸಿತವನು ಧರಿಸಲು
ಹರನ ತತ್ವದ ಭಾಸವಾಗುತ
ಪರಮ ನೈಮಿತ್ತಿಕದ ಕ್ರಿಯೆಗಳು ಸಾಗಿಜಗದೊಳಗೇ

೨೦೯

ಅರಿತು ಪ್ರಾಯಶ್ಚಿತ್ತ ಕಾರ್ಯಾದಿ
ಕೊರತೆಯಿಲ್ಲದೆ ಭಸ್ಮಧರಿಸಲು
ಭರಿತ ಪಾಪವು ದೂರವಾಗುತ ಪುಣ್ಯಲಭಿಸುತಲೀ
ಹರನಭಕ್ತರು ಸರ್ವಕಾರ್ಯಾದಿ
ಗುರು ಕರುಣದಿಂ ಕ್ಷಾರಧರಿಸಲು
ದುರಿತ ಕೇಡುಗಳೆಲ್ಲ ಹೋಗುತ ಸರ್ವಕ್ರಿಯೆ ಶಾಂತೀ

೨೧೦

ಐದು ವಿಧವಾದಾ ವಿಭೂತಿಯು
ಸಾದರದಿ ವಿಷಯವನು ತಿಳಿಯುತ
ಓದಿ ಗ್ರಂಥಗಳಿಂದ ಸೋಪಾಧಿಕದ ಮಹಿಮೆಯನೂ
ಬಾಧಕಗಳಿರದಿದನು ಧರಿಸಲು
ಬೂದಿಯನು ಸಂಸ್ಕರಿಸಿ ಜಗದಲಿ
ಸಾಧನದಿ ಮಾಡ್ವಂಥ ನಾಲ್ಕುವಿಧಿವಿಧಾನದಲೀ

೨೧೧

ಗೋವುಗಳ ಗೋಮಯವು ಭೂಮಿಗೆ
ತಾವು ಬೀಳಿಸದಂತೆ ಹಿಡಿಯುತ
ತಾವು ಸದ್ಯೋಜಾತ ಮಂತ್ರವ ಪಠಿಸಿ ಭಕ್ತಿಯಲೀ
ತಾವು ಹೇಳುತ ಮಂತ್ರ ಕ್ರಮದೊಳು
ತಾವು ಮಾಡಿದ ಉಂಡೆಯನುತಾ
ತಾವು ಒಣಗಿಸಿ ಸುಟ್ಟು ಅಗ್ನಿಯಲತಿ ಕ್ರಮದಿ ಮಾಡೀ

೨೧೨

ಜಗದ ಜನ ಕಲ್ಯಾಣಗೋಸುಗ
ಜಗದ ಜನಗಳ ಶಾಂತಿಗೋಸುಗ
ಜಗದೊಳತಿ ಘನಕಾರ್ಯ ಮಾಡುವ ಮಹಿಮರೆನ್ನಿಸುತಾ
ಜಗದೊಳಗೆ ತಾ ಕಲ್ಪಭಸ್ಮವ
ಜಗದ ಜನಗಳ ಬಾಳು ಬೆಳಗಲು
ಸೊಗದಿ ಮಾಡುವ ಹಂಬಲವು ಶ್ರೀ ತಾತಗಾಗುತಲೀ

೨೧೩

ವೀರಶೈವರ ಧರ್ಮಕ್ರಮದಲಿ
ಮೂರು ತೆರನಲಿ ಭಸ್ಮಸಿದ್ಧತೆ
ಮೂರುಯೆಂದರೆ ದೀಕ್ಷ ಶಿಕ್ಷಾ ಕ್ರಿಯಾಭಸಿತವದೂ
ವೀರ ಗುರುವರ ಲಿಂಗಜಂಗಮ
ಸಾರಪಾದೋದಕದಿ ಸಿದ್ಧಿಸಿ
ವೀರಶೈವರ ಧರ್ಮದಷ್ಟಾವರಣದಂಗವದೂ

೨೧೪

ಧರೆಯೊಳಗೆ ಆನಂದನಾಮದ
ಹರನಪುಣ್ಯದ ನಿವ್ಯನರ್ಷದಿ
ಪರಮ ಪಾವನ ಮಾರ್ಗಸಿರಮಾಸದಲಿ ಶ್ರೀತಾತಾ
ವರದ ಕಲ್ಪದ ಭಸ್ಮಮಾಡುವ
ವರದ ವ್ರತವನು ಮಾಡುವಾಥಹ
ಗುರುತರದ ಹೊಣೆಯರಿತು ಮಾಡುವ ತಾತ ಹುಮ್ಮಸದೀ

೨೧೫

ತುಂಬಿದಾನಂದದಲಿ ಶ್ರೀಗಳು
ಹೊಂಬಿಸಲು ಶಿವಬಾಳ ಬೆಳಕಲಿ
ತುಂಬಿಗೆಯು ಆನಂದನಾಮದ ವರ್ಷದಲಿ ಕೂಡೀ
ಕೊಂಬು ಚೂಪಿನ ಸೀಮೆ ಆಕಳ
ದುಂಬಿ ಬಗೆಯಲಿ ತರಿಸಿ ತಾತನು
ನಂಬಿ ಪೂಜಿಸಿ ಮಾರ್ಗಸಿರ ಮಾಸದಲಿ ಶ್ರೀತಾತಾ

೨೧೬

ಎತ್ತ ನೋಡಿದಡತ್ತ ಭಕ್ತರು
ಪೊತ್ತದಲಿ ಭಕ್ತಿಯಲಿ ಸೇವೆಯು
ಹೊತ್ತ ಹೊಣೆಗಾರಿಕೆಯ ಭಾವದಿ ಕಾರ್ಯಮಾಡುತಲೀ
ಮತ್ತೆ ಮಾಘದ ಮಾಸದೊಳುತಾ
ಪೋತ್ತದಲಿ ಕೂಡಿಸಿದ ಭಸ್ಮವ
ಚಿತ್ತದೇಕಾಗ್ರದಲಿ ಪೂಜೆಯ ಮಾಡಲೆಳಸುತಲೀ

೨೧೭

ಗುರುವರರು ಚರವರರು ಕೂಡುತ
ಧರೆಯೊಳಧಿಕದ ಜನರು ಸೇರುತ
ಎರಡನೆಯ ಕಲ್ಯಾಣವೆನಿಸಿತು ಕ್ಷೇತ್ರಪಾವನದೀ
ತಿರೆಯೊಳಗೆ ಅಮರೇಶ್ವರನು ತಾ
ಕೊರತೆಯಿಲ್ಲದೆ ಕೃಪೆಯು ಮಾಡಿದ
ನರರಿಗೊದಗಿದ ಪರಮಸುಖವದು ತಾತನಾಶ್ರಯದೀ

೨೧೮

ತಾತನನು ಕಂಡಿರುವ ಭಕ್ತರು
ಪೂತಚಿನ್ಮಯನೆಂದು ನುತಿಸುತ
ಸಾತಿಶಯದಲಿ ನಡೆವ ಕಾರ್ಯಕೆ ಪೂರುಹೋಗುತಲೀ
ಮಾತುಗಳು ನುಡಿಮುತ್ತು ತಾತನ
ಪ್ರೀತಿ ವಾತ್ಸಲ್ಯದಳು ಕರುಣೆಯು
ತಾತನನು ಹೊಗಳುತ್ತ ಭಕ್ತರು ಪೂಜಿಮಂಟಪದೀ

೨೧೯

ಧರೆಯುಲಿಪ್ಪತ್ತೊಂದು ಮಂಟಪ
ಭರದಿ ನಿರ್ಮಿಸಿದಂಥ ಭಕ್ತರು
ಗುರುಚರರ ಕೂಡಿಸುತ ಪೂಜಿಸಿ ಭಕ್ತಿಭಾವದಲೀ
ಧರೆಯ ಕಲ್ಪದ ಭಸ್ಮನಿಧಿಯನು
ಭರದಿ ಉದ್ಘಾಟಿಸುತ ಜಗದೊಳು
ಪರಮಗುರು ಜಂಗಮರ ಸನ್ನಿಧಿಯಲ್ಲಿ ಶ್ರೀತಾತಾ

೨೨೦

ಸಡಗರದ ಸಂಭ್ರಮದಿ ಭಕ್ತರು
ಮೃಡನ ರೂಪದಿಯಿರುವ ತಾತನು
ನಡೆಸಿ ಕೊಟ್ಟಿಹ ಕಲ್ಪಭಸ್ಮದ ಕೆಲಸನೋಡುತಲೀ
ಪೊಡವಿಯಲಿ ಅತಿಖ್ಯಾತಿಹೊಂದಿತು
ಹಿಡಿದವ್ರತ ಕ್ರಮದಲ್ಲಿ ನಡೆಸುತ
ಉಡುವಿನಾ ಭಾವದಲಿ ಭಕ್ತಿಯು ಬೆಳಗಿದೀತಾತಾ

(ಪ್ರಸಂಗ ೧೨)

೨೨೧

ತೆಲುಗುದೇಶದೊಳಿರುವ ಹಳ್ಳಿಯು
ಚಲುವ ಸಂತೆಯು ಕೂಡಲೂರಿನ
ಒಳಗೆಯಿರುವಾ ಉಳ್ಳಿಗಡ್ಡೆ ಬಸಪ್ಪ ನಾಮದೊಳೂ
ಹಲವು ವರುಷಗಳುರುಳಿ ಹೋದರು
ಹಲುಬುತಲಿ ಭದ್ರಮ್ಮಸತಿಯೊಳು
ಒಲವಿನಲಿ ಗಂಡೊಂದು ಹಡೆಯುದೆ ಹೆಣ್ಣು ಮೂರಿರಲೂ

೨೨೨

ಕುಲದ ಗೌರವ ಬೆಳಗುವಂಥಹ
ಗೆಲುವಿನಲಿ ಗಂಡೊಂಪು ಪಡೆಯುದೆ
ಹಲವು ಜನಗಳು ಹಲವು ರೀತಿಯ ಮಾತನಾಡಿರಲೂ
ಹೊಲಬುಗೆಟ್ಟವರಂತೆ ದುಃಖಿಸಿ
ಹಲವು ರೀತಿಗಳಿಂದ ಚಿಂತಿಸಿ
ಕಲುಷಿತದಿ ಮಬ್ಬಿರುವ ಮನವನು ತೊಳೆಯುವುದುಯೆಂತೋ

೨೨೩

ಸತಿಯು ಬಯಸಿದ ಗಂಡು ಮಗುವಿನ
ಅತಿ ಬಯಕೆ ಕೈಗೂಡ್ವದೆಂತೋ
ಮತಿಯು ಭ್ರಾಂತಿಯು ಕಳೆಯಲಿಕೆತಾ ಸೊರಗಿಚಿಂತಿಸಿದಾ
ಹಿತವ ಬಯಸುವ ತಾತನಲ್ಲಿಗೆ
ಜೊತೆಗೆ ಸತಿಯನು ಕರೆದು ಕೊಂಡಾ
ಣತಿಯು ಪಾಲಿಸಲೆಂದು ಬಸವಪ್ಪಂದುಪಯಣಿಸಿದಾ

೨೨೪

ತಾತನೊಳಬಳ್ಳಾರಿ ಸೇರುತ
ಪೂತ ಚಿನ್ಮಯಿ ಕ್ಷೇತ್ರನೋಡುತ
ಸಾತಿಶಯದಲಿ ಬೆಳಗುವಂಥಹ ತಾತನನು ಕಂಡೂ
ಭೀತಿಯಿಂದಲಿ ತಾತಗೊಂದಿಸಿ
ಭ್ರಾಂತಿ ಬಯಕೆಗಳನ್ನು ವಿವರಿಸಿ
ಯಾತರದ ಸುಖಸತಿಗೆಯಿರದಲೆದತ್ತು ಮಗನಿಂದಾ

೨೨೫

ತನ್ನ ಮನದಭಿಲಾಷೆಯೆಂತೆಯೆ
ತನ್ನ ಅಣ್ಣನ ಮಗನದತ್ತಿಗೆ
ತನ್ನ ವಂಶೋದ್ಧಾರಕಾಗಿಯೆ ತೆಗೆದುಕೊಂಡಿರಲೂ
ತನ್ನ ಸತಿಗಿರದನಿತು ಶಾಂತಿಯು
ತನ್ನ ಸತಿಬಯಕೆಯನು ತಿಳಿಸುತ
ಉನ್ನತಾಸನದಲ್ಲಿ ಕುಳಿತಿಹ ತಾತನನು ನೋಡೀ

೨೨೬

ಗಂಡು ಮಗುವನು ಬಯಸಿದಂಥಹ
ಗಂಡ ಹೆಂಡತಿಯನ್ನು ಹರಸುತ
ಗಂಡು ಮಗುವನು ಪಡೆವಳೆನ್ನುತ ತಾತ ಸಂತೈಸೀ
ಹೆಂಡತಿಯುತಾ ಊರಬಸವಗೆ
ಚೆಂಡಿ ಮನದಲಿ ಸೇವೆ ಉದಯದಿ
ಖಂಡಿತದಿ ಮಾಡುತ್ತ ಬಿಡದಲೆ ಪೂಜೆಸಲ್ಲಿಸುತಾ

೨೨೭

ಮೂರು ತಿಂಗಳು ಕಳೆದ ಮೇಲೆಯೆ
ಊರ ಬಸವನು ಪೂಜೆ ಮಹಿಮೆಯ
ಪಾರ ಭಕ್ತಿಗೆ ಮೆಚ್ಚಿ ಪುತ್ರನ ಪಡೆವಳೆನ್ನುತಲೀ
ಚಾರು ಕರದಿಂ ಕಾಯಿಹಣ್ಗಳ
ಮಾರಹರ ಯೋಗೀಂದ್ರ ತಾತನು
ಧೀರಮನದಲಿ ಸತಿಪತಿಯ ಹರಸುತ್ತ ಬೀಳ್ಕೊಟ್ಟೂ

೨೨೮

ಕಲೆತು ಸಂತೆಯ ಕೂಡಲೂರಿಗೆ
ಗೆಲುವು ಮನದಲಿ ಬಂದ ಸತಿಪತಿ
ಬಲುಭಕುತಿಯಿಂ ಊರಬಸವಗೆ ಪೂಜೆಮಾಡುತಲೀ
ಒಲಿದು ಬಸವನುಯಿವರ ಪೂಜೆಗೆ
ಚಲುವ ಚನ್ನಿಗ ಗಂಡು ಮಗುವನು
ಹಲವು ತಿಂಗಳು ಗತಿಸಿ ಪಡೆಯಲು ಕಾರಣಿಕವಾಗಿ॥

೨೨೯

ಬಸವಕೃಪೆಯಲಿ ತಾತ ಕರುಣಿಸಿ
ಎಸೆವ ಪುತ್ರನ ಭಿಕ್ಷೆನೀಡಿದ
ಅಸಮನಯನನ ತೇಜವಿರುವಾ ತಾತನನು ಹೊಗಳೀ
ಹೊಸತನದ ಚೇತನವ ಪಡೆದಿಹ
ನಸುಕಿನಲಿ ಪಯಣವನು ಮಾಡಿಯೆ
ಬಿಸುಗದಿರ ನಡುನೆತ್ತಿಗೇರಿರೆ ಮಠಕೆ ತಾತಲುಪೀ

೨೩೦

ನಡೆದ ವಿಷಯವ ತಿಳಿಸಿ ತಾತಗೆ
ಪಡೆದುಕೊಂಡಿಹ ಗಂಡು ಮಗುವಿನ
ಸಡಗರದ ನವನಾಮ ಕರಣಕೆ ಬಿನ್ನಹವ ಮಾಡೀ
ಪೊಡವಿಯೊಳು ಅತಿಖ್ಯಾತಿ ಪಡೆದಿಹ
ಮೃಡನ ರೂಪದ ತಾತಗೊಂದಿಸಿ
ಮೃಡನ ಭಕ್ತಿಯ ಭಾವದಿಂ ಬಸವಪ್ಪನಿಂತಿರಲೂ

೨೩೧

ನಿರುಪಮದ ಶಿವಧ್ಯಾನದಿಂ ತಾ
ಸರಳ ಭಾವದ ಯೋಗಮುಖದಲಿ
ಹರನ ಅಪ್ಪಣೆಯಿಲ್ಲವೆನ್ನುತ ತಾತನುಡಿಯುತಲೀ
ಮರುಗದಲೆ ಗುರುಭಕ್ತಿಭಾವದಿ
ಸರಳದಲಿಶಿಶುನಾಮಕರಣವ
ಪರಮ ಪರತರಕ್ಕೆಬಸವನೆಂದೇ ಮಾಡಿರೆನ್ನುತಲೀ

೨೩೨

ಉಳ್ಳಿಗಡ್ಡೆ ಬಸಪ್ಪ ಬಂದನು
ಒಳ್ಳೆ ಮನದಲಿನಾಮಕರಣವ
ಒಳ್ಳೆ ಸೊಗಸಿನ ಕಾರ್ಯ ಮಾಡಿದ ತಾತಕೃಪೆಯೊಳಗೇ
ಉಳ್ಳ ಶಿವಭಲ ಭಕ್ತಿಭಾವದಿ
ಡಿಳ್ಳರಹಿತದ ಶುದ್ಧ ಮನದಲಿ
ಅಳ್ಳೆದೆಯ ಬಸವಪ್ಪನೆನಿಸದೆ ಧೀರತನದೊಳಗೇ

೨೩೩

ತಾತ ಊರಿಗೆ ಬರುವ ತನಕಾ
ಭೀತನಾಗದೆ ಪೂಜೆ ಮಾಡಿದ
ನಾಥ ರಕ್ಷಕ ತಾತನೆನ್ನುತ ಐದು ವರ್ಷದೊಳೂ
ಪೂತ ಚಿನ್ಮಯ ಬಸವಪೂಜೆಯ
ಓತುವಿಂದಲಿ ಬಿಡದೆ ಮಾಡುತ
ತಾತ ಊರಿಗೆ ಬಂದು ಮಂಗಳ ಕಾರ್ಯಮುಗಿಸೆನಲೂ

೨೩೪

ಧರೆಯೊಳಗೆ* ನಳನಾಮ ವರುಷದ
ಪರಮ ಮಾಘದ ಶುದ್ಧದೊಳಗಾ
ಪರಮ ಪಾವನ ತಾತಬಂದನು ಭಕ್ತಿಬಿನ್ನಹಕೇ
ನೆರೆದು ಹರಗುರು ಚರವರೇಣ್ಯರು
ಪರಮ ಪಂಡಿತರೆಲ್ಲಸೇರುತ
ನಿರುಪಮದ ಮಹಗಣಾರಾಧನೆ ಮಾಡಿ ಮಂಗಲದೀ

೨೩೫

ಚಿತ್ತ ಚಂಚಲ ಮಾಡಿಕೊಳ್ಳದೆ
ದತ್ತು ಮಗನನು ಒಳ್ಳೆನೋಟದಿ
ಮುತ್ತಿನಂಥಹ ಮಗುವ ಜೊತೆಯಲಿ ನೋಡಿರೆನ್ನುತಲೀ
ಉತ್ತಮದ ಗುಣಭಾವ ತೋರಿಸಿ
ಎತ್ತಣಿಂದಲಿ ನಿಂದೆಬಾರದೆ
ಮೊತ್ತದಲಿ ಸತಿಪತಿಗೆ ಬೋಧಿಸಿ ಹರಸಿದಾ ತಾತಾ

---

* ಪದ್ಯ ೨೩೪ ನಳನಾಮ ವರ್ಷ :– ೧೯೭೭

೨೩೬

ಶಿವಯೋಗಿ ಶ್ರೀ ಬೋಳಬಸವರು
ಧವಳ ತೇಜದ ಹಾಲ್ವಿಶ್ರೀಗಳು
ಶಿವನರೂಪದ ತಾತನಾ ಮಹಿಮೆಯನು ಹೊಗಳುತಲೀ
ಶಿವಕವಿಯು ದೊಡ್ಡಯ್ಯಶಾಸ್ತ್ರಿಗ
ಳವರು ತಾತನ ಪರಮಮಹಿಮೆಯು
ಸವೆಯದಾ ಸದ್ಭಕ್ತಿಭಾವದಿ ಹೇಳಿಭಕುತರಿಗೇ

೨೩೭

ಚರವರರು ಶ್ರೀ ಬೋಳಬಸವರು
ಪರಮ ಮೃತ್ಯುಂಜಯರು ಮರಿಗಳು
ಸುರುಚಿರದ ಶ್ರೀ ಚೌಕಿಮಠದಾ ದೇಶಿಕರು ಸೇರೀ
ಕರುಣೆಯಾಪಾಲ್ತೂರು ಶ್ರೀಗಳು
ಧರೆಯೊಳಿರುವಲ್ಲಮನ ಊರಿನ
ಸರಳಭಾವದ ಬಸವಲಿಂಗಾ ಶಾಸ್ತ್ರಿಗಳು ಸಹಿತಾ

೨೩೮

ಸೇರಿಸಕಲರು ಹರುಷದಿಂದಲಿ
ಭೂರಿಗಣ ತೃಪ್ತಿಯನು ಮಾಡಿಸಿ
ಸಾರಿಹರಸಿದರುಳ್ಳಿಗಡ್ಡೆ ಬಸಣ್ಣ ಭಕ್ತನನೂ
ಘೋರ ಸಂಸಾರದಲಿ ಬರುವಾ
ಸೇರಿ ರಾಗದ್ವೇಷವಿರುವಾ
ಆರುರಿಪುಗಳ ದುಃಖ ಕಳೆವಾ ತಾತನನು ಹೊಗಳೀ

(ಪ್ರಸಂಗ ೧೩)

೨೩೯

ಹಿಂತಿರುಗಿ ಬಂದವರ ಮಠದೊಳು
ಚಿಂತೆಯಲಿ ಮನಮಗ್ನವಾಗಿರೆ
ಅಂತರಂಗದಿ ಭಕ್ತನೋರ್ವನಕೂಗು ಕೇಳ್ಬರಲೂ
ಕುಂತಿರುವ ತಾತಾಗಯೋಳುತ
ಯೆಂತು ಏನೋಯೆಂದ ತಾತನು
ಅಂತು ತಾತನ ಕೈಯ ಬೆಳಕಲಿ ನದಿಗೆ ಬಂದಾಗಾ

೨೪೦

ಹಿಂದೆ ಬಂದಿರುವಂಥ ಭಕ್ತರು
ಬಂದ ಕಾರಣ ಕೇಳಿ ತಾತನ
ನಂದು ವಿಸ್ಮಯರಾಗಿ ನಿಲ್ಲುತ ತಾತ ಸನಿಹದಲೀ
ಒಂದು ಕಡೆಯಿಂಪಿಡಿದ ಬೆಳಕನು
ನಂದಿಸದೆ ತಿರುತಿರುಗಿ ಹಿಡಿಯುತ
ಒಂದೆ ಚಿತ್ತದಿ ನೋಡಲಾಗಲೆ ಕಂಡ ಭಕ್ತೋರ್ವಾ

೨೪೧

ನದಿಯ ನೀರೊಳು ಮುಳುಗುವಂಥಹ
ಒದಗಿವಾಪತ್ತಿನಲಿಸಿಲುಕಿದ
ಗದಗವದಿ ತಾತನನು ನೆನಸುತ ಮುಳುಗಿ ತೇಲುತಲೀ
ಹದುಳದಲಿ ಬಾ ಎಂದ ತಾತನು
ಸದಯ ಹೃದಯದಿ ಕೈಯನೀಡಲು
ಬದಿಗೆ ಬಂದಿತು ನೀರರಝುರಿಯುದು ಭಕ್ತನೊಡಗೂಡೀ

೨೪೨

ಚಾಚಿ ಕೈಯನು ಹಿಡಿದು ತಾತನು
ಬಾಚಿ ಮೇಲೇಳಿಸುತ ಭಕ್ತನ
ಕೀಚುದನಿಯನು ಗುರುತು ಹಿಡಿಯುತ ತಾತ ಮೈದಡವೀ
ತೋಚಿದುದು ರಾಮಣ್ಣ ಭಕ್ತಗೆ
ನಾಚಿಹೇಳಿತು ಮನವದಾಗಲೆ
ಸೂಚಿಸುತ ತಾನಂಬಿ ಕರೆಯಲು ಓಯೆಂದ ತಾತಾ

೨೪೩

ಅಂದು ಸೂಗೂರಿಂದ ಹೊರಡಲು
ಕುಂದು ಕೊರತೆಯ ಭಾವದಿಂದಲಿ
ಬಂದ ಪಯಣವು ಸುಗಮವಾಗದೆ ಹೊತ್ತು ಕಳೆದಿರಲೂ
ಅಂದು ಸಂಜೆಯ ಹೊತ್ತಿನೊಳು ತಾ
ಮುಂದಗಮನದಿ ನದಿಯೊಳಿಳಿಯುತ
ಮುಂದೆ ನಡೆಯುತ ಕಾಲ ಹೊಳೆಯಲಿ ತಪ್ಪುದಾರಿಯಲೀ

೨೪೪

ತನ್ನ ಹೆಜ್ಜೆಯು ತಪ್ಪಿತೇಲುತ
ಇನ್ನು ದಾರಿಯು ತಪ್ಪಿದೆನ್ನುತ
ಉನ್ನತದಿ ಕೂಗುತ್ತ ತಾತನ ಬೇಡಿ ಮೊರೆಯಿಟ್ಟೂ
ಇನ್ನು ಬದುಕೆನು ಯೆಂಬ ಭಕ್ತನ
ಬನ್ನಗೆಟ್ಟಾ ಬದುಕಿದೀತನ
ನನ್ನಿಯಲಿ ಕೈಹಿಡಿದು ತಾತನ ಪಾದಗಳ ಹಿಡಿದೂ

೨೪೫

ತಾತ ನಿನ್ನಯ ಕೃಪೆಯುಯಿರಲೀ
ಭೀತ ಭಕ್ತನಿಗೆಲ್ಲಿ ಭಯವದು
ಕಾತರದಿ ಕಂಗೆಟ್ಟು ಭಕ್ತರ ಕಾಯುವಾ ತಾತಾ
ಪಾತಕಿಗಳನು ಪಾರುಮಾಡುವ
ಪೂತ ಚಿನ್ಮಯರಾದ ತಾತನ
ಸಾತಿಶಯದಾ ದಿವ್ಯಪಾದವ ಹಿಡಿದು ನುತಿಸುತಲೀ

೨೪೬

ಕರೆದು ತಂದರು ಮಠಕೆ ಭಕ್ತನ
ಮರಸಿ ಭೀತಿಯು ಮನಕೆ ಧೈರ್ಯವ
ತರುತ ರಾಮಣ್ಣೆಂಬ ಭಕ್ತಗೆ ತೀರ್ಥಕೊಡುತಾಗಾ
ಹರುಷದಿಂದಲಿ ವರಪ್ರಸಾದವ
ಕರುಣದಲಿ ಕೃಪೆಮಾಡಿತಣಿಸುತ
ಪರಮಪಾವನ ಚನ್ನಬಸವನು ತಾತನಾಗಿರುತಾ

೨೪೭

ಬೆಳಗಿನೊಳು ರಾಮಣ್ಣ ಭಕ್ತನು
ಚಲುವ ತಾತನ ಪಾದಕೊಂದಿಸಿ
ನಲುವಿನಿಂದಲಿ ಗದ್ದುಗೆಗೆ ಅಭಿಷೇಕ ಮಾಡಿಸುತಾ
ಮಲಿನ ಮನವನು ತೊಳೆದು ಬೆಳಗಿಸಿ
ಬಳಿಕ ಬದುಕಲಿ ಬೆಳಕ ಕಾಣುತ
ತಿಳಿಮನದಿ ತಾ ತಿರುಗಿ ಬಂದನು ತನ್ನ ಊರಿಂಗೇ

೨೪೮

ಜೀವನದಿಯಲಿ ಕಾಲು ಸೋಲಲು
ಜೀವಿಗಳ ಪರಿಪರಿಯ ಬಾಧೆಯ
ಪಾವನಾತ್ಮಕ ಪರಮ ತಾತನು ಕಳೆವ ಕರುಣಾಳೂ
ಭೂವಲಯದೊಳು ಭಕ್ತಿಭಾವದಿ
ದೇವ ನಿನ್ನಯ ಕೃಪೆಯು ಕವಿಗಿಹ
ದಾವ ಪರಿಯಲಿ ಒಣ್ಣಿಸುವ ನೀ ಸಿದ್ಧರಾಮಯ್ಯಾ

**(ಪ್ರಸಂಗ ೧೪)**

೨೪೯

ಗುರುಮಠದ ದೊಡ್ಡಯ್ಯ ಶಾಸ್ತ್ರಿಯು
ಯಿರುತ ನಾಗರಹಾಳಿನೊಳು ತಾ
ಪರಮ ಪಂಡಿತರೆಂಬ ಖ್ಯಾತಿಯು ಪಡೆದು ಜಗದೊಳಗೇ
ಶರಣರಾಗಿ ಶಿವಾನುಭಾವದ
ತಿರುಳು ತಿಳಿಸುತ ನಾಡ ಜನರಿಗೆ
ಸರಳ ಭಾವದ ಜೀವನವು ತಾ ಶಿವಮಯವು ಆಗೀ

೨೫೦

ಹೊಗಳಿಕೆಗೆ ತಾವೆಂದು ಹಿಗ್ಗದೆ
ತೆಗಳಿಕೆಗೆ ತಾವೆಂದು ಕುಗ್ಗದೆ
ಬಗೆಬಗೆಯ ಬಣ್ಣವನು ತೋರದೆ ಸಹಜ ಬಾಳಿನೊಳೂ
ಸುಗಮದಲಿ ಶಾಸ್ತ್ರವನು ಬೋಧಿಸಿ
ಜಗದ ಜನರಿಗೆ ಜ್ಞಾನಕೊಡುತಲಿ
ಮಿಗಿಲೆನಿಸಿ ಮರೆಯದಲೆ ಕಿಂಕರ ಭಾವದಲಿ ನಡೆದೂ

೨೫೧

ಬಿರುದುಗಳ ಭ್ರಮೆಯಿರದಧೀರರು
ಧರೆಯೊಳೋಳಬಳ್ಳಾರಿ ತಾತನು
ಕರೆಯುತಲಿ ದೊಡ್ಡಪ್ಪನವರೆಂದತಿಮುದದಿ ಜಗದೀ
ಪರಮ ತಾತಗೆ ಸರ್ವವಿಧದಲಿ
ಭರಿತ ಭಾವದಿ ಸೇವೆ ಮಾಡಿದ
ಗುರುವರೇಣ್ಯರ ಕೃಪೆಯು ಪಡೆದಿಹ ಧನ್ಯಶಾಸ್ತ್ರಿಗಳೂ

೨೫೨

ಇಂಥ ಪಂಡಿತ ಶಾಸ್ತ್ರಿಗಳಿಗಾ
ಸ್ವಂತ ಊರಲಿ ಭಕ್ತಜನಗಳು
ಪಂಥದಿಂ ಸನ್ಮಾನ ಮಾಡುವ ಕಾರ್ಯಕಣೆಯಾಗೀ
ಅಂತು ಎಪ್ಪತ್ತೇಳು ಜನವರಿ
ಗಂತು ಸನ್ಮಾನವನು ಮಾಡುತ
ಕಂತು ಹರಯೋಗೀಂದ್ರ ತಾತನ ಸನ್ನಿಧಾನದೊಳೂ

೨೫೩

ನೆರೆಯ ಗ್ರಾಮದ ದೂರಜನಗಳು
ಗುರುತರದ ಭಾವದಲಿ ಸೇವೆಸು
ನಿರುಪಮದ ಘನಕಾರ್ಯ ಮಾಡುತ ಶಿವನಕೃಪೆಯೊಳಗೇ
ಯೆರಡನೆಯ ಶಿವನಾದ ತಾತನು
ಗುರುಕರುಣದಲಿ ಶಾಲು ಹೊದಿಸುತ
ಹರಸುತಲಿ ದೊಡ್ಡಯ್ಯಶಾಸ್ತ್ರಿಗೆ ಹಾರಹಾಕುತಲೀ

೨೫೪

ಸುಂದರದ ಹಾರವನು ಹಿಡಿಯುತ
ಚಂದದಿಂ ನುಡಿಮುತ್ತಿನಿಂದಲಿ
ಅಂದು ತಾತನ ಮಹಿಮೆ ಹೇಳುತ ಶಾಸ್ತ್ರಿಗಳು ಜನಕೇ
ಕುಂದಿರದ ಗಣ ತೃಪ್ತಿಕಾರ್ಯಕೆ
ಮುಂದೆ ಮಂಡಿಸಿದಂಥ ಭಕ್ತರ
ನಂದು ಹೊಗಳಿದ ಶಾಸ್ತ್ರಿಗಳಿ ತಾ ಧನ್ಯಜಗದೊಳಗೇ

**(ಪ್ರಸಂಗ ೧೫)**

೨೫೫

ಕೆಲವು ದಿನಗಳು ಕಳೆದನಂತರ
ಹಲವು ಭಕ್ತರು ಬಂದು ತಾತಗೆ
ಲಲಿತವಹ ಶ್ರೀಶೈಲ ಕ್ಷೇತ್ರಕೆ ಹೋಗಬೇಕೆಂದೂ
ಅಲಘು ಶ್ರೀ ತಾತನನು ಕರೆಯುತ
ಚಲುವು ಯಾತ್ರೆಗೆ ಬರುವುದೆನ್ನುತ
ತಿಳಿದು ಕೇಳುತ ತಾತನೊಪ್ಪಿಸಿ ಹೊರಡಲನುವಾಗೀ

೨೫೬

ದಕ್ಷಿಣದ ಕೈಲಾಸವೆನ್ನುವ
ಅಕ್ಷಯದ ಪದಕೊಡುವತಾಣವು
ದಕ್ಷದಿಂ ಶ್ರೀಶೈಲ ಶಿಖರವ ನೋಡಿದವರ್ಗೆಲ್ಲಾ
ಚಕ್ಷು ಪುಣ್ಯದಿ ಪೂನರ್ಜನ್ಮವು
ಪಕ್ಷಪಾತವುಯಿರದೆ ಸೋಕದೆ
ರಕ್ಷಿಪರುಮಲ್ಲಯ್ಯ ಕೃಪೆಯಲಿ ಲಿಂಗದರ್ಶನದೀ

೨೫೭

ಇಂಥ ಕ್ಷೇತ್ರಕೆ ತಲುಪಿ ತಾತನು
ಅಂತು ಭಕ್ತರ ಜೊತೆಗೆ ಬಂದಿಹ
ನೆಂತು ಹೊಗಳಲು ಸಾಲದಾಗಿಪ ಭಕ್ತಜನಭಾಗ್ಯಾ
ನಿಂತು ಕೈಮುಗಿದಿರುವ ತಾತನು
ಕಂತುಹರ ಲಿಂಗಕ್ಕೆ ಮಂಗಲ
ಸಂತಸದೆ ತಾ ಮಾಡಿಸುತ್ತಲಿ ಭಕ್ತಜನಗೂಡೀ

೨೫೮

ಗುರುತರದಲಾ ವೀರಶೈವರ
ವರಪಂಚಪೀಠಗಳಲೊಂದಾ
ಪರಮ ಶ್ರೀಗುರು ಪಂಡಿತಾರಾಧ್ಯೆಂಬ ಪೀಠವದೂ
ಸುರುಚಿರದಿ ಶ್ರೀಶೈಲದೊಳಗಾ
ಗುರು ಜಗದ್ಗುರು ಪೀಠವಾಗಿಹ
ಧರೆಯೊಳಗೆ ತಾ ವಿಶ್ವಧರ್ಮವು ಆಗಿಬೆಳಗಿಹುದೂ

೨೫೯

ಭರದಿ ಬರುತಲಿ ಪೀಠಕೊಂದಿಸಿ
ಗುರುವಿರಕ್ತರ ಕಲಹ ನೆನಸದೆ
ದೊರಕಿರುವ ಭಾಗ್ಯಕ್ಕೆ ತಾ ಹಿರಿಹಿಗ್ಗಿದಾ ತಾತಾ
ಗುರುವು ತಾನೆಂದಾಗ ದೊರೆಯುದೆ
ಕರುಣದಲಿ ಕಿಂಕರದಿ ಬರುವುದು
ಧರೆಯ ಭಕ್ತರು ಗ್ರಹಿಸಿದಾಗಲೆ ಗುರುವು ಆಗುವುದೂ

೨೬೦

ಬೆಳಗಿನೊಳಗೆದ್ದಿರುವ ತಾತನ
ಅಲಘು ಶ್ರೀ ಪಾದಕ್ಕೆವಂದಿಸಿ
ಬಳಿಕ ಹೇಳಿದ ವಿರೂಪಾಕ್ಷಯ್ಯಂದು ತಾತನಿಗೇ
ಚೆಲುವ ಕದಳಿಯ ಬನದಿ ತಾತನ
ಬೆಳಗಿನಾ ಪೂಜೆಯದು ಮಾಡಲು
ಹಲವು ಬಗೆಯಲಿ ಹೇಳಿವೊಪ್ಪಿಸಿ ನಡೆದು ಒಡಗೂಡೀ

೨೬೧

ದಂಡ ಕಾರುಣ್ಯದಲಿ ಶೋಭಿಪ
ಕಂಡ ಕಣ್ಣಿಗೆ ನಲಿವು ನೀಡುವ
ದಂಡೆಯೊಳು ಹರಿವಂಥ ಕೃಷ್ಣಾನದಿಯ ಸೊಬಗಿನೊಳೂ
ದಂಡೆಸನಿಹದಿ ಗಂಗೆ ಹರಿವಳು
ಕಂಡು ಕಾಣಿಸದಂಥ ಆಳದಿ
ದಿಂಡಿನಲಿ ತಿರುಗ್ವಂಥ ಮೃಗಗಳ ಹಾವಳಿಯುಗೂಡೀ

೨೬೨

ಕದಳಿ ಬನದಲಿ ನಡೆದು ಭಕ್ತರು
ಬದುಕಿನಲಿ ಬೆಳಕನ್ನು ಕಂಡರು
ಹದುಳದಲಿ ಸೇರುತ್ತ ತಾತನ ಕೃಪೆಯೊಳಗೆ ಬೆಳಗೀ
ಸದಮಲದ ಸ್ಥಾನವನು ನೋಡಿಯೆ
ಮುದದಿ ಬೆಳಗಿನ ಪೂಜೆ ಮಾಡುವ
ಹದನದಲಿಯಿರುವಂಥ ತಾತನು ಹಾಲುಣೆನಪಿಸಲೂ

೨೬೩

ಬದಿಯಲಿರುವಾ ಭಕ್ತಜನಗಳ
ಹೃದಯ ಬಡಿತದಿ ಭಯವದಾಗಲು
ಒದಗುವುದು ಯೆಲ್ಲಿಂದಯೆನ್ನುತ ಗಾಬರಿಯುಲವರೂ
ಮೊದಲು ತರುವುದು ಮರೆತ ಭಕ್ತರು
ತೊದಲು ನುಡಿಯಲಿ ತಮ್ಮ ತಪ್ಪಿಗೆ
ಒದಗಿದಾಪತ್ತಿನಲಿ ಸಿಲುಕಿಯೆ ಮೌನದಲಿ ನಿಂತೂ

೨೬೪

ಧರೆಯ ನಿರ್ಜನ ಸ್ಥಳದೊಳಗೆತಾ
ದೊರೆಯುವುದು ಹೇಗೆಂದು ಚಿಂತಿಸಿ
ಭರದಿ ನಡೆಯುತ ಚಾಗಿಸ್ವಾಮಿಯು ಹಾಲು ತರಲೆಳಸೀ
ಗುರುಕೃಪೆಯ ಮಲ್ಲಯ್ಯ ನೆನಸುತ
ಹರನ ಪೂಜೆಗೆ ಹಾಲುಬೇಡುತ
ಪರಮದಮೃತವ ಕರುಣೆಸೆನ್ನುತ ತಿರುಗಿ ಹುಡುಕುತಲೀ

೨೬೫

ಅನತಿ ದೂರದಿ ಚಂಚನೋರ್ವನು
ತನಗಿರುವ ಒಂದಾಕಳವ ತಾ
ಮನವ ಹಿಗ್ಗಿಸಿ ಹೊಡೆದು ತಂದಾ ತಾತ ಸನ್ನಿಧಿಗೇ
ಅನುನಯದಿ ಬಟ್ಟಲೊಳು ಹಾಲನು
ಬಿನದೆ ಕೊಡುತಲಿ ತಾತಗಾಗಲೆ
ವಿನಯತೋರಿಸಿ ನಡೆದು ಹೋದನು ಆಕಳದಿ ಸಹಿತಾ

೨೬೬

ಹಾಲು ತಂದಿಹ ಚಂಚರವನಿಗೆ
ಹಾಲಿನಾಹಣ ಕೊಡಿರಿಯೆನ್ನುತ
ಬಳಿಯಲಿದ್ದಾ ಭಕ್ತನೋರ್ವಗೆ ತಾತ ಸೂಚಿಸಲೂ
ಬಳಿಕ ನೋಡಲು ಬಳಿಯಲಿರದಲೆ
ತೊಳಗಿ ಹೋಗುತ ದೂರ ನಡೆಯುತ
ತೊಳಗಿ ಬೆಳಗಿಹ ಕದಳಿಯೊಳು ತಾ ಬಯಲು ಆಗಿಹನೂ

೨೬೭

ಶಿವಶಿವಾಯಿದು ಏನದಚ್ಚರಿ
ಶಿವನ ರೂಪದ ಮಲ್ಲಿಕಾರ್ಜುನ
ಅವಿಕಲಾನಂದದಲಿ ಪೂಜೆಗೆ ನೆರವು ಆಗಿಹನೋ
ಅವಿರತದಿ ಶಿವಧ್ಯಾನ ಮಾಡುವ
ಶಿವಶರಣೆ ಮಹದೇವಿಯಕ್ಕನ
ಠವೆತಪೋ ಠಾಣದಲಿ ತಾತಗೆ ದರ್ಶನದ ಭಾಗ್ಯಾ

೨೬೮

ಗಿರಿಯ ಮಲ್ಲಯ್ಯನನು ನುತಿಸುತ
ನೆರೆದ ಭಕ್ತರಿಗಭಯ ನೀಡುತ
ದೊರೆತ ಅನುಪಮ ಭಾಗ್ಯವೆನ್ನುತ ತಾತ ಭಕ್ತರಿಗೇ
ಚರಿಸಿ ಬಂದಿಹ ದಣಿವು ಕಾಣದೆ
ಹಿರಿಯ ಹುಮ್ಮಸ ಮೂಡಿಬರುತಲಿ
ತಿರುಗಿ ಬಂದರು ಮಲ್ಲಿಕಾರ್ಜುನ ಕೃಪೆಯು ಬೆಳಗಿನೊಳು

ಹನ್ನೆರಡನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೨ ಕ್ಕಂ ಪದಗಳು ೮೨೧ ಕ್ಕಂ ಮಂಗಳಂ

# ಹದಿಮೂರನೆಯ ಸಂಧಿ

**ಸೂಚನೆ :—**

**ತಮ್ಮ ವೃದ್ಧಾಪ್ಯವನು ಗಮನಿಸಿ**
**ಒಮ್ಮತದಿ ದೇಶಿಕರ ನಾರಿಸಿ**
**ಸಮ್ಮತದಿ ಪಟ್ಟಾಧಿಕಾರವ ಮಾಡಿದಾ ತಾತಾ**

೧

ಕನಕಗಿರಿ ಶ್ರೀ ಗುರುವ ಕೃಪೆಯಲಿ
ಅನುದಿನದಿ ಲೀಲೆಗಳ ಮಾಡುತ
ಘನವಿರಕ್ತಿಯ ಭವ್ಯಭಾವದ ಪರಮ ಶ್ರೀತಾತಾ
ಅನುಪಮದ ದಾಸೋಹ ಮತದಲಿ
ಸನುಮತದ ಸಾರ್ಥಕದ ಜೀವನ
ಮನವಗೆದ್ದು ಮಹಂತರಾಗಿಯೆ ನಡೆಸಿರುವ ತಾತಾ

೨

ಗುರುತರದ ಚರಜಂಗಮತ್ವದಿ
ಧರೆಯ ಜನರುದ್ಧಾರಕಾಗಿಯೆ
ಚರಿಸುತಲಿ ಶ್ರೀ ಚನ್ನಬಸವರು ದೇಹದಣಿಸುತಲೀ
ಮರುಗಿದರು ಕೆಲವಾಪ್ತ ಭಕ್ತರು
ಕರೆಸುತಲಿ ಅನುಭವದ ವೈದ್ಯರ
ಭರದಿ ಯೋಗ್ಯಚಿಕಿತ್ಸೆ ಮಾಡಿಸಿ ಸೇವೆಗೈಯುತಲೀ

೩

ವೃದ್ಧರಾಗುತ ದೇಹಜರ್ಝರಿಸಿ
ಶ್ರದ್ಧೆಯಿದ್ದರು ಶಕ್ತಿಕುಂದುತ
ವೃದ್ಧ ತರದಾ ಲಕ್ಷಣಂಗಳು ಮೂಡಿಬರುತಾಗಾ
ಸದ್ದು ಗದ್ದಲು ಮಾಡದಲೆ ತಾ
ವಿದ್ದು ಮಠದಲಿ ಭಾವಲೋಕದಿ
ಯಿದ್ದು ಶಾಖಾಮಠಗಳಿಗೆತಾದೇಶಿಕರ ತರಲೂ

೪

ಭಕ್ತರೊಂದಿಗೆ ವಿಷಯ ಚರ್ಚಿಸಿ
ಮುಕ್ತ ಮನಸಲಿ ಮಾತನಾಡುತ
ಯುಕ್ತ ಸಮಯದಿ ಯೋಗ್ಯದೇಶಿಕರನ್ನು ಆರಿಸಲೂ
ರಕ್ತಿಗೆಳಸದೆ ವಿರತ ಭಾವದಿ
ಭಕ್ತಿಶಕ್ತಿಯು ಕೂಡಿಕೊಂಡಿಹ
ಯುಕ್ತಿಯಲಿ ತಾ ಲಿಂಗ ಗುಣಗಳು ಕೂಡಿರಲು ನೋಡೀ

೫

ತ್ಯಾಗಿ ಬಸವಯ್ಯೆಂಬವರಿಗಾ
ಆಗಿಹಳು ನೀಲಮ್ಮ ಸತಿಯಳು
ತ್ಯಾಗಭೋಗದಿ ಶರಣಜೀವನ ನಡೆಸುತಲಿ ಮುದದೀ
ಮಾಗಳದೊಳಿರುವಂಥಲವರಿಗೆ*
ಯೋಗಲಕ್ಷಣ ಮಗನುದೇಶಿಕ
ರಾಗಿಯಾ ಶ್ರೀ ಶಾಂತಮಲ್ಲಸ್ವಾಮಿ ಹೆಸರಾಗೀ

೬

ತಾತನಪ್ಪಣೆಯಂತೆ ದೇಶಿಕ
ಪ್ರೀತಿಯಿಂದಲಿ ಸೇವೆ ಮಾಡುತ
ನೀತಿನಿಯಮದೊಳಡವಿ ಅಮರೇಶ್ವರನ ಕ್ಷೇತ್ರದೊಳೂ
ಈತೆರದಲಾಚಾಗಿ ಮಠದಾ
ನೂತನದ ದೇಶಿಕರು ಆಗಿಹ
ಪೂತನಾ* ಬೇಲೂರು ಗ್ರಾಮದ ತೋಂಟದಾರ್ಯರಾಗೀ

೭

ಕಾಡಶೆಟ್ಟಿಯ ಹಳ್ಳಿಲಿರುವಾ*
ನಾಡೆ ಗುರುಪಾದಯ್ಯನವರಿಗೆ
ಕೂಡಿ ಸಹಬಾಳ್ವೆಯನು ಮಾಡುವ ಸರ್ವಮಂಗಳೆಯೂ
ನಾಡುವೊಪ್ಪುವ ರೀತಿಯಿಂದಲಿ
ಕೂಡಿ ಸಮಸುಖದಿಂದಲವರಿಗೆ
ನಾಡೆ ಮಗನೇ ಸಿದ್ಧಲಿಂಗಸ್ವಾಮಿ ತಾನಾಗೀ

---

ಪದ್ಯ ೫ :- *ಮಾಗಳ, ಹಡಗಲಿ ತಾಲೂಕು, ಬಳ್ಳಾರಿ ಜಿಲ್ಲೆ
ಪದ್ಯ ೬ :- ಬೇಲೂರು. ಬಾದಾಮಿ ತಾಲೂಕು, ಬಿಜಾಪುರ ಜಿಲ್ಲಾ
ಪದ್ಯ ೭ :- ಕಾಡಶೆಟ್ಟಿಯ ಹಳ್ಳಿ, ಹಾನಗಲ್ ತಾಲೂಕು, ಧಾರವಾಢ ಜಿಲ್ಲಾ

೮

ಧರೆಯೊಳೊಳ ಬಳ್ಳಾರಿ ಮಠವದು
ಗುರುಗಳಾ ಶ್ರೀ ಚನ್ನಬಸವರ
ಪರಮ ಮೂಲದ ಮಠವುಯೆನ್ನಿಸಿ ತಾತನಿಂ ಬೆಳಗೀ
ಗುರುಗಳಲಿ ಅತಿಭಕ್ತಿಯಿಟ್ಟಿಹ
ಪಿರಿಯ ಮಠದಧಿಕಾರವಹಿಸುವ
ಚರವರೇಣ್ಯರೆ ಸಿದ್ಧಲಿಂಗಸ್ವಾಮಿಯೆನಿಸಿಹರೂ

೯

ಈ ತೆರದಿ ಕ್ರಮದಿಂದ ತಾತನು
ಓತುವಿಂ ಪಡೆದವರ ನೊಪ್ಪಿಸಿ
ದಾತ ತಾತನೆ ಮೂರು ಮಠಗಳಿಗಂದು ನೇಮಿಸುತಾ
ಪ್ರೀತಿಯಿಂ ಸದ್ಭಕ್ತರೆಲ್ಲರು
ತಾತನಭಿಮತಕೆಲ್ಲರೊಪ್ಪುತ
ಖ್ಯಾತಿಯಿಂ ಪಟ್ಟಾಧಿಕಾರವ ಮಾಡಬೇಕೆಂದೂ

೧೦

ಬಾದರಲಿ ಘನವಂತ ಗೌಡರು
ಆದ ವೆಂಕಟರಾಯಗೌಡರು
ಸೀದ ಭಾವದ ಸಿಂಧನೂರಿನ ಗೌಡರೊಡಗೂಡೀ
ಪಾದರಿಯ ಮಾನವಿಯಗೌಡರು
ಸಾಧುತನ ಸಿರುಗುಪ್ಪೆ ಭಕ್ತರು
ಆದಿಯಾಗಿಹ ಆದವಾನಿಯ ಭಕ್ತಜನಸೇರೀ

೧೧

ಎಲ್ಲ ನಾಲ್ಕು ತಾಲೂಕು ಜನಗ
ಳಲ್ಲಿ ಸೇರುತ ವಿಷಯ ಚರ್ಚಿಸಿ
ಸಲ್ಲಲಿತ ಸಲಹೆಗಳ ಸೂಚಿಸಿ ವಿರತ ಮಠದೊಳಗೇ
ಉಳ್ಳವರು ಧನಕನಕ ಕೊಡುತಲಿ
ಎಲ್ಲರಭಿಮತದಿಂದ ಮಾಡುವ
ಒಳ್ಳೆಯಾ ಪಟ್ಟಾಧಿಕಾರದ ಕಾರ್ಯಮಾಡ್ವುದಕೇ

೧೨

ಇದರ ಜೊತೆಯಲಿ ತಾತನವರಿಗೆ
ವಿಧಿತ ವಜ್ರಮಹೋತ್ಸವವು ತಾ
ಮುದದಿ ಮಾಡಲು ಭಕ್ತಜನ ಗುರುಹಿರಿಯರಾದಿಯಲೀ
ಸದಮಲಂತಃಕರುಣೆ ತಾತನ
ಹದುಳ ಭಾವದಿ ಕೇಳಿ ಒಪ್ಪಿಸಿ
ಬದುಕು ಸಾರ್ಥಕ ವಾಗ್ವುದಿಂಥಾ ಕಾರ್ಯಮಾಡ್ವುದರಿಂ

೧೩

ಯೆಂದು ಹೇಳುತ ಹೊಗಳಿ ತಾತನ
ಅಂದು ಸಕಲರು ಮುಕ್ತಮನಸಲಿ
ಚಂದ ಭಾವದಿನುತಿಸಿ ತಾತನ ಕಾರ್ಯಮಾಡ್ವುದಕೇ
ಕುಂದು ತಾರದೆ ಮಹದ ಕಾರ್ಯವ
ಅಾದಿನಿಂದಾರಂಭಗೊಳಿಸುತ
ಬಂಧುರದ ಭಾವದಲಿ ಭಕ್ತರು ಸೇವೆಗೈಯ್ಯುತಲೀ

೧೪

ಭತ್ತ ತರುವರು ಅಕ್ಕಿ ಕೊಡುವರು
ಮತ್ತೆ ಗೋಧಿಯು ಕಡಲೆ ಕೊಡುವರು
ಮೊತ್ತದಲಿ ಬೇಳೆಯನು ಕೊಡುತಲಿ ಸರ್ವಧಾನ್ಯದಲೀ
ಚಿತ್ತದೊಳು ತಾ ಬೆಲ್ಲ ಸಕ್ಕರೆ
ಗೊತ್ತು ಗುರಿಯಲಿ ಎಣ್ಣೆಕೊಡುತಲಿ
ಸುತ್ತು ಮುತ್ತಿನ ಭಕ್ತಜನಗಳು ಸೇವೆಮಾಡುತಲೀ

೧೫

ತಾತ ಬಾಯ್ದೆರೆಯದಲೆ ಬಂದಿಹ
ಸಾತಿಶಯದಲಿ ಕೂಡಿದಂಥಹ
ನೂತನದ ವಿಧ ವಿಧದ ವಸ್ತುಗಳಿಂದ ಕೂಡಿರಲೂ
ತಾತ ನೋಡುತ ಹಿಗ್ಗದಲೆ ತಾ
ಭೂತನಾಥನಕೃಪೆಗೆನುತಿಸುತ
ಭೂತಿ ಪುರುಷರ ಭವ್ಯ ಕಾರ್ಯಕೆ ಶಿವಕೃಪೆಯಬೇಡೀ

೧೬

ನೂತನದ ಹೊಸಪೇಟೆಸ್ವಾಮಿಯು
ಪೂತಗುರು ಕೊಟ್ಟೂರುಸ್ವಾಮಿಯು
ಆತ ಸಂಗನ ಬಸವಸ್ವಾಮಿಯು ಜಗದಗುರುವಾಗೀ
ಈತನಿಗೆ ಅನುಗ್ರಹವ ಕರುಣಿಸಿ
ದಾತ ಶ್ರೀಗುರು ನಮ್ಮ ತಾತನು
ಈತನೀ ಕಾರ್ಯದಲಿ ತಾಮುಂದಿದ್ದು ಮಾಡಿಸುತಾ

೧೭

ಪಾಮನಕೆಲ್ಲೂರು ಕೋಸ್ಗಿಯಾ
ನಾಮಗಳ ಜೊತೆ ಆಯನೂರಿನ
ಪ್ರೇಮದಲಿ ನೋಡುತ್ತಯೆದ್ವಲ ದೊಡ್ಡಿ ಮಠಗಳನೂ
ಈ ಮಹಾಮಠಗಳಿಗೆ ಒಡೆಯನು
ಭೂಮದೊಳಬಳ್ಳಾರಿ ಮಠದಲಿ
ಕ್ಷೇಮದಿಂದಲಿಯಿದ್ದು ಭಕ್ತರ ತಾತನಾಗಿಹನೂ

೧೮

ವರಮಹಾ ಪಟ್ಟಾಧಿಕಾರದ
ಪರಮ ಪಾವನ ಕಾರ್ಯಕ್ರಮವು
ಪರಿವಿಡಿದು ನಡೆಯುತ್ತ ತಾತನ ಸನ್ನಿಧಾನದೊಳೂ
ನೆರೆದರಗಣಿತ ಭಕ್ತಜನಗಳು
ಧರೆಯುಲಧಿಕ ಪ್ರಸಿದ್ಧ ಹೊಂದಿದ
ಒರಿಯ ಪಂಡಿತ ಕವಿಗಮಕಿಗಾಯಕರ ನೋಡಲಿಕೇ

೧೯

ವಿವಿಧ ದೀಪದಲಂಕೃತದಿತಾ
ವಿವಿಧ ಕಲೆಸಾಹಿತ್ಯ ಸಭೆಗಳು
ಭುವನ ಭೂಕೈಲಾಸವಾಗಿಹ ಭವ್ಯಸದೃಶದಲೀ
ದಿವಸದಲಿ ಪ್ರತಿಕಾರ್ಯಕ್ರಮಗಳು
ಅವಿಕಲಾನಂದವನು ಕೊಡುತಲಿ
ಸವೆಯದಾಸವಿ ದಿವ್ಯದಾಸೋಹದಲಿ ಭಕ್ತಜನಾ

೨೦

ಬಿಸಿಲ ಬೇಗೆಯ ತಡೆಯಲಾರದೆ
ಹಸಿದುಗೊಂಡಿಹ ಸಣ್ಣಶಿಶುಗಳು
ಸಸಿನೆಯಾಗಿರಲೆಂದು ತಾತನು ಹಾಲುಕೊಡಿರೆಂದೂ
ಶಿಶುಜೊತೆಗೆ ಬಂದಂಥ ತಾಯಿಗೆ
ಹಸನದಾ ಹಾಲನ್ನು ಕೊಡುತಲಿ
ಬಿಸಿಲೊಳಗೆ ಕರ್ತವ್ಯ ಮಾಡುತ ಭಕ್ತಜನಸೇರೀ

೨೧

ನದಿಯೊಳಗೆ ಮಿಂದಂಥ ಭಕ್ತರು
ನದಿವಡದಿ ದಾಸೋಹಗೈಯ್ಯುವ
ಹದುಳದಿಂ ತೃಪ್ತಿಯನು ಕೊಡುವಾ ದಿವ್ಯದಾಸೋಹಾ
ಹೃದಯವಾತಿಕೆ ಪಡೆದತಾತನ
ಹದನವನು ಹೊಗಳುತ್ತಜನಗಳು
ಸುಧೆಯ ನೀಡುವ ಸ್ವರ್ಗ ಮತ್ತೆಲ್ಲಿಲ್ಲವೆನ್ನುತಲೀ

೨೨

ಮೂರು ಸಾವಿರಮಠದ ಶ್ರೀಗಳು
ಸಾರಿ ಹೊಗಳುತ ಮುಕ್ತಮನಸಲಿ
ಮಾರಹರನವತಾರಿ ತಾತನು ನಿಜವಿರಕ್ತಿಯಲೀ
ವೀರಶೈವರ ಧರ್ಮಕ್ರಮದಲಿ
ಹಾರವಿಸಿ ದೇಶಿಕರನೆಲ್ಲರ
ಭಾರವಿಲ್ಲದ ನಿರಾಭಾರದ ಪಟ್ಟಗಟ್ಟುತಲೀ

೨೩

ತಾತಗೆಪ್ಪತ್ತೈದು ವರ್ಷದಾ
ಓತುವಿಂ ಸವಿನೆನಪಿಗಾಗಿಯೆ
ತಾತಗೊಜ್ರೋತ್ಸವವಯೆಂಪ್ತೊಂಭತ್ತರಲಿ ಮಾಡೀ
ಭೂತಳದಿ ಮೇ ತಿಂಗಳಲ್ಲಿಯೆ
ಪೂತ ದಿನವಾ ಹತ್ತನೇದಿನ
ತಾತನಿಗೆ ಹೂ ಮಳೆಯು ಸುರಿಸುತ ಗುರುಚರರು ಹೊಗಳೀ

೨೪

ಭಾಪುಮಝಭಾಪೆಂದು ಹೊಗಳುತ
ಧೂಪದೀಪದಿ ಬೆಳಗಿ ತಾತಗೆ
ಈ ಪರಿಯ ಹಳ್ಳಿಯೊಳು ಸುಭಗತೆ ಕಂಡ ಭಕ್ತಜನಾ
ತಾಪಗಳ ಕಳೆವಂಥ ತಾತನು
ಶಾಪ ಕಳೆಯುತ ಹರಸಿ ಸಕಲರ
ಪಾಪ ಮೋಚನೆ ಮಾಡುವಂಥಹ ತಾತನನು ನುತಿಸೀ

೨೫

ಲಲಿತವಾದೀ ಕಾವ್ಯಕರ್ತೃವು
ಸಲಿಸಿ ಸಂಕೀರ್ತನದ ಕೃತಿಯನು
ತೊಳಗಿ ಬೆಳಗುವ ತಾತನಾಚರಣಕ್ಕೆ ವಂದಿಸುತಾ
ನೆಲೆಕಲೆಗಳಂ ತಿಳಿಸಿ ಹೇಳುವ
ಇಳೆಯ ದುಃಖಿಗಳನ್ನು ಪೊರೆಯುತ
ಕಳೆಯ ಕೊಡುತಲಿ ಕಳುಹಿಕೊಡುವಾದಾತ್ಮವೀ ತಾತಾ

೨೬

ಅಂದು ಸಂಜೆಯ ಸಮಯದೊಳಗಾ
ನಂದದಿಂ ಮೆರವಣಿಗೆ ಮಾಡುತ
ನಂದಿಕೋಲ್ ಧ್ವಜದಿಂದ ಕೂಡಿದ ಪಾಲಿಕೋತ್ಸವವೂ
ಚಂದದಿಂ ನೂತನದ ಶ್ರೀಗಳು
ಮುಂದೆ ಕುಳಿತಿಹ ಪಾಲಿಕೆಗೆತಾ
ವಂದುವಂದಿಸಿ ಮುಂದೆ ಸಾಗುವ ಭಕ್ತಸಮುದಾಯಾ

೨೭

ಕಾಯಿಹೊಡೆದಾ ತೆಂಗುನೀರಿನ
ಆಯುತದಿ ಹರಿದಿತ್ತು ಕಾಲ್‌ಹೊಳೆ
ಪಾಯ ತಪ್ಪದೆ ಭದ್ರದಿಂದಲೆ ಮೆರವಣಿಗೆ ಮುಗಿದೂ
ಬೀಯ ಮಾಡದೆ ಕ್ರಮದಖರ್ಚಲಿ
ನ್ಯಾಯ ಧರ್ಮದ ನೀತಿಯಿಂದಲು
ಪಾಯದಿಂದಲಿ ಮಾಡಿ ಮುದಿಸಿದ ದಿವ್ಯಕಾರ್ಯವದೂ

೨೮

ಬಂದ ಹರಗುರು ಚರವರೇಣ್ಯರು
ನಿಂದು ಘನಕಾರ್ಯದೊಳು ಸೇವೆಯ
ನಂದು ಮಾಡುತ ಹೊಗಳಿ ತಾತನ ಮಠದಿ ತೃಪ್ತಿಯಲೀ
ಸಂದಣಿಯಲಿರುವಂಥ ವಿಬುಧರು
ಮುಂದೆ ಬರುತಲಿ ತಾತಗೊಂದಿಸಿ
ಸುಂದರದ ಬಟ್ಟೆಗಳ ಕೊಡುತಲಿ ಧನಸಹಿತ ಹರಸೀ

೨೯

ತಾತನಾಶೀರ್ವಾದ ಪಡೆಯುತ
ತಾತನಗಲದೆ ಮನಸು ಬಾರದೆ
ಪ್ರೀತಿಯಿಂಗಮಿಸಿದರು ತಮ್ಮಯ ಠಾವುಗಳಿಗಂದೂ
ಭೂತಳದಿ ಖ್ಯಾತಿಯನು ಪಡೆಯಿತು
ಪೂತನೂತನ ಶ್ರೀಗಳೋತ್ಸವ
ತಾತನುತ್ಸಾಹದಲಿ ಮಾಡಿದ ಶಿವನಕೃಪೆಯೊಳಗೇ

೩೦

ಎನಿತಸಂಖ್ಯದ ಭಕ್ತಜನಗಳು
ಎನಿತು ಸೇವಿಸಿ ಸವೆಯದಂಥಹ
ಘನಮಹಿಮೆವುಳ್ಳಂಥ ದಿವ್ಯ ಪ್ರಸಾದವಾಗಿಹುದೂ
ನೆನೆದು ಶಿವನನು ಮುಕ್ತಮನಸಲಿ
ಅನುಪಮದ ಘನಕಾರ್ಯ ಮಾಡಿಸಿ
ದೆನುತ ಶಿವನನು ಮತ್ತೆ ನೆನೆಯುತ ಶಿವಮಯದಿಂ ತಾತಾ

೩೧

ಹರಕೃಪೆಯೂ ವರ ಪುಣ್ಯದಿಂದಲಿ
ಗುರುತರದ ಗುರುಕಾರ್ಯಮಾಡಲು
ಧರೆಯ ಭಕ್ತರು ತೃಪ್ತಿಯಿಂದಲಿ ಕಾಂತಿ ಶಾಂತಿಯಲೀ
ತಿರೆಯೊಳಗೆ ಶಿವಯೋಗಿಯಾಗಿಹ
ಸುರತರುವಿನಂತಿರುವ ತಾತನು
ಪರಮ ಕರುಣದ ಮೂರ್ತಿಯಾಗಿಹ ತ್ರಿವಿಧದಾಸೋಹೀ

೩೨

ಪ್ರೇಮದಲಿ ಬೆಳಗುರಿಕೆಗೌಡನು
ನೇಮದಲಿ ರಾರಾವಿಗೌಡನು
ಕಾಮಿತಾರ್ಥವ ಬಯಸದಂಥಹ ಸಿದ್ಧರಾಮಯ್ಯಾ
ಈ ಮಹಾಕಾರ್ಯದಲಿ ಸೇವೆಯ
ನಾಮಕಾಗಿಯೆ ಮಾಡದಂಥಹ
ಸಾಮರಸ್ಯದಿ ಶಿವನಗೌಡನು ನಾಗಪ್ಪಸಹಿತಾ

೩೩

ಅನುನಯದಿ ಮಾಡಿರುವ ಸೇವೆಗೆ
ಧನಕನಕದಿಂದಿವರ ಹರಸುತ
ಮಿನುಗುವಂಥಹ ಪಂಚೆ ಜೋತೆಯಲಿ ಅಂಗಿಕೊಡುತಾಗಾ
ಘನತರದ ಆಸ್ಥಾನಕವಿಯಾ
ಅನುಪಮದ ದೊಡ್ಡಯ್ಯಶಾಸ್ತ್ರಿಗೆ
ವಿನಯದಲಿ ಶಾಲನ್ನು ಕೊಡುತಲಿ ಹಣದ ಜೊತೆಹರಸೀ

೩೪

ಇನ್ನನೇಕರ ಸೇವೆ ಸ್ಮರಿಸುತ
ಉನ್ನತದ ಭಾವದಲಿ ಹರಸುತ
ರನ್ನದಾ ಹೊಸಪೇಟೆ ಸ್ವಾಮಿಗಳನ್ನು ಹೊಗಳುತಲೀ
ಚನ್ನ ಚಲುವಿನ ಭಾವದಿಂದಲಿ
ಮನ್ನಣೆಯು ತಂದಿರುವಸ್ವಾಮಿಗೆ
ಹೊನ್ನಗೊಡುತಲಿ ಹಾರಹಾಕಿಯೆ ಹರಸಿ ಹಾರೈಸೀ

೩೫

ವಿರತವಾತವೆ ಸುವರ್ಣಗಿರಿಯದು
ಕೊರತೆಯಿಲ್ಲದ ಕನಕದಾನದಿ
ಹರಸಿದುದು ಸಹಜನ್ನುತಾಗಲೆ ನೆರೆದಭಕ್ತಜನಾ
ಧರೆಯೊಳಗೆ ಸಾರ್ಥಕವುನಾಮವು
ತಿರೆಯೊಳದ್ಭುತ ಕಾರ್ಯಮಾಡಿಯೆ
ಕಿರಿಯ ಹಳ್ಳಿಯ ಪುಣ್ಯವೆಂತುಟೊಯೆಂದು ಕೊಂಡಾಡೀ

೩೬

ಬಹಳ ಜನರಿಗೆ ತ್ರಾಸು ಆಯ್ತಪ
ಬಹಳ ಬಲಿತವರ್ರಾಡ್ಡ ಕೆಲಸವ
ಸಹಜದಲಿಯಿರುವಂಥ ಹಳ್ಳಿಯ ಜನರಿಗುಂಟೇನೋ
ಬಹಳದಣಿದಿಹ ದೇಹಮನವದು
ಮಹಮಠದಿ ದೂರಿದ್ದು ಕೆಲದಿನ
ಗಹನದಲಿ ಗಾಂಭೀರ್ಯ ತರುವಾ ಮೌನವನು ಬಯಸೀ

೩೭

ಇದರ ಇಂಗಿತವರಿತ ಭಕ್ತನು
ಹದುಳದಲಿ ಆಯ್ಯಪ್ಪಧಣಿತಾ
ಸದಯದಿಂ ಸಿರುಗುಪ್ಪೆನಗರಕೆ ತಾತನಂಕರೆದೂ
ಬದುಕಿನಲಿ ಸಿಸ್ತನ್ನು ಪಾಲಿಸಿ
ಮುದದಿ ಗುರುಗಳ ಸೇವೆಮಾಡುವ
ಹೃದಯ ಶ್ರೀಮಂತಿಕೆಯಲಿರುವಾಧಣಿ ಮಾತಿಗೊಪ್ಪೀ

೩೮

ಕಿರಿಯ ಸ್ವಾಮಿಗಳನ್ನು ಕರೆಯುತ
ಸರಳದಿಂ ಮಠದಿರಲು ಹೇಳುತ
ಕೊರತೆ ಮಾಡದೆ ಮಠದ ಕೆಲಸದ ಸಹಜ ಕಾರ್ಯದೊಳೂ
ಮರೆಯದಲೆ ದಾಸೋಹ ನಡೆಸುವ
ಪರಿವಿಧಾನದ ವಿವರ ಹೇಳುತ
ಹೊರಟು ಬಂದರು ಸಿರಿಯಗುಪ್ಪೆಗೆ ಧಣಿಸಹಿತ ತಾತಾ

೩೯

ಅಂತು ವಜ್ರೋತ್ಸವವು ಮುಗಿಯಿತು
ಸಂತಸದ ಪಟ್ಟಾಧಿಕಾರವು
ಕಂತುಹರ ಕೃಪೆಯಲ್ಲಿ ನಡೆಯಿತು ವಿಘ್ನವಾಗದಲೇ
ಚಿಂತೆ ತುಂಬಿದ ಹೃದಯಭಾರಕೆ
ಸಂತೆ ಜನರಿಂ ದೂರವಿರುವಾ
ಸ್ವಂತ ಧಣಿಮನೆಗೆಂದು ಗಮಿಸಿದ ನಮ್ಮ ಈ ತಾತಾ

ಹದಿಮೂರನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೩ ಕ್ಕಂ ಪದಗಳು ೮೭೦ ಕ್ಕಂ ಮಂಗಳಂ

# ಹದಿನಾಲ್ಕನೆಯ ಸಂಧಿ

**ಸೂಚನೆ :—**

ಸಿರಿಯಂಗಃಪ್ಪೆಯ ಧಣಿಯ ಹೊಲದಲಿ
ಪರಮ ತಪಸಿಯು ಬಿಲ್ವವನದಲಿ
ಪರಶಿವನಯೋಗದಲಿ ನಿಂತನು ನಮ್ಮ ಈ ತಾತಾ

೧

ಅಂದುಧಣಿಮನೆ ಸೇರಿ ತಾತನು
ಚಂದದಿಂ ಮನೆಯವರ ಹರಸುತ
ಸುಂದರದ ಶಿವಪೂಜೆ ಮುಗಿಸಿ ಪ್ರಸಾದ ಕರುಣಿಸುತಾ
ಬಂಧುರದ ಸಂಜೆಯಲಿ ತಾತನು
ಮಂದಗಮನದಿ ನಡೆದು ಬಂದಾ
ನಂದದಿಂದಲಿ ಬಿಲ್ವವನದಲಿ ಚರಿಸಿ ಧಣಿಸಹಿತಾ

೨

ಬಿಲ್ವದೆಳೆತಳಿರುಗಳ ನೋಡುತ
ಚೆಲ್ವ ಕೋಗಿಲೆ ಹಾಡುಕೇಳುತ
ಬಿಲ್ವ ವೃಕ್ಷದ ಮೂಲ ಪೂಜಿಸೆ ಶಿವನ ಪೂಜೆಯದೂ
ಬಿಲ್ವ ಭೂಜದ ಬುಡದಿ ಕುಳಿತಾ
ಚೆಲ್ವ ಭಸ್ಮವ ಧರಿಸಿದವರಿಗೆ
ಬಿಲ್ವದಿಂದ ವಿಪತ್ತು ವಿರದಲೆ ಭೂತಿಸಿದ್ಧಿಸುತಾ

೩

ಎಂದು ಹೇಳುತ ತಾತ ಧಣಿಗಾ
ನಂದದಿಂದಲಿ ನಲಿದು ತಾತನು
ಒಂದು ಕಡೆಯಲಿ ಕುಳಿತು ತಾನಾಧ್ಯಾನ ಮೌನದೊಳು
ಹಿಂದೆ ಸರಿಯುತಮರಿಗೆ ಹೇಳುತ
ಚಂದದಿಂದ ವ್ಯವಸ್ಥೆ ಮಾಡಿಸಿ
ಅಂದು ಗಮಿಸುತ ಮನೆಗೆ ನಡೆಯುತ ಸತಿಸಹಿತ ಧಣಿಯೂ

೪

ತಾನೆ ಹೇಳಿದ ಬಿಲ್ವಮಹಿಮೆಯು
ಮಾನಸಿಕದಲಿ ಪೂಜೆ ನಡೆಸುವ
ಏನು ಮಾಡಿದರದುವೆ ಸಕ್ರಮದಿಂದ ಸಂಭ್ರಮಿಸೀ
ಮಾನವನು ತಾ ದೇವನಾಗುವ
ಧ್ಯಾನ ಶಿವಧ್ಯಾನದಲಿ ಮನವನು
ಊನವಿಲ್ಲದೆ ನಿಲಿಸಿ ತಾ ಶಿವಯೋಗದಿಂ ತಾತಾ

೫

ಸಿದ್ಧ ಪುರುಷ ವಶಿಷ್ಠಮಹಮುನಿ
ಶ್ರದ್ಧೆಯಿಂದಲಿ ಬಿಲ್ವಬುಡದಲಿ
ಬದ್ಧದಿಂ ಶಿವಪೂಜೆ ಮಾಡಿಯೆ ಭಕ್ತಶ್ರೇಷ್ಠನೆನಿಸೀ
ಇದ್ದ ಮಹಮುನಿಯನ್ನು ನೋಡಿದ
ಶುದ್ಧಿಯಲಿ ಕುರುರಾಜನೋರ್ವನು
ಬಿದ್ದು ಹೋಯಿತು ಹಿಂಸೆಗುಣವದ ಹಿಂಸೆ ನಿಷ್ಠೆಯಲೀ

೬

ಸಹಜದೊಸ್ಸುಸ್ಥಿತಿಯು ಹೀಗಿರೆ
ಗಹನವಾದರು ಸುಲಭವಾಗಿಹ
ಸಹಜದಲಿ ಲಿಂಗಾಂಗಯೋಗವು ಅರಿವೆ ಗುರುವಾಗೀ
ಅಹುದು ತಾತನ ಘನನಿಲವು ತಾ
ಸಹಿತವರ ತಪದಿಂದ ಕೂಡಿಯೆ
ವಿಹಿತವಾಗಿದೆ ಪಂಚಪರುಷಗಳಿಂದ ಕೂಡಿರಲೂ

೭

ಹೀಗೆ ಕೆಲದಿನ ಬಿಲ್ವವನದೊಳು
ಯೋಗಮುಖದಲಿಯಿರುವ ತಾತನ
ಹೋಗಿ ಕರತರಬೇಕುಯೆನ್ನುತ ಮಠದ ಭಕ್ತಜನಾ
ಬೇಗ ಬರುತಲಿ ಬಂದಭಕ್ತರು
ಆಗ ವಿನಯದಿ ವಿಷಯ ತಿಳಿಸುತ
ಹೋಗಿ ನೋಡಿರಿ ಮಠದಿ ಉಳಿದಿಹ ಧಾನ್ಯಧನಸಹಿತಾ

೮

ಇದರರದಿಂ ದಾಸೋಹ ಮಂಟಪ
ಹದುಳದಿಂ ಮಾಡ್ಬೇಕುಯೆನ್ನುತ
ಸದಯ ಹೃದಯದಿ ಅರಿಕೆ ಮಾಡಿದ ರಾಗ ತಾತನಿಗೇ
ಬದಿಯಲಿಹ ಭಕ್ತರನು ನೋಡುತ
ವಿದಿತವಾಗಿದೆ ನಿಮ್ಮ ಸಲಹೆಯು
ಮುದದಿ ಮಾಡುವಯೆಂದು ಹೇಳುತ ಕಳಿಸಿ ಭಕ್ತರನೂ

೯

ಯೆಲ್ಲಿ ಹೋದರು ಅಲ್ಲೆ ಬರುವೀ
ಬಲ್ಲವರು ತಾವೆಂದು ತಿಳಿಯುತ
ಯಿಲ್ಲದದು ಕೆಲಸವನು ತೋರಿಸಿ ಶಾಂತಿ ಕೋರದಲೇ
ಯಿಲ್ಲಿರಲು ಬಿಡದಂಥ ಭಕ್ತರು
ಒಳ್ಳೆದಿದ್ದರು ಸಮಯಗ್ರಹಿಸದೆ
ಯೆಲ್ಲರೀಪರಿ ಮಾಡ್ವರೆನ್ನುತ ಧಣಿಯು ಚಿಂತಿಸಿದಾ

೧೦

ಶಿವಕೃಪೆಯು ಯಿದ್ದದಂತೆಯಾಗಲಿ
ಸುವಿಚಾರ ಹೇಳುತಲಿ ತಾತನು
ಅವಿಕಲಾನಂದವನು ಕೊಟ್ಟಿತು ಬಿಲ್ವವನ ತಪವೂ
ಸವೆಯದಂಥಹ ನಿಮ್ಮ ಭಕ್ತಿಗೆ
ಶಿವನ ಬೆಳಕದು ನಿಮ್ಮ ಬಾಳಿಗೆ
ಸವೆಯದಲೆಯಿರಲೆಂದು ಹರಸಿಯೆ ಮಠಕೆ ಗಮಿಸಿದರೂ

೧೧

ದಿವರಾತ್ರಿ ದೇಹವನು ಸವೆಸುವ
ವಿವಿಧ ಜನಗಳ ದುಃಖ ಶಮನಕೆ
ಅವಧರಿಸಿ ಹರಸುತ್ತ ತಾತನು ಗಂಧ ಚಕ್ಕೆಯಲೀ
ಅವರ ಮತಕನುಸರಿಸಿ ನೋಡುತ
ಅವರವರ ಭಾವದಲಿ ಹರಸುತ
ಭುವನದಲಿ ನಿಜವಿರತಿಯೆನಿಸಿಹ ನಮ್ಮ ಈ ತಾತಾ

ಹದಿನಾಲ್ಕನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೪ ಕ್ಕಂ ಪದಗಳು ೮೭೧ ಕ್ಕಂ ಮಂಗಳಂ.

# ಹದಿನೈದನೆಯ ಸಂಧಿ

**ಸೂಚನೆ :—**

ಪರಮ ದಾಸೋಹಕ್ಕೆ ತಾತನು
ವರತಪೋಧನದಿಂದ ಕಟ್ಟಿದ
ಧರೆಯೊಳೊಳಬಳ್ಳಾರಿಯೋಳ್ ದಾಸೋಹ ಮಂಟಪವಾ

೧

ಕಿರಿಯ ಸ್ವಾಮಿಗಳನ್ನು ಕರೆಯುತ
ಪರಿವಿಡಿದು ಕ್ಷೇಮವನು ಕೇಳುತ
ನೆರೆದ ಭಕ್ತರಿಗಭಯ ನೀಡುತ ಮಠದ ಅಂಗಳದೀ
ಭರದಿ ಕಟ್ಟಿಸುವಂಥ ಮಂಟಪ
ಪರಮದಾಸೋಹವನು ನಡೆಸುವ
ಸರಿಯಾದ ಜಾಗವನು ತೋರಿಸಿ ಮಠದ ಪಕ್ಕದೊಳೂ

೨

ಅಂದು ಕರೆಸುತ ವಾಸ್ತು ಶಿಲ್ಪಿಯ
ಮಂದಿರದ ಮಹನಕ್ಷೆ ಹಾಕಿಸಿ
ಸುಂದರದ ಕಟ್ಟಡವ ಕಟ್ಟಲು ಪೂಜೆ ಮಾಡುತಲೀ
ಚಂದದಿಂದಲಿ ಕೆಲಸಸಾಗಿತು
ಕುಂದು ಕೊರತೆಯು ಯಿಲ್ಲದಲತಾ
ಅಂದುವುಳಿದಿಹ ಧನವು ಕರಗಿತು ದೊಡ್ಡ ಕೆಲಸದಲೀ

೩

ದಿಗಿಲು ಹುಟ್ಟಿದ ಚಿಂತೆಯಿಂದಲಿ
ಒಗೆ ಹರಿಯದಿಹ ದೊಡ್ಡ ಕಾರ್ಯಕೆ
ನಗರದಲಿ ಯಿರುವಂಥ ಮಂಟಪ ಹಳ್ಳಿಗರಿಗೇಕೇ ?
ನಗೆಯಾಟವಾಗದಲೆ ಕೆಲಸವ
ಗಗನವಾಗದೆ ಮುಗಿದರದುವೇ
ಅಗಜೆವರ ಕೃಪೆಯೆಂದು ಹೇಳುತ ತಾತ ಚಿಂತಿಸಿದಾ

೪

ಚಿಂತೆ ಬೇಡೆನ್ನುತಲಿ ಭಕ್ತರು
ಸಂತಸದಲಿರಿಯೆಂದು ಹೇಳುತ
ಹಂತ ಹಂತದಲಾದರು ಸಹಾ ಮುಗಿಸಬೇಕೆನಲೂ
ಸ್ವಂತ ಸ್ವಾರ್ಥದ ಕಾರ್ಯವಾಗದ
ನಂತ ಜನರನುಕೂಲಕಾಗಿಯೆ
ಕಂತುಹರ ಕೃಪೆಯಲ್ಲಿ ಕಟ್ಟುವುದೆಂದು ಹೇಳುತಲೀ

೫

ಭಕ್ತರೆಲ್ಲರು ಕೂಡಿ ವಿವರಿಸಿ
ಯುಕ್ತದಲಿ ಕಾರ್ಯವನು ಮುಗಿಸುವ
ಮುಕ್ತ ಮನಸಲಿಯಿರಲು ಹೇಳುತ ತಾತಗಭಿಜನರೂ
ಶಕ್ತಿ ಕುಂದಿತು ದೇಹಸೊರಗಿತು
ಭಕ್ತಜನರಿಗೆ ಭಯವು ತಂದಿತು
ಯುಕ್ತಿಯಿಂದಲಿ ಹಳ್ಳಿ ವೈದ್ಯರ ಸೇವೆಯಲಿ ತಾತಾ

೬

ಹೀಗಿರುವ ವಿಷಯವನು ತಿಳಿದಿಹ
ರಾಗಿರುವ ಕೊಟ್ಟೂರು ಶ್ರೀಗಳು
ಸಾಗಿ ಬಂದರು ತಾತನಲ್ಲಿಗೆ ಚಿಂತೆಯಲಿ ಕೊರಗೀ
ಬೇಗದಲಿ ಬಳ್ಳಾರಿಗಿಂದಲೇ
ಹೋಗಲೊಪ್ಪಿಸಿ ತಾತನನು ತಾ
ವಾಗಲೇ ಕಾರಿನೊಳು ಪಯಣವಮಾಡಿ ತಲುಪಿದರೂ

೭

ನುರಿತ ಪಂಪನಗೌಡ ವೈದ್ಯನು
ವರದ ದೊಡ್ಡಮಲ್ಲಪ್ಪ ವೈದ್ಯನು
ಸರಸರನೆ ಕೊಟ್ಟೂರುಸ್ವಾಮಿಯ ಮತಕೆಬರುತಾಗಾ
ಪರಮ ತಾತನಿಗೊಂದಿಸುತತಾ
ವಿರುವ ವಿಷಯವ ತಿಳಿದುಕೊಳ್ಳುತ
ಪರಿವಿಧದಿ ನೋಡುತ್ತ ಔಷಧಿ ಕೊಡುತ ತಾತನಿಗೇ

೮

ಇದರೊಳಗೆ ಗಾಬರಿಯುಯಿರದಲೆ
ಇದುವೆ ಕೇವಲ ಮಾನಸಿಕದಲಿ
ಒದಗಿ ಬಂದಿಹ ನೋವುಯೆನುತಲಿ ತಿಳಿಸಿದಭಿಮತವಾ
ಇದುವೆ ನರಗಳ ದುರ್ಬಲತೆಯಾ
ಹದನದಿಂ ಔಷಧಿಯು ಸೇವಿಸೆ
ಹದುಳದಿಂ ನವಚೇತನವು ತಾ ಮೂಡಿಬರುತಿಹುದೂ

೯

ಇಲ್ಲಿ ಕೆಲದಿನವಿದ್ದು ಮಠದಲಿ
ಇಲ್ಲಿ ವಿಶ್ರಾಂತಿಯನು ಪಡೆಯುತ
ಬಲ್ಲ ವೈದ್ಯರ ಸಲಹೆಯಂತೆಯೆ ನಡೆವುದೊಳಿತೆಂದೂ
ಎಲ್ಲರಭಿಮತದಂತೆವೊಪ್ಪಿದ
ರಲ್ಲೆ ಮಠದಲಿಯಿರುತ ತಾತನು
ಎಲ್ಲ ಕಾರ್ಯವ ಸ್ವಂತ ಖರ್ಚಲಿ ಮಾಡಿಸಿದ ತಾತಾ

೧೦

ಜಗದ ಜನಗಳ ದುಃಖ ಕಳೆಯುತ
ಸೊಗಸು ತನದಲಿ ಹರಸುವಂಥಹ
ಜಗದೊಳಗೆ ಭವರೋಗ ವೈದ್ಯರು ಆಗಿರುವ ತಾತಾ
ಬಗೆದು ಈ ಪರಿ ವೈದ್ಯರಿಬ್ಬರು
ಮಗು ಮಡದಿಸಹಿತದಲಿ ಬರುತಲಿ
ಜಗದ ರಕ್ಷಕ ತಾತನನು ದರ್ಶಿಸುತ ಭಕ್ತಿಯಲೀ

೧೧

ಬರ್ರಿ ಬರ್ರೆಪ ಬರ್ರಿಯೆನ್ನುತ
ಬರ್ರಿ ಸನಿಹಕೆ ಬಂದು ಕುಳ್ಳಿರಿ
ಬರ್ರಿ ತಾಯರೆಯೆಂದು ಕರೆಸುವ ತಾತ ಕರುಣೆಯಲೀ
ತರ್ರಿ ತರ್ರೆಪ ಫಲಪ್ರಸಾದವ
ಬರ್ರಿ ತಗಳರಪ ತಗಳಿರೆನುತ
ಕೊರ್ರಿಯೆನ್ನುತ ಕೊಟ್ಟು ಹರಸಿದ ನಮ್ಮ ಈ ತಾತಾ

೧೨

ಎಲ್ಲ ಕಿರಿಸ್ವಾಮಿಗಳ ಕಳುಹಿಸಿ
ಅಲ್ಲೆ ಉಳಿಸುತ ಶಿವನಗೌಡನ
ಅಲ್ಲಿರುವ ಕವಿಸಿದ್ಧರಾಮಯ್ಯಂಗೆ ಒಪ್ಪಿರುವಾ
ಸಲ್ಲಲಿತ ಬಿನ್ನಹವ ತೀರಿಸಿ
ಎಲ್ಲನೂತನ ಗೃಹಪ್ರವೇಶವ
ಒಳ್ಳಿತನದಲಿ ಮಾಡಿದಾತನ ಹರಸಿ ಬರುವೊದೂ

೧೩

ಹೊಸದಿರುವ ಕಾಪೀನುಶಲ್ಯಕೆ
ಸಸಿನೆಯಿಂ ಕಾವಿಯನು ಅದ್ದಿಸಿ
ಬಿಸಿಲೊಳಗೆ ಒಣಗಿಸಿದ ತಾ ವೈಶಾಖ ಮಾಸದಲೀ
ವಸುಧೆಯೊಳು* ದುಂದುಭಿಯ ವರ್ಷದಿ
ಬಸವನಕ್ಷಯ ತದಿಗೆಯೊಳುಗಾ
ಅಸಮನಯನವತಾರಿ ತಾತನು ಬಂದ ಕವಿಮನೆಗೇ

೧೪

ಮಂಗಳದ ವಾದ್ಯಗಳು ಮೊಳಗಿಸಿ
ಅಂಗಳದೊಳಾರತಿಯು ಮಾಡಿಯು
ಜಂಗಮದಲಕ್ಷಣಗಳಿರುವಾ ಚರವರೇಣ್ಯರಿಗೇ
ಲಿಂಗಗುಣಿ ದೊಡ್ಡಯ್ಯ ಶಾಸ್ತ್ರಿಯು
ಕಂಗಳಿದಿರಲಿ ತೀರ್ಥರೂಪರ
ಸಂಗಮದ ಮಹಮನೆಯೊಳಗೆ ತಾ ಬಂದು ಮಂಡಿಸುತಾ

೧೫

ಏನು ಹರುಷವೊ ತಾತನವರಿಗೆ
ನಾನು ಮಾಡಿದ ಪುಣ್ಯಫಲವೋ
ದೀನ ನಾ ಬಿನ್ನಪವಮನ್ನಿಸಿ ಮನೆಗೆ ಬಂದಿಹರೋ
ನ್ಯೂನವಿಲ್ಲದ ಸರ್ವ ಸಿದ್ಧತೆ
ಸಾನು ರಾಗದಿ ಚಂದದಿಂದಲಿ
ಭಾನು ತೇಜದ ತಾತನಾ ಶಿವಪೂಜೆಗಣಿಯಾಗೀ

---

ಪದ್ಯ ೧೩ :- ದುಂಧುಭಿ ವರ್ಷ :- ೧೯೮೨ (೨೬-೪-೮೨)

೧೬

ವಿವಿಧ ದೀಪಗಳಿಂದಲಂಕೃತ
ನವ ವಿಧದ ಪುಷ್ಪಗಳು ಪತ್ರೆಯು
ಅವಧಾನದಿಂ ಧೂಪ ದೀಪಗಳಿಂದ ಕೂಡಿರಲೂ
ಶಿವಯೋಗಿ ಶಿವಪೂಜೆ ಮಾಡುವ
ಭವನವೇ ಶಿವಸದನವಾಗಿಹ
ಬುವಿಯೊಳೀ ಕವಿ ಧನ್ಯ ತಾತನ ದಿವ್ಯಕೃಪೆಯೊಳಗೇ

೧೭

ಚನ್ನಬಸವರು ಪೂಜೆ ಮಾಡುವ
ಚನ್ನಚಲುವಿಕೆ ನೋಡುವುದೆ ತಾ
ಉನ್ನತದ ಫಲವೆಂದು ತಿಳಿದವ ಧನ್ಯಜಗದೊಳಗೇ
ಚನ್ನಚಲುವಿನ ಪಾದಪೂಜೆಯು
ನನ್ನ ಕೈಗಳು ಮಾಡಿ ಧನ್ಯವು
ಚನ್ನ ಪಾದೋದಕ ಪ್ರಸಾದವು ಕರುಣಿಸಿದ ತಾತಾ

೧೮

ಗಣತೃಪ್ತಿಯಲಿ ಪೂಜೆಮುಗಿಯಿತು
ಘನದಿ ದಕ್ಷಿಣ ಕೊಟ್ಟು ಚರರಿಗೆ
ಘನಮನದಿ ನೂರೊಂದು ರೂಪಾಯಿಗಳು ಕೊಡುತಾಗಾ
ವಿನಯದಲಿ ವಂದಿಸುತ ತಾತಗೆ
ಅನುಪಮದ ತೇಜವನು ನೋಡುತ
ಯೆನಿತು ಪುಣ್ಯವೊ ತಂದ ಬಟ್ಟೆಗಳುಟ್ಟು ಈ ತಾತಾ

೧೯

ಗುರು ಶಿಷ್ಯ ಸಂಗಮದಿ ಬೆಳಗಿತು
ಹರಕರುಣೆ ವರಪುಣ್ಯದಿಂದಲಿ
ಗುರುವೆ ತಾತನು ಶಿಷ್ಯ ತಾ ದೊಡ್ಡಯ್ಯಶಾಸ್ತ್ರಿಗಳೂ
ಅರುಹಿನಾ ಕರುಹನ್ನು ತೋರುವ
ಸರಳದಿಂ ತತ್ವವನು ತಿಳಿಸುವ
ಧರೆಯೊಳಗೆ ಶ್ರೀ ಚನ್ನಬಸವರ ಮಹಿಮೆ ತಿಳಿಸುತಲೀ

೨೦

ಪರಮ ಹರುಷದಿ ಚನ್ನಬಸವರು
ಹಿರಿದು ಮಂಚದ ಮೇಲೆ ಪವಡಿಸಿ
ಪರಮ ದಾನಂದದಲಿ ವಿಶ್ರಾಂತಿಯನು ಪಡೆಯುತಲೀ
ಕೊರತೆಯಾಗದೆ ಸುಖದ ನಿದ್ರೆಯು
ಪರಿಕಿಸಲು ಅದು ಯೋಗನಿದ್ರೆಯು
ನೆರೆದ ಜನಗಳು ಸದ್ದು ಮಾಡದೆ ಹರುಷದಲಿ ಕೂಡೀ

೨೧

ಬಹಳ ಸಮಯವು ಕಳೆದನಂತರ
ಮಹಗುರುವು ಶ್ರೀತಾತಯೆದ್ದನು
ಸಹಜದಾನಲಿವಿಂದ ತಾತನು ನೋಡಿದಾ ಜನರಾ
ಮಹಿಮೆಯಾ ಶ್ರೀಚನ್ನಬಸವರ
ಗಹನವಾದಾ ಪಾದ ಚರಣಕೆ
ವಿಹಿತ ಭಕ್ತಿಯ ಭಾವದಿಂದಲಿ ಭಕ್ತರೊಂದಿಸುತಾ

೨೨

ಹಲವು ಬಗೆಯಲಿ ಹರಸಿ ಸರ್ವರ
ಕಳೆಯು ತುಂಬಿದ ಮನೆಯ ನೋಡುತ
ಸಲೆ ಚಲುವಿನಿಂ ಕೂಡಿದಂಥಹ ಮನೆಯಿದೆನ್ನುತಲೀ
ಬಳಿಕ ಶಾಸ್ತ್ರಿಗಳನ್ನು ಕರೆಯುತ
ಫಲವು ಕೊಡುತಲಿ ಹರಸಿ ಮುದದಲಿ
ಚಲುವಿನಿಂ ಕವಿಯನ್ನು ಹರಸಿಯೆ ಮಠಕೆ ತೆರಳಿದರೂ

೨೩

ಹಲವು ದಿನಗಳು ಕಳೆದು ಮಠದಲಿ
ಹಲವು ವಿಧದಲಿ ಭಕ್ತರಿಗೆ ತಾ
ಹೊಲಬುದೋರಿದ ಚನ್ನಬಸವರು ತೊಳಗಿ ಬೆಳಗುತಲೀ
ಗೆಲುವ ಭಾವದಿ ತಾತನಿರುತಲಿ
ಬಳಿಯಲಿಹ ಬಂದಂಥ ಕಾಣಿಕೆ
ತಿಳಿಸಿ ಕೊಡುತ ಪ್ರಸಾದ ನಿಲಯಕೆ ನಿಜ ವಿರತರಾಗೀ

೨೪

ತಾತನನು ನೋಡಲಿಕೆ ವೈದ್ಯರು
ಓತುವಿಂ ಆಗಾಗ್ಗೆ ಬರುತಲಿ
ಮಾತುಮಿತಿಯಲಿ ಆಡ್ವ ತಾತನನೋಡಿ ಹೋಗುತಲೀ
ಪ್ರೀತಿಯಿಂದಲಿ ನೋಡಿಕೊಳ್ಳುವ
ಆತ ಭಕ್ತನು ಶಿವನಗೌಡನು
ಪೂತ ತಾತನ ಕೃಪೆಗೆ ಪಾತ್ರನು ಧನ್ಯಜಗದೊಳಗೇ

೨೫

ಇಲ್ಲಿ ಸಂಗ್ರಹವಾದ ಕಾಣಿಕೆ
ಯಿಲ್ಲೆ ಉಪಯೋಗಕ್ಕೆ ಕೊಡುತಲಿ
ಬಲ್ಲವರಿಗೆಲ್ಲವನು ಹೇಳಿಯೆ ಕೊಡುವ ಮಹದಾನೀ
ಎಲ್ಲಿ ಹೋದರು ಅಲ್ಲೆ ಭಕ್ತರು
ಸಲ್ಲಿಸುತ ಕಾಣಿಕೆಯು ತಾತಗೆ
ಒಳ್ಳೆಭಾವದಿ ಒಳ್ಳೆ ನೋಟದಿಯಿರುವ ತಾತನಿಗೇ

೨೬

ಚಂದದಿಂ ಕೆಲದಿನವು ಕಳೆಯುತ
ಮಂದಹಾಸದಲಿರುವ ತಾತಗೆ
ಅಂದುವಳ ಬಳ್ಳಾರಿಯಿಂದಲಿ ಕರೆಯು ಬರುತಾಗಾ
ಅಂದೆ ಬರಬೇಕೆಂದು ಹೇಳಿದ
ಬಂದ ಭಕ್ತನು ವಿಷಯ ತಿಳಿಸುತ
ಚಂದದಾದಾಸೋಹ ಮಂಟಪ ಕೆಲಸವಿವರವನೂ

೨೭

ಶಿವನಗೌಡನ ಕರೆದು ಹೇಳುತ
ತವಕದಲಿ ಸಜ್ಜಾಗಿರೆನ್ನುತ
ಅಪರ ಭಕ್ತಬಸಣ್ಣ ಧಣಿಯನು ಕರೆದು ಹೇಳುತಲೀ
ಜವದಿ ಕಾರೊಂದನ್ನು ತರಿಸಿರಿ
ಶಿವನ ಅಪ್ಪಣೆಯಾದ ತೆರನಲಿ
ಶಿವನು ನೆಲೆಸಿರುವಂಥ ತಮ್ಮ ಮಠಕೆ ಪೋಗ್ವುದಕೇ

೨೮

ಕರೆದು ಸಂಗನಬಸವ ಶ್ರೀಗಳ
ಅರಿವ ತೆರನಲಿಯೆಲ್ಲ ಹೇಳುತ
ತವಸಿ ಕಾರ್ಯ್‌ಕರ್ಪೂರದಿಂದಲಿ ಗದ್ದುಗೆಗೆ ಬೆಳಗೀ
ತೆರವು ಮಾಡಿಯೆ ಬನ್ನಿರೆನ್ನುತ
ಹರುಷದಿಂದಲಿ ತಿಳಿಸಿ ಸ್ವಾಮಿಗೆ
ಹೊರಟು ಬಂದರು ಕಾರಿನಿಂದಲಿ ತಮ್ಮ ಮಠಕಾಗಾ

೨೯

ಬಂದ ತಾತನಯಿದಿರುಗೊಳ್ಳುತ
ಚೆಂದ ಗೆಲುವಿನಲಿರುವ ತಾತನ
ನಂದು ಪೂಜಿಸಿ ಮಠದೊಳಗೆ ಕರೆತಂದ ಭಕ್ತಜನಾ
ಅಂದೆ ನೋಡಿದ ಕೆಲಸವೆಲ್ಲವ
ಬಂಧುರದ ದಾಸೋಹ ಮಂಟಪ
ಚಂದದಿಂದಲಿ ಮುಗಿದು ನಿಂತಿಹ ಭವ್ಯಭವನವದೂ

೩೦

ಮತ್ತೆ ಕೂಡಿದ ಭಕ್ತಕಾಣಿಕೆ
ಮೊತ್ತ ಹೆಚ್ಚಿಸಿ ಭವನ ಮುಗಿಯಿತು
ಚಿತ್ತದಲಿ ಬಿನ್ನವಿಸಿ ತಾತಗೆ ಭಕ್ತಜನರಾಗಾ
ಸುತ್ತಲಿಹ ಭಕ್ತರನು ನೋಡುತ
ಗೊತ್ತು ಗುರಿಯನು ತಾತ ತಿಳಿಸುತ
ಇತ್ತ ಕಡೆ ಕೊಟ್ಟೂರು ಶ್ರೀಗಳು ಬರುವುದನು ತಿಳಿಸೀ

೩೧

ಮಾರನೆಯ ದಿನ ಬಂದ ಶ್ರೀಗಳು
ಕಾರಣಿಕ ತಾತನನು ಕಾಣುತ
ಚಾರುತರ ದಾಸೋಹ ಮಂಟಪ ತೋರಿಸುತಲಾಗಾ
ದಾರಿಕಡೆ ಮಹದ್ವಾರವಿರುವೀ
ನೇರ ನೋಟಕೆ ಸೊಗಸುಯೆನಿಸಿದೆ
ಓರಣದಿ ಪ್ರಾರಂಭಮಾಡಿರಿ ಭವ್ಯಭವನವನೂ

೩೨

ಎಂದು ಹೇಳುತ ದಿನವ ಸೂಚಿಸಿ
ಚಂದದಿಂ ದಾಸೋಹ ಮಂಟಪ
ಅಂದಲಂಕರಿಸುತಲಿ ಸೊಗಸಿನ ತೋರಣದಿ ಕೂಡೀ
ಬಂದ ಹರಗುರು ಚರವರೇಣ್ಯರ
ಮುಂದೆ ನಿಲ್ಲುತ ಸೇವೆಮಾಡಿರಿ
ಅಂದು ದಾಸೋಹವನು ಮಾಡಿಸಿ ಸಾರ್ಥಕದಿ ಜಗದೀ

೩೩

ಹರಗುರು ಚರವರರ ಕರೆಸುವಾ
ಪರಮ ಕಾರ್ಯಕೆ ಹಿರಿಯ ಭಕ್ತರ
ಕಿರಿಯ ಭಕ್ತರು ಸೇರಿಕೊಳ್ಳುತ ಸಮರಸದಿ ಕೂಡಿ
ಕರೆಸಲಿಕೆ ಯೋಜನೆಯ ಮಾಡುತ
ತರತರದ ಕಾರ್ಯಗಳ ಮಾಡಲು
ಭರದಿ ಸನ್ನಾಹವನು ಮಾಡುತ ದಿವ್ಯ ಸನ್ನಿಧಿಯೊಳ್

೩೪

ಧರೆಯುಲೆಂಭತ್ತೆರಡು ಇಸವಿಯು
ವರದ ಮೇ ತಿಂಗಳಲಿ ಐದನೆ
ಪರಮ ದಿನದಲಿ ವಿವಿಧ ಕಾರ್ಯಗಳಂದು ಮಾಡುತಲೀ
ವಿರತ ಮಠದಂಗಳದಿ ಷಟ್‌ಸ್ಥಲ
ಭರಿತ ಧ್ವಜವನು ಬೋಳ ಬಸವರು
ನೆರೆದ ಹರಗುರು ಭಕ್ತಜನರಿಂ ಹಾರಿಸುತ ಮುದದೀ

೩೫

ಗುರುತರದ ದಾಸೋಹ ಮಂಟಪ
ಧರೆಯ ಹಾನ್‌ಗಲ್ಮಠದ ಒಡೆಯು
ಪರಮಗುರು ಶ್ರೀ ಸದಾಶಿವರಾ ಅಮೃತ ಹಸ್ತದಲೀ
ಭರದಿ ಉದ್ಘಾಟಿಸುತ ಭವ್ಯದಿ
ನೆರೆದಗಣಿತಾ ಭಕ್ತರೆದುರಲಿ
ವರಮಹಾ ಹೂಬಳ್ಳಿ ಶ್ರೀಗಳ ದಿವ್ಯಸಮ್ಮುಖದೀ

---

ಪದ್ಯ ೩೫ :- ಮುಂಡರಗಿ ಮಠದ (ಆನವಾಳ) ಶ್ರೀಗಳು

೩೭

ಕರುಣೆಯಿಂ ಅಧ್ಯಕ್ಷರಾಗಿಹ
ತಿರೆಯಲಾ ರುದ್ರಾಕ್ಷಿ ಮಠದಾ
ಇರುವ ನಾಗ್ನೂರ್ ಮಠದ ಶ್ರೀಗಳು ಕೃಪೆಯೊಳಗೆ ಜರುಗೀ
ತರತರದ ಗೋಷ್ಠಿಗಳು ಜರುಗುತ
ಸರಳ ಸಂಗನ ಬಸವ ಗುರುಗಳ
ಪರಿವಿಡಿಯಲಧ್ಯಕ್ಷ ಗೌರವದಿಂದ ನಡೆದಾಗಾ

೩೭

ಎಲ್ಲ ಮಠಗಳ ಜನಗಳಿಂದಲಿ
ಎಲ್ಲರೊಪ್ಪುವ ಉಚಿತದಿಂದಲಿ
ಸಲ್ಲಲಿತ ನೂರೆಂಟುಲಗ್ನಗಳಂದು ಮಾಡುತಲೀ
ಒಳ್ಳೆ ಸಾಮೂಹಿಕದಿ ಕೂಡಿಹ
ಬಲ್ಲವರು ಬಗೆಯಿಂದ ಹೊಗಳುತ
ಯೆಲ್ಲ ಮಹಕಾರ್ಯಗಳು ನಡೆಸಿದ ನಮ್ಮ ಈ ತಾತಾ

೩೮

ಕೊನೆಯ ಮಹಕಾರ್ಯವದುಯೆನ್ನುತ
ಅನುಭವದ ನುಡಿಯನ್ನು ನುಡಿಯುತ
ಅನುಪಮದ ದೊಡ್ಡಯ್ಯ ಶಾಸ್ತ್ರಿಗೆ ಹೇಳಿದಾ ತಾತಾ
ಮನವು ದಿಗಿಲನು ಮಾಡಿ ಕೊಳ್ಳುತ
ಅನುನಯದಿ ತಾತನಿಗೆವೊಂದಿಸಿ
ಘನಮನದ ಚಿತ್ತವದು ತಿಳಿಯದು ಯಾರಿಗೆನ್ನುತಲೀ

೩೯

ಶ್ರೀಗುರುವೆ ವರ ಚನ್ನಬಸವರ
ಮಾಗಿನಿಂದಿಹ ಶಿವನ ಸೇವೆಯು
ಭೋಗಲಿಂಗದಿ ನಡೆಸಿ ಶ್ರೀ ಶಿವಯೋಗಿ ತಾನಾಗೀ
ಯೋಗದೊಳು ಶಿವಯೋಗ ಶ್ರೇಷ್ಠವು
ಕೂಗಳತೆಯಲಿ ಶಿವನುಯಿರುವಾ
ಯೋಗದಾ ಪರಿ ತಿಳಿಸಿ ಜಗದೊಳು ನಡೆದು ನುಡಿಯುತಲೀ

೪೦

ಮನವು ಘನದಲಿ ನಿಲಿಸಿ ತಾನಾ
ಅನುಪಮದ ಕಾರ್ಯಗಳನೆಸಗುತ
ಘನಸುಖದ ಸಾಮ್ರಾಜ್ಯವರ ಶಿವಯೋಗದಲಿ ಕೂಡೀ
ಘನ ಪರಂಜ್ಯೋತಿ ಪ್ರಕಾಶದಿ
ಘನಮನದಿ ಕಾರ್ಯಗಳ ಮಾಡುವ
ಘನಗುರುವು ಕೊಟ್ಟೂರು ಸ್ವಾಮಿಯು ಜಗದೊಳಗೆ ಬೆಳಗೀ

೪೧

ತನಗೆ ತಾನೇ ವಿಚಾರಿ ನಿಂದಿಹ
ಅನುಭವವು ಲಿಂಗಾಂಗಯೋಗದಿ
ಘನದವಳ ಬಳ್ಳಾರಿ ಶ್ರೀಗಳ ಕೃಪೆಯೊಳಗೆ ಮೆರೆದೂ
ವಿನಯದಲಿ ಬಂದಂಥ ಭಕ್ತರಿ
ಗನುಪಮದವರ ಹಸ್ತದಿಂದಲಿ
ಮನದ ದುಗುಡವ ಸಿದ್ಧಲಿಂಗರು ಕಳೆದು ಲೋಕದೊಳೂ

೪೨

ಧರೆಯವಳ ಬಳ್ಳಾರಿ ಶ್ರೀಗಳ
ವಿರತ ಮಠದಧಿಕಾರವಹಿಸಿಹ
ವರವೀರ ಶ್ರೀಗುರು ಸಿದ್ಧಲಿಂಗಯತೀಂದ್ರ ತಾವಾಗೀ
ಪರಮ ಮಠದಾ ಶಾಖೆ ಶ್ರೀಗಳು
ಚರವರರು ಚಿನ್ಮಯರುಯೆನಿಸುತ
ಪರಮ ಪಾವನ ಚನ್ನಬಸವರ ಕೃಪೆಯ ಬೆಳಗಿನೊಳೂ

೪೩

ಪರಮ ಹರಗುರು ಚರವರೇಣ್ಯರು
ಅರಿತು ನೋಡುತ ತಾತನವರಾ
ವರಮಹಾದಾಸೋಹ ಮಂಟಪ ಭವ್ಯಭೂತಿಯನೂ
ಮೆರೆದು ನಿಂದಿಹ ದಿವ್ಯರೂಪದಿ
ಧರೆಯ ಜನಕಲ್ಯಾಣಕಾಗಿಯೆ
ಪರಮ ತಾತನು ತ್ರಿವಿಧ ದಾಸೋಹದಲಿ ಮೆರೆಯುತಲೀ

೪೪

ನೆನೆಯಬೇಕೀ ನಮ್ಮ ತಾತನ
ನೆನೆದು ಪಾವನವಾಗುತಲಿತಾ
ಮನವು ಶುದ್ಧದ ಕಾಯಕದಿ ತಾ ಜೀವಿಸಲು ಬೇಕೂ
ವಿನಯದಲಿ ಸರ್ವರನು ಕಾಣುವ
ಅನುದಿನದಿ ದಯೆಯಿಂದ ನೋಡುವ
ಘನದ ಗುಣವನು ತಾತನಲಿ ಕಂಡಿರುವ ಕವಿ ಹಿಗ್ಗೀ

ಹದಿನೈದನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೫ ಕ್ಕಂ ಪದಗಳು ೬೧೫ ಕ್ಕಂ ಮಂಗಳಂ

# ಹದಿನಾರನೆಯ ಸಂಧಿ

**ಸೂಚನೆ :—**

ಧರಿಯಲವತರಿಸಿರುವ ತಾತನು
ಪರಮ ಲೀಲೆಗಳನ್ನು ಮಾಡಿಯೆ
ವರಮಹಾ ಶಿವಯೋಗದಿಂದಲಿ ಲಿಂಗದೊಳಗಾಗೀ

೧

ಅರುಣರಾಗದ ಬೆಳಗು ಸಮಯದಿ
ವಿರತ ಮಠದ ಸುವರ್ಣಗಿರಿಯಾ
ಧರೆಯೊಳೊಡೆತನ ಪಡೆದ ತಾತನು ಪ್ರಕೃತಿಯಂ ನೋಡೀ
ಪರಿಕಿಸಲು ಹೊಳೆ ಹೊಳೆದು ಥಳಿಸುವ
ಹೊರಗಿನಾ ಮೈ ಮಠವು ಚೆನ್ನದ
ಪರಿಯದೇನೆಂದುಸುರಲಾರದ ಅನುಪದ ಚೆಲುವೂ

೨

ಮಠದ ಅಂಗಳದಲ್ಲಿ ನಿಂತಿಹ
ಮಠದ ಮೈ ತುಂಬಿರುವದನಗಳು
ಗುಟುರು ಹಾಕುವ ಹೋರಿಗಳು ತಾ ಸರಳದಿಂ ಕೂಡೀ
ಕಠಿಣ ಹೃದಯದಿ ನೋಡದಲೆ ತಾ
ಪಟುತರದ ಭಾವದಲಿ ತಾತನು
ನಿಟಿಲ ಸಂದಿನ ಕೊಂಬು ಕೆಳಗಿನ ಭಾಗ ತೂರಿಸುತಾ

೩

ತಾತನಾ ಶ್ರೀ ಪಾದನೆಕ್ಕುತ
ಮಾತು ಬಾರದ ಮೂಗುಜೀವಿಯು
ಪಾತರಹಿತದಿ ಸೇವೆ ಮಾಡುವ ಸೊಗಸಿನಿಂ ನಿಂತೂ
ಭೀತಿಯಿಲ್ಲದ ಭಕ್ತಿಯಿಂದಲಿ
ಓತುವಿಂದಲಿ ದಯವ ತೋರುವ
ಪೂತ ಚಿನ್ಮಯ ಭಾವದಿಂದಲಿ ನೋಡ್ವ ಈ ತಾತಾ

೪

ಹಾಳು ಬಿದ್ದಿರುವಂಥ ಮಠವನು
ಜೋಳವಾಳಿಯ ಭಾವದಿಂದಲಿ
ಬಾಳಿನೊಳು ಉದ್ಧರಿಸಿ ಬೆಳಗಿಸಿದಂಥ ಈ ತಾತಾ
ಬಾಳಿನಲಿ ತಾಮೊದಲ ಬೆಳೆಯನು
ಕೂಳು ದೊರೆಯದ ಸಮಯದಲಿ ತಾ
ತಾಳಿ ಬಳಸುವ ಭಕ್ತವೆಲ್ಲವ ಕರಸಿ ತುಂಬಿಸುತಾ

೫

ಮಠದ ಹೊಲಗಳ ಕೆಲಸ ನೋಡುವ
ಮಠಕೆ ಬಂದಿಹ ಭಕ್ತರನು ತಾ
ಮಠದಿ ದಾಸೋಹವನು ಮಾಡಿಸಿ ಹರಸಿ ಕಳಿಸುತಲೀ
ಮಠಕೆ ಬಂದಿಹ ಧಾನ್ಯಧನವನು
ಮಠದ ಭಕ್ತರಿಗಾಗಿ ಬಳಸುತ
ಮಠದಿ ಪರಜಂಗಮರು ಆಗಿಯೆ ತ್ರಿವಿಧದಾಸೋಹೀ

೬

ಜಗವು ಮಿಥ್ಯವು ಆಗದಲೆತಾ
ಜಗದೊಳಗೆ ಯಿರುವಂಥದೆಲ್ಲವು
ಗಗನಮಣಿ ಸಾಕ್ಷಿಯಲಿ ಸತ್ಯವು ಶಿವನ ಸುಂದರದೀ
ಜಗಕೆ ಬಂದಿಹ ಜನಗಳೆಲ್ಲರು
ಜಗದೊಡೆಯ ಕೊಟ್ಟಿರುವ ಪಾತ್ರವ
ಬಗೆಬಗೆಯ ಭಾವದಲಿ ಮಾಡಿಯೆ ಶಿವನ ಮೆಚ್ಚಿಸುತಾ

೭

ಶಿವನು ಪಾತ್ರವ ನೋಡಿ ಮೆಚ್ಚುವ
ಶಿವನು ಭಕ್ತರಿಗಭಯ ನೀಡುತ
ಶಿವನು ಮೆಚ್ಚಿಸಿದಂಥ ಭಕ್ತರು ಶಿವನಸೇರುವರೂ
ಶಿವನ ಬಾಳಿನ ಬಾಳುಸೊಗಸದು
ಶಿವನ ರಹಿತದ ಬಾಳು ಹಾಳದು
ಶಿವನು ಲೀಲೆಗೆ ಉಮೆಯ ಕೂಡಲು ಜಗದ ಬಾಳೆನಿಸೀ

೮

ನೆನೆಯುತಲಿ ಶಿವನನ್ನು ತಾತನು
ಅನುದಿನದಿ ಕಾರ್ಯಗಳ ಮಾಡುತ
ಮನದ ಮುಂದಣ ಆಸೆತೊರೆದಿಹ ಮಾಯೆಯನು ಗೆದ್ದೂ
ಘನಮನದಿ ದಾನವನು ಮಾಡುವ
ಘನದ ಗುಡಿಗೋಪುರವ ಕಟ್ಟುವ
ಜನಕೆ ತಾತನು ಅಭಯ ಹಸ್ತವನೀಡಿ ಹರಸುತಲೀ

೯

ಜಾತಿಮತ ಪಂಥವನು ನೋಡದೆ
ಮಾತುಮನದಾಚೆಯಲಿಯಿರುವೀ
ತಾತನಾ ಪರಿಪರಮ ಭಾವದ ವಿಶ್ವಪ್ರೇಮದೊಳೂ
ಪ್ರೀತಿಯಿಂದಲಿ ಯೋಗಕ್ಷೇಮವ
ತಾತ ಕೇಳುತ ಕೊರತೆ ನೀಗಿಸು
ವಾತ ನಮ್ಮಯ ತಾತನಾಗಿರುವಂಥ ಚನ್ನಬಸವಾ

೧೦

ರೋಗರುಜಿನಗಳನ್ನು ಹರಸುವ
ಭೋಗ ಶಿವಯೋಗದೊಳು ಕಾಣುವ
ಕೂಗಿಗನುಗುಣವಾಗಿ ಮಕ್ಕಳು ಕೊಟ್ಟುಕರುಣಾಳೂ
ಸಾಗಿಬಂದಿಪ ವಧೂವರರಿಗೆ
ಬೇಗದಿಂ ಬಟ್ಟೆಗಳ ಕೊಡುತಲಿ
ನಾಗಭೂಷಣ ರೂಪವಿರುವಾ ತಾತ ಹರಸುತಲೀ

೧೧

ವೀರವಿರತನು ಚಾಗಿ ತಾತನು
ಭೂರಿ ವಳಬಳ್ಳಾರಿ ಮಠವನು
ಧಾರುಣಿಯೊಳತ್ಯಧಿಕ ಕೇಂದ್ರದ ಮಠವುಯೆನ್ನಿಸುತಾ
ವೀರಶೈವದ ತತ್ವ ತಿಳಿದಿಹ
ಧೀರಗುರುವರ ಚನ್ನಬಸವರ
ಘಾರಮಹಿಮೆಯು ಕಂಡ ಭಕ್ತರು ಧನ್ಯಜಗದೊಳಗೇ

೧೨

ತನ್ನ ತವರಿಗೆ ಹೋದ ಹೆಣ್ಣಿನ
ತನ್ನ ಹಿಗ್ಗೆಷ್ಟೆಂದು ಹೇಳಲಿ
ತನ್ನತನ ಹಿಗ್ಗಿನಲಿ ಮರೆಯುತ ತಾತ ಸನ್ನಿಧಿಯೊಳ್
ತನ್ನ ತಾಪತ್ರಯವ ಮರೆಯುತ
ಉನ್ನತದ ಭಾವದಲಿ ನೆನೆಯುತ
ಚನ್ನಚಲುವಿನತಾತನಾನುಡಿ ಕೇಳಿದಾಮಹಿಳೇ

೧೩

ಚಾರು ಷಡುಸ್ಥಲ ಮೂರ್ತಿಯಾಗಿಹ
ಕಾರಣಿಕ ಕೃಷಿಕಾಯಕದಿ ತಾ
ಭೂರಿ ದಾಸೋಹವನು ಮಾಡುವ ತಾತ ಮಹದಾನೀ
ಮೂರು ಮಲಗಳ ಕಳೆದು ತಾತನು
ಮೂರು ಲಿಂಗಗಳನು ಕರುಣಿಸಿ
ಸಾರದಲಿ ಲಿಂಗಾಂಗ ಯೋಗವ ತಿಳಿಸುವೀ ತಾತಾ

೧೪

ಜನರ ಸೇವೆಯು ಶಿವನ ಸೇವೆಯು
ಜನರ ಹಿತಬಯಸಿರುವ ತಾತನು
ಜನರ ನಡೆನುಡಿ ತಿದ್ದುತಲಿ ತಾ ತಾತನಾಗಿರುತಾ
ಧನ ಕನಕ ವನಿತೆಯಲಿ ಶುದ್ಧದಿ
ಅನುಪಮದ ಘನವಿರತ ಭಾವದಿ
ಕನಕಗಿರಿ ಶ್ರೀಗುರುವಿನಿಂದಲಿ ಬೆಳೆದನೀ ತಾತಾ

೧೫

ಇಂಥ ತಾತಗೆ ಮುಪ್ಪು ಬಂದಿತು
ಎಂತು ಹೇಳುವೆ ದೇಹಸೊರಗಿತು
ಅಂತು ವೃದ್ಧಾಪ್ಯಗಳ ಲಕ್ಷಣದಿಂದ ಕೂಡಿರಲೂ
ಸ್ವಂತ ನಡಿಗೆಯು ಚಂದದಿಂದಲಿ
ಅಂತು ಹಿಡಿಯುತ ಬೆತ್ತದಾಸರ
ದಂತೆ ನಡೆಯುತ ಮೆಲ್ಲಮೆಲ್ಲನೆ ಶ್ರದ್ಧೆಯಿಂ ತಾತಾ

೧೬

ಒಂದು ದಿನ ತಾತನಿಗೆ ದೇಹಕೆ
ಅಂದು ಬಂದಿತು ವಿಷಮಜ್ವರವದು
ಬೆಂದಿನಾ ಕಳೆಯಿರದೆ ತಾತಗೆ ಬೇನೆಯಾವರಿಸೀ
ಬಂದರಾಗಲೆ ನುರಿತ ವೈದ್ಯರು
ಕುಂದಿರದೆ ಉಪಚರಿಸಿ ತಾತನ
ಅಂದು ವಿವಿಧೌಷಧಿಗಳಿಂದಲಿ ಸೇವೆಯನು ಮಾಡೀ

೧೭

ಪರಮ ಸೇವೆಗೆ ಗುಣವು ಆಗುತ
ಹರನ ಕರುಣೆಯ ಬೆಳಕ ಮೂಡಲು
ಭರಿತ ಭಯದಲಿ ಕೇಳಬೇಕೆಂದಾಗ ಭಕ್ತಜನಾ
ಹಿರಿಯ ತಾತನವರ ಸಮಾಧಿಯು
ಪರಮ ಜಾಗವ ಸೂಚಿಸಲು ತಾ
ವರಮಹಾಗುರು ತಾತನನು ಕೇಳುತ್ತಭಕ್ತಿಯುಲೀ

೧೮

ತಕ್ಕ ಸಮಯದಲಂದು ಕೇಳಲು
ಕಕ್ಕುಲತೆಯಿಂದಾಗ ಹೇಳಿದ
ಚೊಕ್ಕದಿಂದನಗಳನು ಕಟ್ಟುವ ಜಾಗವನು ತೋರೀ
ದಿಕ್ಕು ದಿಕ್ಕಿಗೆ ಲಿಂಗವಂತರು
ಒಕ್ಕಲಿಗ ಸಹಿತಿತರ ಭಕ್ತರು
ಚೊಕ್ಕದಲಿ ದರುಶನವ ಮಾಡಲು ಸುಲಭವಾಗಿಹುದೂ

೧೯

ನಮಗೆ ಬೇಕಾಗಿರುವ ಭಕ್ತರು
ತಮಗೆ ಅನುಕೂಲದೊಳುಯಿರುವಾ
ಸಮತೆಯಾ ಕ್ರಿಯಾಸಮಾಧಿಗೆ ಬರುವರತಿಮುಂದೀ
ವಿಮಲ ತಾತನ ಮಾತುಕೇಳುತ
ಸುಮನ ಭಾವದಿ ಹಿಗ್ಗುತಲಿತಾ
ಸಮಯ ಸಾಧಿಸಿ ಗೆಲುವ ಭಾವದಿ ನಲಿದು ಭಕ್ತಜನಾ

೨೦

ಸಿದ್ಧಲಿಂಗಸ್ವಾಮಿಯಾಗಲೆ
ಶುದ್ಧ ಮನದಲಿ ಕೇಳಿಹಿಗ್ಗುತ
ಸಿದ್ಧಗೊಳಿಸುವ ಗುರುಸಮಾಧಿಯ ಯೋಜನೆಯ ಮಾಡೀ
ಸಿದ್ಧ ಪುರುಷರ ಅಂತ್ಯಕ್ರಿಯದ
ಯಿದ್ದ ಬಗೆಯನು ತಿಳಿಸಿಹೇಳುತ
ಬುದ್ಧಿಯಿಂದಲಿ ವಿವರವಾಗಿಯೆ ಹೇಳಿಜನಕಾಗಾ

೨೧

ಮೂರು ವಿಧದಲಿ ವೀರಶೈವರ
ಸಾರ ಸಿದ್ಧಾಂತದಲಿ ಹೇಳಿದ
ಮೂರು ಯೆಂದರೆ ಖನನ, ದಹನ ತ್ಯಾಗವೆಂದೆನಿಸೀ
ಧಾರುಣಿಯುಲತ್ಯಧಿಕವಾಗಿಯೆ
ತೋರಿ ಶೃತಿ ವಿಹಿತದಲಿ ಉತ್ತರ
ಪಾರಮಹಿಮೆಯ ಶ್ರೀ ಪ್ರಯೋಗವು ಸರ್ವಯೋಗ್ಯದಲೀ

೨೨

ಪರಮ ಪರತರ ವೀರಶೈವರ
ಗುರುತರದಿ ತಾ ಲಿಂಗದೇಹವ
ಧರೆಯುಲಂತ್ಯಕ್ರಿಯಕೆ ತಾ ಶಿವಮೇಧವೆನ್ನುವರೂ
ಪರಮ ಪದವಾ ಮೇಧವೆಂದರೆ
ನಿರುಪಮದ ಆರಾಧನೆಯುತಾ
ತಿರೆಯೊಳಗೆ ಶಿವದೀಕ್ಷೆ ಹೊಂದಿದ ವೀರಶೈವರಿಗೇ

೨೩

ಖನನವೇ ಬಹುಶ್ರೇಷ್ಠ ಜಗದಲಿ
ಘನಮನದ ಸನ್ಯಾಸಿಗಳಿಗಾ
ಖನನವೇ ಸರಿಯೆಂದು ತೋರಿ ಗೃಹಸ್ಥ ಜನಗಳಿಗೇ
ಇನಿತು ಅಂತ್ಯೇಷ್ಠಿಯದ ವಿಧಿಯನು
ಜನಗಳರ್ಥವ ಮಾಡಿಕೊಳ್ಳುತ
ಮನುಜ ಕುಲಕುಪಯುಕ್ತವಾದುದೆ ಖನನವೆಂದಿಹುದೂ

೨೪

ಧರೆಯೊಳನುಕೂಲವದುಯಿರದಿರೆ
ಸರಳ ಭಾವದಿ ದೇಹವನು ತಾ
ತೊರೆಂಪೊಳಗೆ ತಾ ಬಿಡುವ ಪದ್ಧತಿ ತ್ಯಾಗವೆನಿಸುವುದೂ
ತಿರೆಯೊಳಿರುವಾ ಯಿತರ ಜನಗಳ
ಪರಿವಿಧಾನವೆ ದಹನವನ್ನಿಸಿ
ಪರಮಶಿವಯೋಗಿಗಳ ಶರಣರ ಪರಿಯು ಬೇರೆನಿಸೀ

೨೫

ಉಕ್ತವಾದ ಸಮಾಧಿ ತತ್ವವು
ಯುಕ್ತಮೂವತ್ತಾರು ತತ್ವದಿ
ಉಕ್ತವಾ*ದಿನ್ನೂರು ಹದಿನಾರ್ ಸಕೀಲುಕೂಡೀ
ವ್ಯಕ್ತಿಯಾಬಲಪಾದವಳತೆಯು
ಯುಕ್ತದಿಂದೈದೈದು ಚೌಕದಾ
ಯುಕ್ತದಿಂ ಒಂಭತು ಪಾದವ ಆಳವಿರಬೇಕು

೨೬

ತಳದ ವೇದಿಕೆ ಘನದ ಪಾದವ
ಚಲುವ ದೊಂಭತ್ಪಾದಗಳು ತಾ
ಕಳೆದರಾಯಿನ್ನೂರ ಹದಿನಾರ್ ಸಕೀಲವಾಗೀ
ಚಲುವ ಮೂರ್ಸೋಪಾನದಳತೆಯು
ಚಲುವ ಉದ್ದಗಲೆತ್ತರದಿ ತಾ
ಚಲುವಕ್ರಮದೊಂದೆರಡು ಮೂರೆನಿಸಿರುವ ಪಾದಗಳೂ

೨೭

ಕಿರಿಕುಣಿಯು ಉದ್ದಗಲದೆತ್ತರ
ಸರಿಕ್ರಮದ ಮೂರ್ಪಾದಗಳು ತಾ
ಸರಿಯದಿಪ್ಪತ್ತೇಳು ಘನಪಾದದಲಿ ಕೂಡಿರು ತಾ
ವರಕಮಾನುದ್ದಗಲದೆತ್ತರ
ಪರಿಯು ಹದಿಮೂರ್ಘನದ ಪಾದವು
ಯರಡು ಕಡೆಗೂಡುಗಳು ತಾನಾಯೆರಡು ಘನಪಾದಾ

---

*ಪದ್ಯ ೨೫ :– ೬ × ೬ × ೬ = ೨೧೬

ಪದ್ಯ ೨೬ :– ಕಿರುಕುಣಿ (ತ್ರಿಕೋಣ) ಪ್ರಮಾಣ

ಪದ್ಯ ೨೭ :– ಎತ್ತರ × ಅಗಲ × ತಗ್ಗು (ಉದ್ದ)

೩ × ೩ × ೩ = ೨೭ ಘನಪಾದ

ಕಮಾನು ಎತ್ತರ × ಉದ್ದ × ತಗ್ಗು ೧೩॥ ಘನಪಾದ

೧॥ × ೩ × ೩ ೨ ಘನಪಾದ

ತ್ರಿಕೋಣದ ಎರಡು ಕಡೆಯು ಗೂಡುಗಳು ೪೨

೨೮

ಮೂರು ಕೋನವು ದೇಹ ಹೋಲುತ
ಸೇರಿ ಕೆಳಗಿನ ಚೌಕದೇಹವು
ಸೇರಿರುವಾ ಕಮಾಸು ಮಸ್ತಕದಿಂದ ಕೂಡಿರಲೂ
ತೋರುತಲಿ ತಾ ಲಿಂಗ ಹೋಲಿಕೆ
ಭೂರಿ ತತ್ವದಿ ಕೂಡಿಕೊಂಡಿಹ
ಸಾರೆಯೆರಡಾ ಗೂಡುಗಳು ತಾ ಜ್ಞಾನನೇತ್ರಗಳೂ

೨೯

ಮೊತ್ತದಿಂವರ ವೀರಶೈವರ
ಸುತ್ತ ವೇದಿಕೆ ಪೀಠ ಹೋಲುತ
ಮೊತ್ತದಲಿ ಸೋಪಾನಗಳು ತಾ ಗೋಮುಖವು ಆಗೀ
ಚಿತ್ತದಿಂ ಹೇಳಿರುವ ತತ್ವವು
ಕತ್ತಲಂ ಕಳೆದಿರುವ ಬೆಳಕದು
ಮೊತ್ತದಲಿ ಲಿಂಗೈಕ್ಯಮೂರ್ತಿಯೆ ಗೋಳಕವದಾಗೀ

೩೦

ಲಿಂಗದಾವರ ಮೂಲ ತತ್ವದಿ
ಲಿಂಗಗುಣಗಳು ಪಡೆದ ವ್ಯಕ್ತಿಯು
ಲಿಂಗ ತತ್ವದಿ ಕೂಡಿ ನಿರ್ವಯಲಾದನೆನ್ನುತಲೀ
ತುಂಗ ತತ್ವದಿ ಕೂಡಿ ನಡೆಯುತ
ಮಂಗಲದ ಮೂರ್ತಿಯದು ಆಗುತ
ಲಿಂಗಲೀಲೆಗಳನ್ನು ಮಾಡಿಯೆ ಲಿಂಗದೊಳಗಾಗೀ

೩೧

ಹದದಿ ಕೂಡಿರುವಂಥ ತತ್ವದಿ
ಇದುವೆ ಪರಮೋದ್ದೇಶವಾಗಿದೆ
ಸದುಹೃದಯದಿಂ ಮಾಡುವಂಥಹ ವರಸಮಾಧಿಯದೂ
ವಿದಿತವಾಗಿಹ ವೀರಶೈವರ
ಉದಿತ ಮಾರ್ಗವು ಚಂದವಾಗಿದೆ
ಸದಮಲದ ಶಿವಯೋಗದಿಂದಲಿ ಭವ್ಯವಾಗಿರುತಾ

೩೨

ಅವಸರದ ವೇಳೆಯಲಿ ಜಗದೊಳು
ಅವಸರದಿ ಅಂದಾಜಿನಳತೆಯ
ಅವಸರದ ಗರ್ತದಲಿ ಹೂಳ್ವುದು ಭೂಸಮಾಧಿಯದೂ
ತವೆರಂಧ್ರ ಪೆಟ್ಟಿಗೆಯ ಒಳಗಾ
ಹವಣದಿಂ ದೇಹವನು ಯಿರಿಸಿಯೆ
ತವಕದಲಿ ನದಿಯೊಳಗೆ ಬಿಡುವುದೆ ಜಲಸಮಾಧಿಯದೂ

೩೩

ಯೋಗಸಿದ್ದರು ತಮ್ಮ ಇಚ್ಛೆಯು
ಆಗಲದು ನಾಸಾದಿ ರಂಧ್ರಗ
ಳಾಗ ಬಂಧಿಸಿ ಆತ್ಮವನು ತಾ ಶಿವನೊಳಗೆಲಯಸೀ
ಆಗ ಹುಟ್ಟಿದ ಯೋಗದಗ್ನಿಗೆ
ಬೇಗದಿಂ ದೇಹವನು ಅರ್ಪಿಸಿ
ದಾಗಲಗ್ನಿ ಸಮಾಧಿಯಾಗ್ವುದುಯೆಂದು ತಿಳಿಸುತಲೀ

೩೪

ಶಿವಯೋಗಿ ಏಕಾಂತ ಸ್ಥಳದಿ
ಅವಗತಿಯುಲಾ ಗೋಸಮಾಧಿಯ
ಅವರು ರಚಿಸಿಯೆ ಒಳಗೆಯಿಳಿಯುತ ಯೋಗದಿಂಕುಳಿತೂ
ಛವಿಯ ತೇಜದಿ ಇಷ್ಟಲಿಂಗವ
ಅವಿಕಲದಿತಾ ಪ್ರಾಣಲಿಂಗದಿ
ತವಕದಲಿ ಬೆರಸುವುದೆ ತನ್ನಾ ಬಯಲ್ಸಮಾಧಿಯದೂ

೩೫

ನೆರೆದ ಜನರಿಗೆ ಗುರುಸಮಾಧಿಯ
ಪರಿವಿಧಾನವ ತಿಳಿಸುತಲಿ ತಾ
ಕಿರಿಯ ತಾತನು ಸಿದ್ಧಲಿಂಗಸ್ವಾಮಿಯಾಗಿಹನೂ
ಪರಮ ಪರತರ ತಾತನವರಾ
ಪರಮದಭಿಮತದಂತೆ ಭಕ್ತರು
ಘೊರಗೆ ಮಾಡ್ಡ ಕ್ರಿಯಾಸಮಾಧಿಯ ಕೆಲಸಕನುವಾಗೀ

೩೬

ವಿಬುಧ ಅನುಭಾವಿಗಳ ಕರೆಸುತ
ಅಭಿಜನರ ಸೇವೆಯನು ಮಾಡಿಸಿ
ವಿಭವ ಸತ್ವಕ್ರಿಯಾಸಮಾಧಿಯ ಕೆಲಸಮುಗಿಸಿದರೂ
ವಿಭುವಿನಾಜ್ಞೆಯು ಆಗಿದೆನ್ನುತ
ಅಭವ ಸನ್ನಿಧಿ ಸೇರಬಯಸಿದ
ಅಭಯದಲಿ ಶ್ರೀ ತಾತ ಹೇಳಿದ ನೆರೆದ ಜನಗಳಿಗೇ

೩೭

ಏನೆ ಆಗಲಿ ಕೊನೆಯ ಯತ್ನವು
ದೀನಭಕ್ತರ ಬಯಕೆಯೆಂತೆಯೆ
ತಾನು ಒಪ್ಪುತ ವರ ಚಿಕಿತ್ಸೆಗೆ ಮಾತು ಮೀರದಲೇ
ಜ್ಞಾನನಿಧಿ ಶ್ರೀ ತಾತನಾಗಲೆ
ದೀನ ಭಕ್ತರ ಜೊತೆಗೆ ಹೊರಟನು
ಏನು ಹೇಳ್ವದು ಅಂತು ಹುಬ್ಬಳ್ಳಿಯನು ಸೇರುತಲೀ

೩೮

ಖಾಸಗಿಯ ನರ್ಸಿಂಗು ಹೋಮಿಗೆ
ತ್ರಾಸದಲಿ ತಾವಂದು ಸೇರಿಯೆ
ವಾಸಿಯಿಂದಲಿ ವೈದ್ಯನೋಡುವ ಸಮಯದಲಿ ಆಗಾ
ಲೇಸಿನಿಂ ಹುಬ್ಬಳ್ಳಿ ಶ್ರೀಗಳು
ಆಸೆ ಅಂತಿಮ ಗುರಿಯ ಕೇಳುತ
ಭಾಸಿಸುವ ಶ್ರೀ ತಾತನವರಾ ಮೊಗವ ನೋಡುತಲೀ

೩೯

ಸಿರಿಮೊಗದ ಶ್ರೀ ತಾತನವರಾ
ವರಜಗದ್ಗುರು ಮೊಗವ ನೋಡುತ
ಯಿರಲು ಆಗದು ಮಠಕೆ ಹೋಗಿಯೆ ತಿಳಿಸುವುದುಯೆಂದೂ
ಕರುಣೆಯಿಂದಲಿ ಹೇಳಿತಾತನು
ತರಿಸಿ ಕಾರನು ಹೊರಟರಾಗಲೆ
ಹರನ್ತ್ತಅಪ್ಪಣೆಯೆಂತೆವಳಬಳ್ಳಾರಿ ಮಠಕಾಗಾ

೪೦

ಕಾರು ರಭಸದಿ ಹೋಗ್ವಸಮಯದಿ
ಕಾರಿನೊಳಗಿಹ ಭಕ್ತ ಜನರಿಗೆ
ದಾರಿ ತೋಚದೆ ದಿಗಿಲು ಗೊಳ್ಳುತಲಿ ಕಂಬನಿಯ ಸುರಿಸೀ
ಬಾಬಾರಿಗು ಕಣ್ಣಳೊರಸುತ
ಬೇರೆಗತಿಯಿಲ್ಲದಲೆ ಭಕ್ತರು
ಊರು ಸೇರುವ ತನಕ ಶ್ರೀಗುರು ತಾತನನು ಭಜಿಸೀ

೪೧

ತಾತ ತನ್ಮಯರಾಗಿಯಿರುತಲಿ
ಭೂತನಾಥನ ನೆನೆದು ಮನದಲಿ
ಭೀತಿಯಿರದಲೆ ಶಿವಕಳೆಯು ತುಂಬಿರುವ ಈ ತಾತಾ
ಆತುರದಿ ಕಾರೊಳಗೆ ಹೋಗುತ
ತಾತ ಕೇಳಿದ ಭಕ್ತಜನರಿಗೆ
ಪೂತಮಠ ಬಂತೇನ್ರುಪಯೆಂದಾಗ ಕರುಣದಲೀ

೪೨

ಅಹುದು ಬುದ್ಧಿಯೆ ಯೆಂದು ಹೇಳುತ
ಅಹುದು ಮಠಬಂದಿಹುದುಯೆನ್ನುತ
ಬಹಳ ದುಃಖದಿ ಕಾರಿನಿಂದಲಿಯಿಳಿಸಿ ಕರೆತಂದೂ
ವಿಹಿತದಲಿ ತಾತನನು ಭಕ್ತರು
ಸಹಿತದಲಿ ಮಠದೊಳಗೆ ಕೂಡ್ರಿಸಿ
ಬಹಳ ಶ್ರದ್ಧಾಭಕ್ತಿಯಿಂದಲಿ ಪಾದತೊಳೆಯುತಲೀ

೪೩

ನೆರೆದ ಜನರನು ನೋಡಿ ಹರುಷದಿ
ಧರೆಯೊಳಗೆ ಶಿವಕಾರ್ಯಮುಗಿಯಿತು
ಭರದಿ ಶಿವನಪ್ಪಣೆಯ ಮೇರೆಗೆ ಹೊರಡಬೇಕೆಂದೂ
ಧರಿಸಿ ನೊಸಲಿಗೆ ಶ್ರೀ ವಿಭೂತಿಯ
ವರತಪೋಮುಖವರಳಿನಿಂತಿತು
ಪರಮ ತಾತನ ಪ್ರಾಣಲಿಂಗದ ಜ್ಯೋತಿ ಬೆಳಗುತಲೀ.

೪೪

ವಿಮಲ ಜ್ಯೋತಿಯು ತಿರುಗಿ ಬೆಳಗುತ
ಅಮಮದೇನಾಶ್ಚರ್ಯ ಜಗದಲಿ
ಗಮನದಿಂ ಮಹಜ್ಯೋತಿಯೊಳು ತಾಕೂಡಿ ವಿಸ್ಮಯದೀ
ಬೆಮರುತಲಿ ಕಂಪಿಸುತ ಭಕ್ತರು
ಉಮೆಯವರನಿಗೆ ಕರುಣೆಯಿಲ್ಲವು
ಭ್ರಮಣೆಗೊಳಿಸಿದಯಿಳೆಯ ಜನರಿಗೆ ಯೆಂದು ದುಃಖಿಸುತಾ

೪೫

ಬದಿಯಲಿದ್ದಾ ಸಿದ್ಧಲಿಂಗರು
ಹೃದಯ ವಿಹ್ವಲರಾಗಿ ಅಳುತಲಿ
ಇದಿರಲಿದ್ದಾ ಶಾಂತಮಲ್ಲರು ಗಳಗಳನೆ ಅಳುತಾ
ಇದನು ನೋಡಿದ ತೋಂಟದಾರ್ಯರು
ಹುದುಗಿಕೊಂಡಿರುವಂಥ ದುಃಖವ
ಗದಗಡನೆ ನಡುಗುತ್ತಲಳುತಲಿ ಶಿವಶಿವಾಯೆಂದಾ

೪೬

ದುಂದುಭಿಯ* ವರ್ಷದಲಿ ಬರುವಾ
ಅಂದು ಅಧಿಕದ ಅಶ್ವಯುಜದಾ
ಚಂದವಾಗಿಹ ಕೃಷ್ಣ ಪಕ್ಷದ ಆದಿವಾರದೊಳೂ
ಮಂದಗತಿ ರವಿ ತೇಜದಿಂದಲಿ
ಸಂಧ್ಯೆಸಮಯದಿ ತಾತನವರಾ
ಇಂದುಧರನಾಜ್ಞೆಯನು ಪಾಲಿಸಿ ಲಿಂಗದೊಳಗಾಗೀ

೪೭

ತಾತ ಕೇಳಿದ ದೇವಿ ಗುಡಿಯನು
ಓತುವಿಂ ಮಾತ ಬಂತುಯೇನ್ರಪ
ತಾತ ಕೊನೆಯಲಿ ಕೇಳುತಾಗಲೆ ಮಠದಿ ಕನವರಿಸೀ
ರೀತಿ ನೀತಿಗಳನ್ನು ಮರೆಯದೆ
ತಾತ ಲೌಕಿಕವನ್ನು ಬಿಡದಲೆ
ಪೂತ ಚಿನ್ಮಯ ತಾತಯಿನ್ನೆಲ್ಲೆಂದು ದುಃಖಿಸುತಾ

---

ಪದ್ಯ :— ೪೬ :— ೧೦-೧೦-೧೯೮೨ ರಂದು ಲಿಂಗೈಕ್ಯ.

೪೮

ತಮ್ಮ ಗುರುವಿನಪೇಕ್ಷೆಯಂತೆಯೆ
ತಮ್ಮ ವಿರತರ ಮಠಕೆ ಬರುತಲಿ
ತಮ್ಮ ಗುರು ಶ್ರೀ ಬಸವಲಿಂಗರಪೇಕ್ಷೆಯೊಂತಾಗೀ
ನಮ್ಮ ತಾತನು ಮಠಕೆ ಬಂದೇ
ತಮ್ಮಪೇಕ್ಷೆಯ ಭಾವದಿಂದಲಿ
ಒಮ್ಮನದಿ ಲಿಂಗೈಕ್ಯರಾಗಿಯೆ ಗಮ್ಯದಲಿ ನಡೆದೂ

೪೯

ಬಾನುಲಿಯು ವಿಷಯವನು ತಿಳಿಸಿತು
ಆ ನುಡಿಯು ಕೇಳ್ದಂಥ ಜನಗಳು
ಏನು ಲೀಲೆಯು ತಾತ ಪೋದನು ಯೆಂದು ಬರುತಾಗಾ
ಧ್ಯಾನ ಮಾಡುತ ನೆರೆಯಹಳ್ಳಿಯ
ಸ್ಥಾನದಿಂದಲಿ ಬಂದ ಜನಗಳು
ಜ್ಞಾನನಿಧಿ ಶ್ರೀ ತಾತಯಿನ್ನಿಲ್ಲೆಂದು ದುಃಖಿಸುತಾ

೫೦

ನದಿಗಳೆಲ್ಲವು ಕೋಡಿ ಹರಿಯುತ
ನದಗಳೆಲ್ಲವು ಹಿಂದೆ ಬರುತಲಿ
ನದಿನದಗಳೊಂದಾಗಿ ಸಾಗರ ಸೇರಿದಂತೆ ಜನಾ
ತೊದಲು ನುಡಿಯುವ ತಾಯಿಯಂದಿರು
ಒದಗಿದಾ ದುಃಖಕ್ಕೆ ಮರುಗುತ
ಕುದಿವ ಕಣ್ಣೀರಿನಲಿ ತಲ್ಲಣದಿಂದ ತತ್ತರಿಸೀ

೫೧

ಎಲೆಯು ಅಲುಗದು ಗಾಳಿ ಬೀಸದು
ಉಲಿವ ಮೃಗಪಕ್ಷಿಗಳು ಶೋಕದಿ
ಹೊಲಬು ಗಾಣದೆ ದನಗಳೆಲ್ಲವು ನಿಂತುರೋದನದೀ
ಗೆಲುವಿರದೆ ವರತುಂಗ ಭದ್ರೆಯು
ಉಲುಹಿನಿಂ ಹರಿಯದಲೆ ಸ್ತಬ್ಧದಿ
ತಳಮಳವ ಪಡುವಂಥ ಜನಗಳು ಸೇರಿ ಮಠದೊಳಗೇ

೫೨

ಹರಗುರು ಚರವರರು ಬರುತಲಾ
ವಿರತ ಮಠದಂಗಳವು ತುಂಬಿತು
ಭರಿತ ದುಃಖದಿ ಬಂದ ಶ್ರೀ ಕೊಟ್ಟೂರು ಸ್ವಾಮಿಗಳೂ
ಸರಿದು ನಿಂತರು ಸಿದ್ಧಲಿಂಗರು
ಧರಣಿ ಬಿಡದಿಹ ಶಾಂತಮಲ್ಲರು
ಕರುಳು ಕೊರೆವಂತಳುವ ಚಾಗಿಯಸ್ವಾಮಿ ಸಹಿತದಲೀ

೫೩

ಕಿರಿಯ ಸ್ವಾಮಿಗಳನ್ನು ನೋಡುತ
ಅರಿಯದಶ್ರುಗಳನ್ನು ಸುರಿಸುತ
ಪರಮದಾಲಿಂಗನದಿ ಸಂಗನ ಬಸವ ಸ್ವಾಮಿಗಳೂ
ಹಿರಿಯತನದಲಿ ಧೈರ್ಯ ಹೇಳುತ
ಅರಿತು ಮುಂದಿನ ಕಾರ್ಯತ್ವರಿತಕೆ
ತರಣಿಯಸ್ತಮಿಸುತಲಿ ದುಃಖದಿ ತಾತನೈಕ್ಯತೆಗೇ

೫೪

ತಂಡ ತಂಡದಿ ಭಜನೆಮಾಡುವ
ಕಂಡು ಜನಗಳು ಸರಿಸಿ ಬರುತಲಿ
ಪಂಡಿತರು ದೊಡ್ಡಯ್ಯ ಶಾಸ್ತ್ರಿಗಳಾಗಬಂದಿಹರೂ
ಮಂಡೆಯೂರಿಯೆ ನಮಿಸಿ ತಾತಗೆ
ಕಂಡ ಕಣ್ಗಳು ತೇವದಿಂದಲಿ
ದುಂಡು ಮಲ್ಲಿಗೆ ಹಾರ ತಾತಗೆ ಹಾಕಿ ಕಿಂಕರದೀ

೫೫

ಬದಿಯಲಿಹ ಶ್ರೀಗಳಿಗೆ ವಂದಿಸಿ
ಸದಮಲದ ಸೋಪಾನದಿಳಿಯುತ
ಸದಯ ಶಿವಕವಿ ಸಿದ್ಧರಾಮಯ್ಯಂಗೆ ಕೈಕೊಟ್ಟೂ
ಬದುಕಿನಲಿ ಬೆಳಕನ್ನು ತೋರುವ
ಹದುಳದಿಂ ಸರ್ವರನು ಹರಸುವ
ವಿದಿತ ತಾತನು ಐಕ್ಯನಾದನು ಯೆಂದು ಹೇಳುತಲೀ

೫೬

ಪರಮದನುಭವ ಮಾತು ಕೇಳುತ
ಹರನ ಪ್ರತ್ಯಕ್ಷದಲಿ ಕಾಣದೆ
ಯೆರಡನೆಯ ಶಿವನಾದ ತಾತನ ಕಂಡಜನಧನ್ಯಾ
ಯಿರುವ ವಿಷಯುವ ಕವಿಯು ಹೇಳುತ
ತೆರೆದ ಹೃದಯದಿ ಮಾತನಾಡುತ
ಕರೆದು ಶಾಸ್ತ್ರಿಗಳನ್ನು ಒಂದೆಡೆ ವಿರವಿಸಲು ಹೇಳೀ

೫೭

ಇಡಿ ರಾತ್ರಿ ಭಜನೆಯನು ಮಾಡುತ
ಭೃಡಧ್ಯಾನ ಕೀರ್ತನೆಯು ನಡೆಸುತ
ಅಡಿಗಡಿಗೆ ಶ್ರದ್ಧೆಯನು ತೋರಿವ ಭಕ್ತಜನ ಕೂಡೀ
ನಡೆನುಡಿಯು ಬಲುಚೆಂದವಾಗಿಹ
ದುಡುಕಿರದ ನಿಜವಿರತರಾಗಿಯೆ
ಕಡೆಗೆ ಕಣ್ಮರೆಯಾಗಿ ಹೋದರು ಯೆಂದು ದುಗುಡದಲೀ

೫೮

ಬಾನುಲಿಯ ಸಂದೇಶ ಕೇಳಿವ
ಮೌನ ತಾಳುತ ಮೂಜಗಂಗುರು
ಸಾನು ರಾಗದ ತಾತನವರಾ ಕೊನೆಯಪೇಕ್ಷೆಯದೂ
ನಾನು ಕೇಳುದಿ ಪ್ರಶ್ನೆಗುತ್ತರ
ಬಾನುಲಿಯುತಂದಿರುವದುತ್ತರ
ಏನು ಸೋಜಿಗ ತಾತ ಮಾಡಿದನೆಂದ ಜಗದಗುರೂ

೫೯

ಬಂದರಂತ್ಯೇಷ್ಠಿಯದ ಕಾರ್ಯಕೆ
ಚಂದದಾ ಹೂಮಾಲೆ ಹಾಕುತ
ಮುಂದಿರುವ ಕಿರಿ ಸ್ವಾಮಿಗಳ ಸಂತೈಸಿ ಜಗದಗುರೂ
ಮಂದಿ ಬಹು ಸಂಖ್ಯೆಯಲಿ ಇರುವರು
ಕುಂದಿರದ ದಾಸೋಹ ನಡೆಸಿರಿ
ಯೆಂದು ಹೇಳುತ ಮೂರುಸಾವಿರ ಮಠದ ಜಗದಗುರೂ

೬೦

ಚರಣಗಿರಿ ಸಂಸ್ಥಾನ ಮಠದಾ
ಪರಮ ಪರತರ ಹಾಲ್ವಿಯೊಳಗಿಹ
ವಿರತ ಗುರುಶ್ರೀ ರುದ್ರಮುನಿಸ್ವಾಮಿಗಳು ಬರುತಾಗಾ
ಹರನು ತಾತನ ಕರೆದುಕೊಂಡನೆ
ಧರೆಯೊಳಿಹ ಕಾರ್ಯವದು ಮುಗಿಯಿತೆ
ಅರಿತು ಸ್ಮರಿಸುತ ಹಾರ ಹಾಕುತ ಹಾಲ್ವಿಸ್ವಾಮಿಗಳೂ

೬೧

ಹಿರಿಯ ಮಂಡ್ಗಿರಿ ಮಠದ ಶ್ರೀಗಳು
ಪರಮ ಪೂಜ್ಯದ ಬೋಳ ಬಸವರು
ಮರುಗುತಲಿ ಹಾರವನು ಹಾಕುತ ಪೂಜ್ಯತಾತನಿಗೇ
ಪರಮ ಪಂಡಿತ ಗಮಕಿಗಳುತಾ
ಭರದಿ ಒಳಬಳ್ಳಾರ್‍ಗೆ ಬಂದರು
ಹರನ ರೂಪದ ತಾತನನು ಕಂಡಾಗ ಕಳವಳಿಸೀ

೬೨

ಬಹಳ ತೆಂಗಿನ ಕಾಯಿಕಲೆತವು
ಬಹಳ ಭಸ್ಮದ ಘಟ್ಟಿ ಜೊತೆಯಲಿ
ಸಹಜದಲಿ ಪರಿಮಳವ ನೀಡುವ ಊದುಬತ್ತಿಗಳೂ
ಇಹದ ಲೀಲೆಗಳನ್ನು ಮುಗಿಸಿದ
ತುಹಿನ ಕರದಲಿ ತಂಪು ನೀಡುವ
ಮಹದಲಿಂಗದ ಗುಣವ ಪಡೆದಿಹ ಪೂಜ್ಯ ಈ ತಾತಾ

೬೩

ಹಲವು ಬಗೆಯಲಿ ಶೋಕಿಸುತತಾ
ಇಳೆಯ ಜನರಿಗೆ ಸಹಜವಾಗಿಹ
ತಿಳಿದವರು ದುಃಖಿಸುತ ದೇಹದ ಸಹಜ ಧರ್ಮದಲೀ
ನೆಲೆಯು ಕಾಣದೆ ಕಲೆಯು ತಿಳಿಯದೆ
ಹೊಲಬು ತಪ್ಪಿರುವಂಥ ಜನರಿಗೆ
ನೆಲೆಕಲೆಯು ತಿಳಿಸಿರುವ ತಾತನು ಹೋದನೆಂದಳು ತಾ

೬೪

ದೊಡ್ಡವರು ಹೋದಾಗ ಅಳುವುದು
ದಡ್ಡತನವೆಂದರಿದ ಜನಗಳು
ದೊಡ್ಡಮನದಲಿ ಅಂತ್ಯಕಾರ್ಯದ ಕೆಲಸ ಮಾಡುತಲೀ
ದುಡ್ಡುಯಿಡುತಲಿ ಕೆಲವರೊಂದಿಸಿ
ಅಡ್ಡ ನಿಂತಿರುವಂಥ ಭಕ್ತರ
ರೊಡ್ಡ ಗೈಯಲಿ ಸರಿಸಿ ದಾರಿಯು ಮಾಡ್ದ ಪೊಂಪಯ್ಯಾ

೬೫

ಮರುದಿನದಿ ಬಹು ಸಂಖ್ಯೆ ಭಕ್ತರು
ಗುರುಚರರು ಸಹಿತದಲಿ ಬಂದರು
ಪರಮ ತಾತನವರ ಸಮಾಧಿಯ ಕಾರ್ಯ ನೋಡಲಿಕೇ
ಚರವರೇಣ್ಯರ ಕೊನೆಯದರುಶನ
ದೊರಕಿದುದು ಮಹ ಪುಣ್ಯವೆನ್ನುತ
ಕರುಣಿ ತಾತನ ಮೊಗವ ನೋಡುತ ಭಕ್ತಿಭಾವದಲೀ

೬೬

ದೇಹವೆಂಬುವ ತೇರಿನೊಳಗಡೆ
ದೇಹಿಯೆಂಬುವ ದೇವನಿರುವನು
ನೇಹದಿಂ ತಿಳಿಯುತ್ತ ಭಾವದಿ ಭವ್ಯದುತ್ಸವವೂ
ಮೋಹಮದ ಮತ್ಸರಗಳಿರದಿಹ
ದಾಹದಹಿಸಿರುವಂಥ ವಿರತನ
ದೇಹವೇ ದೇವಾಲಯವೃತಾ ಜಗದೊಳಗೆ ಬೆಳಗೀ

೬೭

ಸಿದ್ಧಪಡಿಸಿದ ವರವಿಮಾನದಿ
ಶ್ರುದ್ಧೆಯಿಂ ತಾತನನು ಕೂಡ್ರಿಸಿ
ಯಿದ್ದ ಸ್ಥಳದಿಂದೆತ್ತಿ ಹಿಡಿಯುತ ಹೊರಗೆ ತರುತಾಗಾ
ಉದ್ದ ರಸ್ತೆಯಲಂದು ಉತ್ಸವ
ಬದ್ಧ ಕಂಕಣರಾಗಿ ಮಾಡುತ
ಶುದ್ಧ ಮನದಲಿ ವಾದ್ಯಘೋಷದಿ ತಿರುಗಿ ಬರುತಾಗಾ

೬೮

ಅಂದು ಕೊಡ್ರಿಸಿ ವರಸಮಾಧಿಯು
ಲಂದು ವಿಧ್ಯುಕ್ತದಲಿ ತಾತನ
ಚಂದವಾದ ಕ್ರಿಯಾಸಮಾಧಿಯು ಮಾಡಿ ಮುಗಿಸಿದರೂ
ಇಂದು ಧರನವತಾರಿ ತಾತನ
ಒಂದು ಮಹದಧ್ಯಾಯಮುಗಿಯಿತು
ಇಂದಿನಿಂದಲೆ ಭಕ್ತ ಹೃದಯಗಳಿಂದ ಬೆಳಗುತಲೀ

೬೯

ಹರುಷದಿಂ ಪ್ರತಿವರುಷ ಬಿಡದಲೆ
ಪರಮ ತಾತನ ಪುಣ್ಯತಿಥಿಯನು
ಗುರುಚರರ್ನೇತೃತ್ವದಲ್ಲಿಯೆ ನಡೆಸಿ ಕ್ರಮದೊಳಗೇ
ವರಮಹಾ ಪಂಡಿತರು ಕೂಡುತ
ಸುರುಚಿರದ ಗಾಯಕರು ಸೇರುತ
ಪರಿಪರಿಯ ಕಾರ್ಯಗಳ ನಡೆಸುತ ತಾತಕೃಪೆಯೊಳಗೇ

೭೦

ವರರಥೋತ್ಸವವನ್ನು ಮಾಡುತ
ನೆರೆದ ಜನಗಳು ಜಾತ್ರೆ ಮಾಡುತ
ಧರೆಯೊಳೊಳಬಳ್ಳಾರಿ ಕ್ಷೇತ್ರವು ವಿಭವದಿಂ ಕೂಡೀ
ಗುರುತರದಿ ಶ್ರೀ ಸಿದ್ಧಲಿಂಗರು
ಹರುಷದಲಿ ಶ್ರೀ ಶಾಂತ ಮಲ್ಲರು
ಸರಳ ತನದಾ ತೋಂಟದಾರ್ಯರು ಕೂಡಿ ಮಾಡುತಲೀ

೭೧

ಇವರ ಕಾರ್ಯಗಳಲ್ಲಿ ಇರುತಲಿ
ಇವರ ಯೋಗಕ್ಷೇಮ ನೋಡುವ
ಅವರೆ ಸಂಗನಬಸವಸ್ವಾಮಿಗಳಾಗಿ ಬೆಳಗುತಲೀ
ಭುವನದಲಿ ಖ್ಯಾತಿಯನು ಪಡೆದಿಹ
ವಿವಿಧ ಕಾರ್ಯೋನ್ಮುಖರು ಆಗಿಯೆ
ಸುವಿಮಲದ ಕೊಟ್ಟೂರುಸ್ವಾಮಿಗಳಾಗಿ ಮೆರೆಯುತಲೀ

೭೨

ಎಲ್ಲ ಜಾತಿಯ ಭಕ್ತ ಜನಗಳು
ಇಲ್ಲಿ ಸೇರುತ ಐಕ್ಯಭಾವದಿ
ಸಲ್ಲಲಿತ ಮಹಕಾರ್ಯಮಾಡುತ ತಾತ ಕೃಪೆಯೊಳಗೇ
ಖುಲ್ಲ ತನವನು ಬಿಡುತ ಜನಗಳು
ಒಳ್ಳೆ ಭಾವದ ಜೀವಿಯಾಗುತ
ಇಲ್ಲಿರುವ ಮಹಕ್ಷೇತ್ರ ಮಹಿಮೆಯ ಪುಣ್ಯದಿಂ ಬೆಳಗೀ

೭೩

ವಿರತ ಮಠದೊಳಗಿರುವ ಶ್ರೀಗುರು
ಸರಳ ಭಾವದ ಸಿದ್ಧಲಿಂಗರು
ಪರಮ ದಾಸೋಹವನು ಬಿಡದಲೆ ನಡೆಸಿ ಮಠದೊಳಗೇ
ಗುರು ಪರಂಪರೆಯನ್ನು ಮರೆಯದೆ
ಕರೆದು ಸರ್ವರ ಪ್ರೇಮದಿಂದಲಿ
ಕರುಣೆಯಿಂದಲಿ ವರಪ್ರಸಾದವ ಕೊಟ್ಟು ಕಳಿಸುತಲೀ

೭೪

ನನ್ನ ಪೂಜ್ಯರು ತೀರ್ಥರೂಪರು
ಚನ್ನಬಸವರ ಲೀಲೆ ಬರೆಯಲು
ನನ್ನಿಯಲಿ ಕಾರಣಿಕ ಶ್ರೀ ದೊಡ್ಡಯ್ಯ ಶಾಸ್ತ್ರಿಗಳೂ
ಉನ್ನತದ ಭಾವದಲಿ ರಚಿಸಿದ
ತನ್ನ ತನುವನು ಮರೆತು ಭಕ್ತಿಯ
ರನ್ನವೆಳಗಿನ ಚನ್ನಬಸವರ ಲೀಲೆ ಕಾವ್ಯದೊಳೂ

೭೫

ಪರಮ ತಾತನ ನಿತ್ಯಲೀಲೆಯು
ಸರಳ ಭಾಮಿನಿಯಲ್ಲಿ ರಚಿಸಿಯೆ
ವರತಪೋಧನ ಚನ್ನಬಸವರ ಕೃಪೆಯೊಳಗೆ ಬೆಳಗೀ
ಸುರುಚಿರದ ಮಹಕಾವ್ಯ ಬರೆದಿಹ
ಅರಿವು ಗುರುವೆನಿಸುತಲಿ ಜಗದಲಿ
ಶರಣಕವಿ ಶ್ರೀ ಸಿದ್ಧರಾಮಯ್ಯಗೆ ಕೊಡು ಮುಕುತೀ

೭೭

ಎಂದು ಬೇಡುತ ಭಕ್ತಿಭಾವದಿ
ಮಂದ ಹಾಸದಿ ಕೂಡಿ ನಲಿಯುತ
ಸುಂದರದ ಕಾವ್ಯವನು ರಚಿಸಿಯೆ ಧನ್ಯಜಗದೊಳಗೇ
ಬಂದು ಜಗದೊಳು ಘನದ ಕಾರ್ಯವ
ನಿಂದು ಮಾಡಿಯೆ ಮುಕ್ತಮನಸಲಿ
ಮುಂದಿಗುಪಯೋಗವದು ಆಗುವ ಕಾವ್ಯವನು ರಚಿಸೀ

೭೭

ನನ್ನ ಸುಮತಿಗೆ ಹೊಳೆದ ಪರಿಯಲಿ
ನನ್ನ ಸುಲಲಿತ ಶೈಲಿಯೊಳಗಾ
ಚನ್ನಬಸವರ ಲೀಲೆ ಕಾವ್ಯವ ರಚಿಸಿ ಹಾಡಿದೆನೂ
ಬನ್ನವಿರದೀ ಕಾವ್ಯ ಓದಲು
ಚನ್ನದರ್ಥದಿ ತಿಳಿವ ಜನರಿಗೆ
ಸನ್ನುತಾಮಲ ಚನ್ನಬಸವರ ಕೃಪೆಯು ದೊರಕುವುದೂ

೭೮

ಸುಮ್ಮನೀ ಕಾವ್ಯವನು ಕೇಳಲು
ಹಮ್ಮು ಬಿಮ್ಮುಗಳಳಿದು ಭಕ್ತಿಯು
ಒಮ್ಮನದಿ ಸುಖಶಾಂತಿ ಲಭಿಸುತ ಧರೆಯ ಜನಗಳಿಗೇ
ಕಿಮ್ಮಗೆಯ ಜೀವನವ ನಡೆಸುವ
ದುಮ್ಮಳದಿ ದುಃಖವನು ಮಾಡುವ
ರೊಮ್ಮೆ ಈ ಕಾವ್ಯವನು ಮುಟ್ಟಲು ಹರುಷಗೊಳ್ಳುವರೂ

೭೯

ತೆಗೆದು ಕಾವ್ಯದ ಚಿತ್ರನೋಡಲು
ಬಗೆಬಗೆಯ ಲೀಲೆಗಳ ಕಾಣಲು
ಸೊಗದ ಸುಗ್ಗಿಯ ಹಿಗ್ಗಿನಲಿ ತಾ ಮನವು ನಲಿಯುವುದೂ
ಜಗದೊಳಗೆ ಚಿತ್ರವನು ನೋಡಲು
ಸುಗುಣಗುಣಗಳು ಪ್ರಾಪ್ತಿಯಾಗುತ
ಅಗಜೆವರನವತಾರಿ ತಾತನ ದಿವ್ಯದೃಷ್ಟಿಯೊಳೂ

೮೦

ಭಕ್ತಿಯಿಂ ಪೂಜಿಸುತ ಓದಲು
ಭಕ್ತಿಯಿಂ ಅರ್ಥವನು ತಿಳಿಯಲು
ಭಕ್ತಿ ಶಕ್ತಿಯು ಪಾತದಿಂದಲಿ ಮುಕ್ತಿದೊರೆಯುವುದೂ
ಭಕ್ತಿ ಕೊರತೆಯುದಣಕ ಮಾಡಲು
ರಕ್ತ ಹೀರುವ ಜಿಗಳೆಯಾಗುತ
ರಕ್ತಿ ಭ್ರಮೆಯೊಳು ಕಣ್ಣು ಕೆಡುತಲಿ ಶಾಂತಿ ದೊರಕದಲೇ

೮೧

ನನ್ನ ತಂದೆಯು ತಾತನಾಗಿಹ
ನನ್ನ ಪರಮಾರಾಧ್ಯನಾಗಿಹ
ನನ್ನ ಪಡೆದಿಹ ತಾಯಿಯಾಗಿಹ ಮಾತೃಕರುಣೆಯಲೀ
ನನ್ನ ಬಂಧುವು ಬಳಗವಾಗಿಹ
ನನ್ನಿಯಲಿ ಬಸವಣ್ಣನಾಗಿಹ
ನನ್ನ ಉದ್ಧರಿಸಿರುವ ಶ್ರೀಗುರು ಚನ್ನಬಸವಣ್ಣಾ

೮೨

ಚೆಲುವ ಕಾವ್ಯದ ಕಥನರೀತಿಗೆ
ಹಲವು ಬಗೆಯಲಿ ಸಲಹೆ ನೀಡಿದ
ಒಲುಮೆಯೊಳು ಹಿರಿಯಣ್ಣನಾಗಿಹ ಬಸವರಾಜಯ್ಯಾ
ಗೆಲುವು ಸಾಧಿಸಿ ಕಾವ್ಯರಚಿಸುವ
ಬಲವು ಕೊಡುತಲಿ ಹರಸಿ ಶಕ್ತಿಯು
ಹೊಳೆಯುವಂತೆಯೆ ಮಾಡಿ ಶ್ರೀ ದೊಡ್ಡಯ್ಯಶಾಸ್ತ್ರಿಗಳೂ

೮೩

ಅವರ ನೆನೆಯದೆಯಿರದು ಮನವದು
ಅವಧರಿಸಿ ಸ್ಮರಿಸುತ್ತ ಜಗದಲಿ
ಅವಿಕಲಾನಂದದಲಿನಲಿಯುವ ಕವಿಮನವು ಧನ್ಯಾ
ಅವರವರ ಭಾವಕ್ಕೆ ತಾತನು
ಅವರಿಗೊಪ್ಪುವ ರೀತಿಯಿಂದಲಿ
ಭಾವನದೊಳು ಹರಸುತ್ತ ಬೆಳಗಿವ ನಮ್ಮ ಈ ತಾತಾ

೮೪

ಧರೆಯ ಜಗದಾಂಬೆಯಳ ಕೃಪೆಯಲಿ
ಧರೆಯ ಹಂಪೆಯನಾಳ್ದ ವರಸುತ
ಸರಳ ಸುಂದರ ಶೈಲಿ ಪಡೆದಿಹ ಸಿದ್ಧರಾಮಯ್ಯಾ
ಹರಕವಿಯು ವರಕವಿಯು ಆಗಿಹ
ಪರಮ ಧೀರದ ನವ್ಯಕವಿಯಾ
ಭರಿತ ಭಕ್ತಿಯ ಭಾವದಿಂದಲಿ ಕಾವ್ಯರಚಿಸಿಹನೂ

೮೫

ತಾತ ನುಡಿ ಶಕ್ತಿಯಲಿ ನುಡಿದಿಹ
ತಾತ ಚರಿತೆಯ ರೂಪದಿಂದಲಿ
ತಾತನಡೆದಾ ನುಡಿಯ ಕೇಳುತ ಕಾವ್ಯ ರಚಿಸಿದೆನೂ
ತಾತನೊಡಗೂಡುತಲಿ ಭಕ್ತಿಯ
ದಾತ ತಾತನೆ ಆಗಿ ಬೆಳಗಿಪ
ಪೂತ ಚಿನ್ಮಯ ತಾತ ಕೃಪೆಯಲಿ ಕಾವ್ಯಲೀಲೆಯದೂ

೮೬

ಭಾಮಿನೀ ಷಟ್ಪದಿಯ ಕಾವ್ಯವು
ನೇಮದಿಂದಲಿ ರಚಿಸಿ ಹಾಡಿದೆ
ಪ್ರೇಮದಿಂದಲಿ ಚನ್ನಬಸವರಲೀಲೆ ಹೊಗಳುತಲೀ
ನಾಮ ಕೀರ್ತಿಗೆ ಬರೆಯದಲೆತಾ
ಸೋಮನಾಥನ ಕೃಪೆಗೆ ರಚಿಸುತ
ಭೂಮದೊಳು ಜಗದಮ್ಮ ಕಂದನು ರೇವಮ್ಮಾಸುತನೂ

೮೭

ಸತಿಸಾಧ್ವಿ ರೇವಮ್ಮನಾಪತಿ
ಮತಿವಂತ ಹಂಪಯ್ಯ ಶಾಸ್ತ್ರಿಯು
ಅತಿಶಯದ ಜ್ಯೋತಿಷ್ಯ ವೈದಿಕ ಕೋವಿದರು ಆಗೀ
ಜೊತೆಗೆ ಪಡೆದಿಹ ಸರ್ವದರ್ಶನ
ಚ್ಯುತಿಯುಯಿಲ್ಲದ ದಿವ್ಯದನುಭವ
ಕ್ಷಿತಿಯೊಳಗೆ ಪಂಡಿತರು ಆದರು ಹೊರಗೆ ತೋರದಲೇ

೮೮

ಮಿತ ಭಾಷೆ ಹಿತನುಡಿವಧೀರರು
ಸತಿಪತಿಗಳಾನಂದ ಭಕ್ತಿಗೆ
ಆತನು ಹರ ಕರುಣಿಸಿದ ಪುತ್ರನೆ ರೇವಮಾಸುತನೂ
ಚತುರ ಲಕ್ಷಣ ಶಿಶುವ ಕಂಡಳು
ಗತಿಗಮನ ಹರುಷದಲಿ ನಲಿದಳು
ಪತಿಯುಗತಿಗನುಸರಿಸಿ ನಡೆದಿಪ ಮಾತೃವತ್ಸಲದೀ

೮೯

ಬಾಳು ಹೂಬಾಳಾಗಿ ನಗುತಲಿ
ಏಳು ತಿಂಗಳ ಕಂದನಗಲಿಯೆ
ಹೇಳದಲೆ ಕೇಳದಲೆ ತಾನಾವಿಧಿವಶಳು ಆಗೀ
ಬಾಳನನು ಕೈಗೆತ್ತಿಕೊಂಡಳು
ಬಾಳಿನೊಳು ಹಿರಿಯಕ್ಕಳಾಗಿಹ
ಬಾಳಿನಾಸರೆ ನೀಡಿದಾ ಆದೆಮ್ಮ ಮಹಮಾತೇ

೯೦

ಜಗದೊಳಗೆ ದೊಡ್ಡಯ್ಯ ಶಾಸ್ತ್ರಿಯು
ಸೊಗಸು ಬಾಳಿನ ತಂಗಿಯಾಗಿಯೆ
ಜಗದೊಳಣ್ಣನ ಬಾಳು ಬೆಳಗುತ ಸಲಹಿಕಂದನನೂ
ನಗುತ ಕಂದನ ಬೆಳಸುತಲಿತಾ
ಗತವ ಮರೆಸುತ ಶರಣೆಯಾಗುತ
ಬಗೆಯು ಭವ್ಯದಿ ಬೆಳಸಿ ಕಣ್ಮರೆಯಾದ ಮಹಮಾತೇ

೯೧

ಪಿತನು ಮಾತೆಯರಗಲಿ ಬೆಳೆದಿಹ
ಸುತನೆ ಕವಿ ಪಂಡಿತನು ಆದನು
ಹಿತದೊಳಾದೊಡ್ಡಯ್ಯಶಾಸ್ತ್ರಿಯೆ ಗುರುತಂದೆಯಾಗೀ
ಸುತನ ಭಾಗ್ಯಕೆ ತಂದೆ ತಾಯಿಯು
ಅತುಳ ಪ್ರೇಮದ ಕಥಾನಾಯಕ
ಅತಿಶಯದಿ ನುತಿಸುತಲಿ ತಾತಗೆ ಮಂಗಳವ ಹಾಡೀ

೯೨

ಧರಣಿಯೊಳಗೆ ಸುವೃಷ್ಟಿಯಾಗಲಿ
ಧರಣಿಯಲಿ ಧನಧಾನ್ಯ ಹೆಚ್ಚಲಿ
ಧರಣಿಯಲಿ ದನಕರುಗಳೆಲ್ಲವು ನಲಿದು ಹರುಷಿಸಲೀ
ಧರಣಿಯಲಿಯಿರುವಂಥ ಜನಗಳು
ಭರಿತ ಸುಖಶಾಂತಿಯಲಿ ಬಾಳಲಿ
ಭರತ ವಾಕ್ಯದಿ ಕಾವ್ಯ ಮುಗಿಸುತ ತಾತನನು ಸ್ಮರಿಸೀ

೯೩

ಓಂ ನಮೋ ನದಿ ಚಾಗಿ ತಾತನೆ
ಓಂ ನಮೋ ಶ್ರೀ ಚನ್ನಬಸವನೆ
ಓಂ ನಮೋ ಶ್ರೀ ಗುರುವೆ ವಳಬಳ್ಳಾರಿ ಮಠವಾಸೀ
ಓಂ ನಮೋ ವರ ತಪೋನಿಧಿಯೇ
ಓಂ ನಮೋ ನಿಜವಿರತ ರೂಪಿಯೆ
ಓಂ ನಮೋ ಯೆನ್ನುತಲಿ ನುತಿಸಿದ ಸಿದ್ಧರಾಮಯ್ಯಾ

ಹದಿನಾರನೆಯ ಸಂಧಿ ಸಂಪೂರ್ಣಂ

ಅಂತು ಸಂಧಿ ೧೬ ಕ್ಕಂ ಪದಗಳು ೧೦೦೮ ಕ್ಕಂ
ಮಂಗಳಂ

ಒಳಬಳ್ಳಾರಿ ತಾತ ಶ್ರೀ ಚನ್ನಬಸವ ಲೀಲಾಕಾವ್ಯ
ಮಂಗಲಮಸ್ತು

ಸತ್ಯಂ ಶಿವಂ ಸುಂದರಂ

ಒಳಬಳ್ಳಾರಿ ತಾತ

# ಶ್ರೀ ಚನ್ನಬಸವ ಲೀಲಾ ಕಾವ್ಯ

(ಗದ್ಯ ಕಥಾ ಸಾರ)

ಲೇಖಕರು :

ನಾ. ಮ. ಸಿದ್ಧರಾಮಯ್ಯ, ಬಿ.ಎಸ್‌ಸಿ., ಬಳ್ಳಾರಿ.

ಪ್ರಕಾಶನ :

ಮೃತ್ಯುಂಜಯಂ ಪ್ರಕಾಶನ

ಬಳ್ಳಾರಿ.

—: ನಮಃ ಶ್ರೀ ಗುರುಲಿಂಗ ಜಂಗಮೇಭ್ಯಃ :—

ಒಳಬಳ್ಳಾರಿ ತಾತ

# ಶ್ರೀ ಚನ್ನಬಸವ ಲೀಲಾ ಕಾವ್ಯ

(ಗದ್ಯ ಕಥಾಸಾರ)

## ಮಂಗಲಾಚರಣೆ (ಪೀಠಿಕಾ ಸಂಧಿ)

ಮಧುರದ ಗುಣ ಇರುವೆ ಬಲ್ಲುದು
ವೇಳೆಯ ಗುಣವ ಕೋಳಿ ಬಲ್ಲುದು
ಗೋತ್ರದ ಗುಣವ ಕಾಗೆ ಬಲ್ಲುದು.

ಈ ಮನುಷ್ಯ ಜನ್ಮದಲ್ಲಿ ಹುಟ್ಟಿ ಶಿವಜ್ಞಾನಿಗಳ
ಬರವನರಿಯದಿಪ್ಪಡೆ ಆ ಕೋಳಿ, ಕಾಗೆ,
ಇರುವೆಗಿಂತಲೂ ಕರೆಕಷ್ಟ ಕಾಣಾ ಕೂಡಲ ಚನ್ನಸಂಗಮದೇವಾ

ಮೇಲೆ ಹೇಳಿದ ಷಟ್‌ಸ್ಥಲ ಚಕ್ರವರ್ತಿಯಾದ, ಜ್ಞಾನನಿಧಿ ಚನ್ನಬಸವಣ್ಣನವರ ವಚನದಂತೆ ಶಿವಯೋಗಿಗಳು ಭೂಲೋಕದ ಜನರನ್ನು ಉದ್ಧರಿಸುವುದಕ್ಕೆ ಅವತಾರವೆತ್ತಿ ಬರುವ ಅವರ ಸುಳುಹನ್ನು ಪರಿಗ್ರಹಿಸುವ ಶಕ್ತಿಸಂಪನ್ನತೆ ಪಡೆಯದಿದ್ದರೆ ಮನುಷ್ಯ ಜನ್ಮದಲ್ಲಿ ಹುಟ್ಟಿದರೂ, ಮಧುರದ ಗುಣಬಲ್ಲ ಇರುವೆ, ಸಮಯದ ಗುಣಬಲ್ಲ ಕೋಳಿ, ಮತ್ತು ಗೋತ್ರದ ಗುಣಬಲ್ಲ ಕಾಗೆ, ಇವುಗಳಿಗಿಂತ ಕಡೆಯವನಾಗಿ ಮನುಷ್ಯ ಜನ್ಮ ವ್ಯರ್ಥವಾಗುವುದು.

ಭೂಲೋಕದಲ್ಲಿ ಭಗವದ್ಭಕ್ತಿ, ಧಾರ್ಮಿಕದ ಆಚಾರ-ವಿಚಾರಗಳು, ನೈತಿಕದ ಮನೋಭಾವ ಹಾಗೂ ತಾತ್ವಿಕದ ಮಾರ್ಗವು ಕಡಿಮೆಯಾಗಿ ಕಲಿಯುಗದಲ್ಲಿ ಮಾನವ ಸಮಾಜದಲ್ಲಿ ಕಲುಷಿತ ವಾತಾವರಣ ಉಂಟಾದ ಸಮಯದಲ್ಲಿ ಶಿವನ ಅಪ್ಪಣೆಯು

ಮೇರೆಗೆ ಓರ್ವ ಗಣವರನೇ ಭೂಲೋಕದಲ್ಲಿ ವಟುಗಲ್ಲಯ್ಯನೆಂಬ ಅಭಿನಾಮದಿಂದ ಅವತರಿಸಿ, ಚನ್ನಬಸವಸ್ವಾಮಿಯಾಗಿ, ಎಲ್ಲಾ ಜನರಿಂದ ತಾತನೆಂದು ಕರೆಸಿಕೊಂಡು ಅನಂತಾನಂತ ಭಕ್ತಕೋಟಿಯನ್ನು ಉದ್ಧಾರಮಾಡಿದ ನಮ್ಮ ವಳಬಳ್ಳಾರಿ ತಾತ ! ಕಾವ್ಯದ ಪ್ರಾರಂಭದಲ್ಲಿ ಕವಿಯು ಪಂಚಪೀಠಾಧಿಪತಿಗಳಲ್ಲಿ ಒಬ್ಬರಾದ ಶ್ರೀ ರೇಣುಕಾ ಚಾರ್ಯರನ್ನು, ವೀರಗೋತ್ರನಾದ ವೀರಭದ್ರದೇವರನ್ನು ಗಣಾಧಿಪನನ್ನು ನುತಿಸಿ ಶಿವನ ಕರುಣೆಯಿಂದ ಕಾವ್ಯ ರಚಿಸುವೆನೆಂದು ಹೇಳಿದ್ದಾನೆ. ಜೊತೆಗೆ ಜಗದಂಬೆಯನ್ನು ತನ್ನ ಪಡೆದಪ್ಪನಾದ ಶರಣ ದೊಡ್ಡಯ್ಯ ಶಾಸ್ತ್ರಿಗಳನ್ನು, ವೈದಿಕ ವಾಙ್ಮಯ ಕೋವಿದ ಹಂಪೆಯಾಳ್ದನ ಕೃಪೆಯ ಕಂದನೆಂದು ಕರೆದುಕೊಂಡು ಮಹೋನ್ನತ ಎತ್ತರದಲ್ಲಿರುವ ಶ್ರೀ ಚನ್ನಬಸವ ಮಹಾಸ್ವಾಮಿಗಳವರ ಚರಿತ್ರೆ ಹೇಗೆ ಬರೆಯುವಿಯೆಂದು ಪ್ರಶ್ನೆ ಹಾಕಿಕೊಂಡು ತನ್ನ ಕಿಂಕರಭಾವ ವ್ಯಕ್ತಪಡಿಸಿ, ಆತನ ಕೃಪೆಯಲ್ಲಿಯೇ ಕಾವ್ಯವನ್ನು ರಚಿಸಿ, ಪ್ರೇಮದಿಂದ ಭಕ್ತಿಭಾವದಲ್ಲಿ ವಿಹರಿಸುವೆನೆಂದು ಹೇಳಿಕೊಂಡಿದ್ದಾನೆ.

ರಾಜ ಮಹಾರಾಜರ ಚರಿತ್ರೆ ಇದಾಗಿರದೆ, ತಾನು ಬದುಕಲಿಕ್ಕಾಗಿ ಸಾಹಿತ್ಯ ಬರೆಯದೆ ಜನ ಬದುಕಲಿಕ್ಕಾಗಿ ಸಾಹಿತ್ಯದ ಅರ್ಥಪದಗಳು ಸಾರ್ಥಕತೆಯನ್ನು ಸಾಂಬಕೃಪೆಯಲ್ಲಿ ಕಂಡು ಇತರರಿಗೂ ಕಾಣಿಸುವಂತೆ ಮಾಡಿ ಮಹೋಪಮೆಯ ಭವ್ಯ ಪ್ರತಿಕೃತಿಯನ್ನಾಗಿಮಾಡಿ, ಕಂಗೊಳಿಸುವುದಕ್ಕೆ ಕಾರಣೀಭೂತನಾಗಿದ್ದಾನೆ.

ರಶಿಕಚಕ್ರಿ ಹರಿಹರ ಕವಿಯನ್ನು, ಮಹಾಕವಿ ರಾಘವಾಂಕನನ್ನು ಹಾಗೂ ವರಕವಿ ಷಡಕ್ಷರಿಯನ್ನು ಅನನ್ಯ ಭಕ್ತಿಯಿಂದ ಭಜಿಸಿ, ಶಿವಯೋಗದ ಪರಮ ರಹಸ್ಯ ಗಳನ್ನು ತಿಳಿಸುವ ಕೃತಿಗಳೇ ಧನ್ಯ ಜಗದೊಳಗೆಯೆಂದು ಕವಿ ಶ್ರೀ ನಾ. ಮ. ಸಿದ್ಧರಾಮಯ್ಯ ತನ್ನ ಕಾವ್ಯದಲ್ಲಿನ ಮಂಗಳಾಚರಣೆಯಿಂದ ಮಂಗಲ ಮಾಡಿದ್ದಾನೆ.

## ಎರಡನೆಯ ಸಂಧಿ

### " ಕಾರಣಿಕ ಶಿಶುವಿನ ಉದಯ "

ಅಷ್ಟಾವರಣವೇ ಅಂಗವಾಗಿ, ಪಂಚಾಚಾರಗಳು ಪ್ರಾಣವಾಗಿ, ಷಟ್‌ಸ್ಥಲವು ಆತ್ಮವಾಗಿ, ಮಲತ್ರಯಗಳಳಿಸಿ, ಲಿಂಗತ್ರಯಗಳುಳಿಸಿ ವೀರಶೈವರ ಭಕ್ತಿಯೋಗದಿಂದ ಶೂನ್ಯ ಸಂಪಾದನೆಯಾಗಿ, ನಿರ್ವಿಕಲ್ಪ ಸಮಾಧಿತ್ವವನ್ನು ಪಡೆದು, ನಿತ್ಯಾನಂದದ ನಿಲ ವನ್ನು ಭೂಲೋಕದಲ್ಲಿ ತೋರಿಸಲು ಸಾಂಬನು ಕೃಪೆಮಾಡಿ, ಓರ್ವ ಗಣವರನನ್ನು ಭೂಲೋಕಕ್ಕೆ ಕಳುಹಿಸುತ್ತಾನೆ.

ಭೂಲೋಕದಲ್ಲಿ ಉದಯಿಸುವ ಗಣವರ ಪರಮ ತಪೋಧನರಿಗೆ, ಅನರ್ಘ್ಯ ಕಾಣಿಕೆಗಳನ್ನು ಕೊಡಬೇಕೆಂದು ಅತ್ಯಂತ ಉತ್ಸಾಹದಿಂದ ದಡಕ್ಕೆ ಬಂದು ಅಯ್ಯೋ! ಈ ಅವತಾರ ಪುರುಷ ವೈರಾಗ್ಯದ ನಿಧಿಯಾಗಿರುವುದರಿಂದ ದೇವದಾನವ ಮಾನವರಿಗಿರುವ ಆಸೆಗಳು ಇಲ್ಲದಿರುವುದರಿಂದ ಮುತ್ತು ರತ್ನಗಳನ್ನು ಕೊಡುವ ಆಸೆಯನ್ನು ಕೈಬಿಟ್ಟು ಶ್ರೀ ಗುರುವಿನ ಗಾಂಭೀರ್ಯ ಗಮನಿಸಿದ ಸಮುದ್ರರಾಜನು ತನ್ನ ಮುತ್ತು ರತ್ನಗಳ ಭಾಂಡಾಗಾರಕ್ಕೆ ಮುದ್ರೆಯನ್ನೊತ್ತಿ ಭಕ್ತಿಕಿಂಕರತೆಯನ್ನು ತೋರಿದ್ದಾನೆಂದು ಅಷ್ಟಾದಶಗಳ ವರ್ಣನೆಯಲ್ಲಿ ಒಂದಾದ ಸಮುದ್ರ ವರ್ಣನೆಯನ್ನು ಕವಿಯು ಸಮಯೋಚಿತವಾಗಿ ಮಾಡಿದ್ದಾನೆ.

ರಾಯಚೂರು ಜಿಲ್ಲೆಯ ಮಾನ್ವಿಯ ತಾಲ್ಲೂಕಿನಲ್ಲಿರುವ ಪಾಮನ್ಕಲ್ಲೂರಿನಲ್ಲಿ ಈ ಚನ್ನಬಸವಲೀಲಾ ಕಾವ್ಯದ ಕಥಾನಾಯಕನಾದ ಶ್ರೀ ಚನ್ನಬಸವೇಶ್ವರರು (ಓರ್ವ ಗಣವರರು) ವಟುಗಲ್ಲು ಬಸವನ ರೂಪದಲ್ಲಿ ಮೈದಳೆದು ನಂದಿರೂಪಿಯಾಗಿ ನೆಲೆನಿಲ್ಲುವನು.

ಋತುಗಳ ರಾಜನಾದ ವಸಂತದಾಗಮನವಾಗಲು, ಪಾಮನ್ಕಲ್ಲೂರಿನಲ್ಲಿರುವ ಸುವಿಮಲದ ಶರಣ ದಂಪತಿಗಳಾದ ಬಸವಯ್ಯ ಮತ್ತು ವೀರಮ್ಮಗೆ ಮಕ್ಕಳಿಲ್ಲದಿರಲು, ಅವರು ಮಕ್ಕಳ ಭಾಗ್ಯಕ್ಕಾಗಿಯೇ ವಟುಗಲ್ಲು ಬಸವನ ಪೂಜೆಯನ್ನು ಅವಿಕಲಾನಂದದಿಂದ ಮಾಡಲು, ವಟುಗಲ್ಲು ಬಸವನ ಕೃಪೆಯಿಂದ ಬಸವಯ್ಯನ ಧರ್ಮಪತ್ನಿಯಾದ ವೀರಮ್ಮನು ಗರ್ಭವತಿಯಾಗಿ ಪುಣ್ಯಪುರುಷನ ಗರ್ಭವನ್ನು ಹೊತ್ತು, ಶೀಮಂತ ಕಾರ್ಯ ಮಾಡಿಸಿಕೊಂಡು, ಗರ್ಭಿಣಿಗೆ ಇರುವ ಸಾಮಾನ್ಯ ಗುಣಗಳು ವೀರಮ್ಮನಿಗೆ ಇರದೆ ಅಲೌಕಿಕವಾದ ಬಯಕೆಗಳಿದ್ದು ಶಿವಯೋಗಿಗಳ ಲಿಂಗಗುಣಗಳನ್ನು ಪಡೆದುಕೊಂಡು, ದಾಂಪತ್ಯದ ಸಾಮರಸ್ಯ ಸುಖವನ್ನು ಧರ್ಮರೂಪವಾಗಿ ಕಂಡು ಸತಿಪತಿಗಳೊಂದಾದ ಭಕ್ತಿ ಶಿವನಿಗೆ ಮೆಚ್ಚುಗೆಯಾಗಿದ್ದವು. ಲೋಕರೂಢಿಯಂತೆ ಗರ್ಭಿಣೀ ಸ್ತ್ರೀಯರಿಗೆ ಪುಣ್ಯಕ್ಷೇತ್ರ ದರ್ಶನಮಾಡಿಸುವ ಬಯಕೆಯಾಗಿ ಬಸವಯ್ಯನು ತನ್ನ ಸಹಧರ್ಮಿಣಿಯಾದ ವೀರಮ್ಮನನ್ನು ದಕ್ಷಿಣ ಕಾಶಿಯಾಗಿದ್ದ ಹಂಪಾಕ್ಷೇತ್ರಕ್ಕೆ ಕರೆದುಕೊಂಡು ಹೋಗಿ ವಿರೂಪಾಕ್ಷ ಪಂಪಾಂಬಿಕೆಯರ ದರ್ಶನಮಾಡಿಸಿ, ಚಲುವ ಕನ್ನಡ ನಾಡಿನ ಸಿರಿಸೊಬಗನ್ನು ತೋರಿಸಿ, ಹಿಂತಿರುಗಿ ತಮ್ಮ ಗ್ರಾಮಕ್ಕೆ ಬಂದು ತನ್ನ ಸತಿಯಳ ಎಂಟನೇ ತಿಂಗಳಲ್ಲಿ ಗರ್ಭಕ್ಕೆ ಲಿಂಗಧಾರಣೆಯನ್ನು ಕ್ರಮದಲ್ಲಿ ಮಾಡಿಸಿ ಕೆಲದಿನಗಳು ಕಳೆದು–ದಿನಗಳು ತುಂಬಿದಾಗ ವಿಶ್ವಾವಸು ವರ್ಷದ (೧೯೦೫) ವೈಶಾಖ ಮಾಸದ ಶುದ್ಧದ ಗುರುವಾರದ ದಿನದಲ್ಲಿ ವೀರಮ್ಮನ ಸುಕೃತ ಗರ್ಭದಿಂದ ಅವತಾರ ಶಿಶುವು ಭೂಲೋಕಕ್ಕೆ ಬಂದಿತು. ಮುಂದೆ ಪದ್ಧತಿಯಂತೆ ಪಾಮನ್ಕಲ್ಲೂರು ವಿರತ ಮಠದ ಮಹಾಸ್ವಾಮಿಗಳವರಾದ ಶ್ರೀ ನಿರಂಜನ ಪ್ರಣವಸ್ವರೂಪಿ ಮಹಲಿಂಗ ಯತಿಗಳ ದಿವ್ಯ

ಸಮ್ಮುಖದಲ್ಲಿ ಪುತ್ರೋತ್ಸವನ್ನು ಮಾಡಿ ವಟುಗಲ್ಲಯ್ಯನಿಗೆ ನಡೆದುಕೊಂಡು, ಪುತ್ರ ಸಂತಾನ ಪಡೆದುಕೊಂಡ ಕಾರಣಕ್ಕಾಗಿ ಆ ಶಿಶುವಿಗೆ ವಟುಗಲ್ಲಯ್ಯನೆಂಬ ನಾಮಕರಣ ಮಾಡಿ ವರಗಣಾರಾಧನೆ ಮಾಡಿಸಿ, ಭಕ್ತಜನ ಸಹಿತ ಸಕಲರ ತೃಪ್ತಿಗೆ ಪಾತ್ರರಾಗಿ ಶರಣ ದಂಪತಿಗಳಾದ ಬಸವಯ್ಯ ವೀರಮ್ಮ ಅವರು ಜಗದೊಳು ಧನ್ಯತೆಯನ್ನು ಪಡೆದರು.

## ಮೂರನೆಯ ಸಂಧಿ

### ವಟುಗಲ್ಲಯ್ಯನ ಬಾಲ್ಯಲೀಲೆಗಳು

ದಿನಗಳುರುಳಿಸಿ, ಮೈಯನುರುಳಿಸಿ ಬಿನದಿ ಮುಂಗೈಗಳನು ಊರುತ, ಅನುಪಮದ ಶಿವಕಳೆಯ ಮುಖವನ್ನು ಎತ್ತಿನೋಡಿ, ಅಂಬೆಗಾಲಲ್ಲಿ ವಟುಗಲ್ಲು ಬಸವನಾಗಿ ಧರ್ಮರೂಪದಲ್ಲಿ ನಡೆದಾಡುತ್ತಾ, ಮೊದಲ ನುಡಿ ಹಾಗೂ ನಡೆ (ಹೆಜ್ಜೆ)ಗಳಿಂದ ಮತ್ತು ಮೊದಲ ಹಲ್ಲುಗಳಮಾಡಿ ಪ್ರಸಾದ ಭೋಗದಲ್ಲಿ, ಮಾತೃದೇವರಾದ ವೀರಮ್ಮನ ಆರೈಕೆಯಲ್ಲಿ ತನ್ನ ಬಾಲಲೀಲೆಗಳಲ್ಲಿ ತಲ್ಲೀನವಾಗಿದ್ದನು.

ಐದನೇ ವರ್ಷದಲ್ಲಿ ವಿಜಯದಶಮಿಯ ದಿನ ಉದಯದಲ್ಲಿ ಅಭ್ಯಂಗಸ್ನಾನ ಮಾಡಿಸಿ ಪೂಜೇತ್ಯಾದಿ ವಿಧ್ಯುಕ್ತ ಕಾರ್ಯಗಳನ್ನು ಮಾಡಿ ವಟುಗಲ್ಲಯ್ಯನನ್ನು ಊರ ಶಾಲೆಗೆ ಹಾಕಿದರು. ಉಸುಗಿನಲ್ಲಿ ಓಂಕಾರ ಬರೆದು ತಿದ್ದಿಸುವ ಗುರುಗಳನ್ನು ಅದರರ್ಥವನ್ನು ಹೇಳಿರೆಂದು ಕೇಳಿದಾಗ ಗುರುಗಳು ಲೀಲಾಮೂರ್ತಿಗಳಾದ ಪಾರ್ವತಿ ಪರಮೇಶ್ವರರು ಅದರಲ್ಲಿ ಅಡಕವಾಗಿರುವರೆಂದು ತಿಳಿಸಿದಾಗ ಬಾಲಕ ವಟುಗಲ್ಲಯ್ಯನು ಆನಂದದಿಂದ ಗುರುಗಳನ್ನು ಆಲಂಗಿಸಿ ಗುರುಗಳ ಪಾದಕ್ಕೆರಗಿ ನಿಂತಾಗ, ಇಂಥಹ ಶಿವತೇಜವಿರುವ ಮಗನನ್ನು ಪಡೆದ ಬಸವಯ್ಯಸ್ವಾಮಿಯೇ ಧನ್ಯರೆಂದು ಸಂತೋಷ ಪಟ್ಟರು. ಮುಂದೆ ವಟುಗಲ್ಲಯ್ಯನು ಅಪ್ರಾಪ್ತ ವಯಸ್ಸಿನಲ್ಲಿಯೇ ಅಮರಕೋಶ, ಶತಕಸಾರ, ರಾಜಶೇಖರ ವಿಲಾಸ ಹಾಗೂ ಶಬರಶಂಕರವಿಲಾಸ ಎಂಬ ಮಹೋನ್ನತ ಕೃತಿಗಳನ್ನು ಪಂಡಿತರ ಸಹಾಯದಿಂದ ಪರಿಣತರಾಗಿ ಶೋಭಿಸಿದರೂ, ವಿದ್ಯಾವಂತರಿಗೆ ವಿನಯವೇ ಭೂಷಣವೆಂದು ಅರಿತು, ನಿಗರ್ವಿಯಾಗಿ, ಪಂಡಿತಾಸಮದರ್ಶಿತ್ವದಲ್ಲಿದ್ದ ವಟುಗಲ್ಲಯ್ಯನ ರೀತಿನೀತಿ, ಶಿಸ್ತು, ಸಂಯಮಗಳನ್ನು ಕಂಡ ತಂದೆ ಬಸವಯ್ಯನವರು ಹಾಗು ತಾಯಿ ವೀರಮ್ಮನೂ ಭೂಮಾನುಭೂತಿಯ ಆನಂದದಲ್ಲಿದ್ದರು.

ಒಂದು ದಿನ ವಟುಗಲ್ಲಯ್ಯನ ಹುಟ್ಟೂರಾದ ಪಾಮನ್ಕೆಲ್ಲೂರಿನಲ್ಲಿ ಊರಮುಂದಿನ ಬಣವೆಗಳ ಸನಿಹದಲ್ಲಿ ಮುಂಗಲಿ ನಾಗರಹಾವು ಕಾದಾಡುವುದನ್ನು ನೋಡಲು ಜನರು ಗುಂಪಾಗಿ ಸೇರಿರಲು ಜನಸಂದಣಿಯಲ್ಲಿ ತೂರಿಬಂದು ಮುಂದೆನಿಂತ ವಟುಗಲ್ಲಯ್ಯ ಬಾಲಕನನ್ನು ನೋಡಿದ ಹಾವು ಮತ್ತು ಮುಂಗಲಿಗಳು ಕಾದಾಡುವುದನ್ನು ಬಿಟ್ಟು ಬಾಲಕನ ಕಾಲ್ಮುಂದೆ ಬಂದುನಿಂತು ಸ್ನೇಹಭಾವದಿಂದ ವಂದಿಸುವ ಪರಿಯಲ್ಲಿರುವಾಗ ಅಲ್ಲಿ ನೆರೆದ ಜನರು ವಿಸ್ಮಯರಾಗಿ ಬಾಲಕ ವಟುಗಲ್ಲಯ್ಯನ ಧೀರ ಪ್ರತಿಭೆ, ಶಾಪಾನುಗ್ರಹಶಕ್ತಿಯ ಪ್ರತಿಭೆಯನ್ನು ಕಂಡು, ಮುಕ್ತಮನಸ್ಸಿನಲ್ಲಿ ಕೊಂಡಾಡಿದರು. ಅಪ್ರಾಪ್ತ ವಯಸ್ಸಿನಲ್ಲಿಯೇ ಸರಸ್ವತಿಯು ಹಾಗೂ ಮುಕ್ತಿ ಕನ್ಯೆಯರು ವಟುಗಲ್ಲಯ್ಯನನ್ನು ಕೈಹಿಡಿದಿದ್ದರು ! ಇದೆಲ್ಲವನ್ನು ಕೇಳಿದ ತಂದೆ ತಾಯಿಗಳು ಭಯ ಭಕ್ತಿಯಿಂದ ವಟುಗಲ್ಲಯ್ಯನನ್ನು ನೋಡಿಕೊಂಡರು, ಈ ವಿಷಯವನ್ನು ತಂದೆಯಾದ ಬಸವಯ್ಯನು ತಮ್ಮ ಊರಿನಲ್ಲಿರುವ ವಿರಕ್ತ ಮಠಕ್ಕೆ ಒಡೆಯರಾದ ಬಸವಲಿಂಗಸ್ವಾಮಿಗಳ ಹತ್ತಿರ ಹೋಗಿ ಹೇಳಿ ಅವರ ಅಪೇಕ್ಷೆಯಂತೆ ತಮ್ಮ ಪುತ್ರ ವಟುಗಲ್ಲಯ್ಯನನ್ನು ಸ್ವಾಮಿಗಳ ಸೇವೆಮಾಡಲು ಹೇಳಿದಾಗ ಅದರಂತೆ ಒಪ್ಪಿ ಮಗನು ದಿನಂ ಪ್ರತಿ ಮಠಕ್ಕೆ ಹೋಗಿ ಸ್ವಾಮಿಗಳ ಸೇವೆಮಾಡಿ ತಮ್ಮ ಮನೆಗೆ ಹಿಂತಿರುಗಿ ಬಂದು ಹರನ ಕರುಣೋದಯದಲ್ಲಿ ವಟುಗಲ್ಲಯ್ಯನು ದಿವ್ಯಲೀಲೆಯಲ್ಲಿ ಬೆಳೆದನು.

## ನಾಲ್ಕನೆಯ ಸಂಧಿ

### ವಟುಗಲ್ಲಯ್ಯನನ್ನು ಕನಕಗಿರಿ ಶ್ರೀ ಚನ್ನಮಲ್ಲಸ್ವಾಮಿಗಳ ಸನ್ನಿಧಿಗೆ ಕೊಟ್ಟುದುದು.

ಪಾಮನ ಕೆಲ್ಲೂರು ಗ್ರಾಮದ ಭಕ್ತರ ಬಿನ್ನಹಕ್ಕೆ ಮಣಿದು ಕನಕಗಿರಿ ವಿರಕ್ತ ಮಠಾಧೀಶ್ವರರಾದ ಶ್ರೀ ಚನ್ನಮಲ್ಲ ಸ್ವಾಮಿಗಳು ಬಂದಿದ್ದರು. ಆಲೂರಿನ ವಿರಕ್ತ ಮಠದಲ್ಲಿ ಸೇವೆ ಮಾಡುತ್ತಿದ್ದ ವಟುಗಲ್ಲಯ್ಯ ಹುಡುಗನನ್ನು ನೋಡಿ ಆ ಯಾವ ಹುಡುಗನ ಲಕ್ಷಣಗಳು ಹಾಗು ತೇಜಸ್ಸು ಕಂಡು ತಮ್ಮ ಮಠಕ್ಕೆ ಆ ಯಾವ ಬಾಲಕ ನನ್ನು ಅರ್ಪಿಸಲು ಹೇಳಿದರು. ತಾಯಿಯಾದ ವೀರಮ್ಮನು ಈ ವಿಷಯ ತಿಳಿದು ಬಹಳ ದುಃಖಪಟ್ಟು ಮಗು ಸನ್ಯಾಸಿಯಾಗುವುದನ್ನು ಯಾರು ಬಯಸುವರು ? ಎಂದು ತರ್ಕಿಸಿ ಕೊನೆಗೆ ಆ ಹುಡುಗನಿಂದ ಲೋಕೋದ್ಧಾರದ ಕಾರ್ಯಗಳಾಗಬೇಕಾಗಿದೆ. ವೃಥಾ ತಡೆ ಹಿಡಿಯ ಬೇಡಿರಿ ಎಂದು ಎಲ್ಲರೂ ಆಗ್ರಹ ಪೂರ್ವಕವಾಗಿ ಹೇಳಲು ಮೇಲಾಗಿ ಪತಿ

ಬಸವಯ್ಯನು ಸಾಂತ್ವನ ಶಕ್ತಿ ನೀಡಿ ಮನ ವೊಲಿಸಿ ಹೇಳಲು ಅದಕ್ಕೆ ಒಪ್ಪಿದಳು. ತನ್ನ ಕೊನೆಯ ಕಣ್ಣೀರನ್ನು ಬತ್ತಿಸಿಕೊಂಡು ಮಗನನ್ನು ಅರ್ಪಿಸಿ ಬಿಟ್ಟರು. ಅರ್ಪಿಸಿದ ತಂದೆ ತಾಯ್ಗಳನ್ನು ಕನಕಗಿರಿ ಶ್ರೀಗಳು ಮನಸಾರೆ ಹರಸಿದರು. ಎತ್ತಿನ ಗಾಡಿಯಲ್ಲಿ ವಟುಗಲ್ಲಯ್ಯನನ್ನು ಕೂಡ್ರಿಸಿ ಕೊಂಡು ಕನಕಗಿರಿ ಮಠಕ್ಕೆ ಶ್ರೀ ಚನ್ನಮಲ್ಲ ಸ್ವಾಮಿಗಳು ಕರೆದುಕೊಂಡು ಬಂದರು.

## ಐದನೆಯ ಸಂಧಿ

### ಗುರು ಸನ್ನಿಧಿಯಲ್ಲಿ ತತ್ವಾನು ಸಂಧಾನ

ಕನಕಗಿರಿಯ ವಿರಕ್ತಮಠದಲ್ಲಿ ತಮ್ಮ ಗುರುಗಳಾದ ಶ್ರೀ ಚನ್ನಮಲ್ಲಸ್ವಾಮಿಗಳ ಸೇವೆಯನ್ನು ಭಕ್ತಿಶ್ರದ್ಧೆಗಳಿಂದ ಮಾಡುತ್ತ ನಿಜಗುಣರ ಶಾಸ್ತ್ರ, ಮುಪ್ಪಿನಷಡಕ್ಷರಿಯವರ ಸ್ವರ ವಚನಗಳನ್ನು ಓದುತ್ತಾ ವೇದಾಂತದ ಪ್ರಕ್ರಿಯೆಗಳನ್ನು ಚನ್ನಾಗಿ ತಿಳಿಯುತ್ತ, ಸಂಶಯಬಂದಲ್ಲಿ ಶ್ರೀಗುರುಗಳ ಸನ್ನಿಧಾನದಲ್ಲಿ ವಿಷಯ ನಿವೇದಿಸಿ ಸಂಶಯ ಪರಿಹಾರ ಮಾಡಿಕೊಂಡು ಶರಣರ ವಚನ ವಾಙ್ಮಯದ ಅನುಭಾವದ ಸವಿಯನ್ನು ಸವಿದು ಅಪಾರ ಅನುಭಾವವುಳ್ಳವರಾಗಿದ್ದರೂ, ಹೊರಗೆ- ತೋರ್ಪಡಿಸಿಕೊಳ್ಳದೆ ನಿರಾಡಂಬರ ವ್ಯಕ್ತಿಗಳಾಗಿದ್ದರು. ವರ್ಣಾಧ್ವ ; ಮಂತ್ರಾಧ್ವ ; ಪದಾಧ್ವ ಇವು ಶಬ್ದಾತ್ಮಕವಾದವು. ಕಲಾಧ್ವ ; ತತ್ವಾಧ್ವ ; ಭುವನಾಧ್ವ ಇವು ಅರ್ಥಾತ್ಮಕವಾದವು. ಕ್ರಮದಲ್ಲಿ ಷಟ್ ಸ್ಥಲಗಳಿಗೆ ಸಮನ್ವಯಗೊಂಡು ಸಾಧಕರಿಗೆ ಸಹಾಯಕವಾಗಿವೆ.

(ಪದ್ಯ ೯) ಷಡಧ್ವಗಳು

## ಆರನೆಯ ಸಂಧಿ

### ವಟುಗಲ್ಲಯ್ಯ–ಚನ್ನಬಸವದೇಶಿಕರಾಗಿ ಪವಾಡಪುರುಷರಾದದ್ದು
### (ನಂದಿಯುಂಗುರ ಪ್ರಕರಣ)

ಯಥಾಪ್ರಕಾರ ಶ್ರೀಗುರುಗಳ ಸೇವೆ ಮಾಡುತ್ತಿರುವಾಗ ಒಮ್ಮೆ ಒಂದು ಘಟನೆ ನಡೆಯುವುದು ತಮ್ಮ ಗುರುಗಳು ಪೂಜೆಯ ನಂತರ ದಿನವೂ ನಂದಿಯುಂಗುರವನ್ನು

ಪೂಜಿಸುತ್ತಿದ್ದರು. ಆಕಸ್ಮಾತ್ ಪೂಜೆಯಾದ ಮೇಲೆ ಬೆರಳಿಗೆ ನಂಡಿಯುಂಗುರವನ್ನು ಧರಿಸದೆ ಮರೆತುಬಿಡುವರು. ಶಿವಪೂಜಾ ಮರಿ ವಟುಗಲ್ಲಯ್ಯನು ಗದ್ದಿಗೆ ಕಂಬಳಿ ಜಾಡಿಸುವಾಗ್ಗೆ ಆ ಉಂಗುರ ಕೆಳಗಿನ ಯೋಗಸಮಾಧಿಯಲ್ಲಿ ಜಾರಿಹೋಗಿ ಬೀಳುತ್ತದೆ. ಪುನಃ ರಾತ್ರಿ ಪೂಜಾವೇಳೆಯಲ್ಲಿ ಗುರುಗಳಿಗೆ ಉಂಗುರದ ನೆನಪಾಗಿ ವಟುಗಲ್ಲಯ್ಯನನ್ನು ವಿಚಾರಿಸುವರು. ಏನೂ ತಿಳಿಯದ ಮುಗ್ಧ ವಟುಗಲ್ಲಯ್ಯ ತನಗೆ ಗೊತ್ತಿಲ್ಲವೆಂಡೂ ಸಹಜದಲ್ಲಿ ಸತ್ಯವನ್ನು ನುಡಿದಾಗ ಗುರುಗಳು ನಿನ್ನ ವಿನಹ ಉಂಗುರದ ವಿಷಯ ಯಾರಿಗೂ ಗೊತ್ತಿಲ್ಲ. ಕಾರಣ ನೀನೆ ಹುಡುಕೆಂದು ಹೇಳಿದಾಗ್ಗೆ ಮನಸ್ಸು ನೋಯಿಸಿಕೊಂಡು ವಟುಗಲ್ಲಯ್ಯ ಅದು ತನ್ನ ಸತ್ಯಪರೀಕ್ಷೆಯೆಂದು ಛಲದಿಂದ ಪದ್ಮಾಸನ ಹಾಕಿಕೊಂಡು ಯೋಗ ಮುಖಿಯಾಗಿ ಚಿಂತಿಸತೊಡಗಿದಾಗ, ಚಲುವ ನಾಗರಹಾವು ಆ ಉಂಗುರವನ್ನು ಬಾಯಿಯಲ್ಲಿ ಹಿಡಿದುಕೊಂಡು ಕೆಳಗಿರುವ ಯೋಗ ಸಮಾಧಿಯಿಂದ ಮೇಲೆ ಬಂದು ವಟುಗಲ್ಲಯ್ಯನ ಮುಂದೆ ಬಂದು ಹೆಡೆ ಎತ್ತಿರಲು ಇದನ್ನು ಅರಿತ ವಟುಗಲ್ಲಯ್ಯನು ಬಹಳ ಸಂತೋಷದಿಂದ ಶಿವನನ್ನು ಅನನ್ಯ ಭಕ್ತಿಯಿಂದ ಹೊಗಳಿ ಆ ಉಂಗುರವನ್ನು ಗುರುವಿಗೆ ಕೊಟ್ಟನು. ಹಾವಿಗೆ ಹಾಲು ಕುಡಿಸಬೇಕೆಂದು ಮಠದ ಕೊನೆಯ ಕೋಣೆಗೆ ಹೋಗಲು ಮಠದಲ್ಲಿ ಕೆಲಸ ಮಾಡುವ ಓರ್ವ ಮಹಿಳೆ ವಟುಗಲ್ಲಯ್ಯನಿಗೆ ಹಾಲು ಕೊಟ್ಟು ಆ ವಟುಗಲ್ಲಯ್ಯನ ಕೈ ಹಿಡಿಯಲು ಆ ಯಾವ ಕಾಮುಕಿ ಹೆಣ್ಣಿಗೆ ಆ ವಟುಗಲ್ಲಯ್ಯನ ಕೈ ಬೆಂಕಿಯಂತೆ ಸುಡಲು, ಸುಟ್ಟ ಕೈಯನ್ನು ಇನ್ನೊಂದು ಕೈಯಲ್ಲಿ ಹಿಡಿಯುತ್ತ ಓಡಿಬಂದು ಗುರುಗಳ ಪಾದಕ್ಕೆ ಅಡ್ಡ ಬೀಳಲು ಆ ಗುರುಗಳು ಭಸ್ಮವನ್ನು ಹಚ್ಚಲು ಹೇಳಿ ಇನ್ನು ಮುಂದೆ ಮಠದಲ್ಲಿರಕೂಡದೆಂದು ಆಕೆಗೆ ಯೋಗ್ಯ ಸಂಭಾವನೆ ಕೊಟ್ಟು ಅಲ್ಲಿಂದ ಕಳುಹಿಸುವರು. ಇತ್ತ ನಾಗರಹಾವು ಹಾಲು ಕುಡಿದು ತನ್ನ ಪಾಡಿಗೆ ತಾನು ಹೊರಟುಹೋಗುತ್ತದೆ.

ಒಂಡೆಡೆ ಹೊನ್ನಿನಾಸೆಯಿಲ್ಲ (ಉಂಗುರದ ಘಟನೆ) ಇನ್ನೊಂಡೆಡೆ ಹೆಣ್ಣಿನಾಸೆಯಿಲ್ಲ. ಈ ಎರಡು ಘಟನೆಗಳಿಂದ ಶ್ರೀ ಗುರುಗಳು ವಟುಗಲ್ಲಯ್ಯನ ನಡತೆ ಬಹು ಚೆಲುವಾದ್ದರಿಂದ, ಚನ್ನಾದ ಲಿಂಗಕೊಪ್ಪುವ ನಡೆಯಾದ್ದರಿಂದ ವಟಗಲ್ಲಯ್ಯನಿಗೆ ಚನ್ನಬಸವ ದೇಶಿಕರೆಂದು ಕರೆದು ಹರಸಿದರು.

ವೇದಗಳು ಶಾಸಿಸುತ ಶಾಸ್ತ್ರವಾಗಿ ಆ ಶಾಸ್ತ್ರ ವಾದರಹಿತವಾಗಿರುವುದೇ ಪ್ರಭು ಸಮ್ಮಿತ, ಆದರದ ಪುರಾಣಗಳೇ ಸುಹೃತ್ ಸಮ್ಮಿತವೆಂದೂ ಆದಿಕಾಲದ ಕಾವ್ಯಗಳಿಂದ ಹಿಡಿದು ಆಧುನಿಕ ಕಾವ್ಯಗಳವರೆವಿಗೂ ಮೋದಗೊಳಿಸುವ ಕಾವ್ಯಗಳೇ ಕಾಂತಾ ಸಮ್ಮಿತವೆಂದು ಸಕಲಶಾಸ್ತ್ರ ಪುರಾಣ ಕಾವ್ಯಗಳ ಅಖಿಲ ಗ್ರಂಥಗಳನ್ನೂ ಓದಿ ಅಕಲಂಕ ಗುರುವಿಗೆ ಪಾತ್ರನಾಗಿ ವಟುಗಲ್ಲಯ್ಯನು ಕಾವ್ಯದ ಕಥಾನಾಯಕನಾಗಿ ಅಭ್ಯುದಯಗೊಂಡನು.

ಪಾದೋದಕ ಪ್ರಸಾದ ಇವುಗಳ ಬಗ್ಗೆ ಗುರುಗಳಿಂದ ಅವರ ಕ್ರಿಯಾಚರಣೆ ಯಿಂದ ಪೂರ್ಣ ತಿಳಿದುಕೊಂಡನು. ದಶವಿಧ ಪಾದೋದಕದ ಪದ್ಧತಿ, ಗುರುಲಿಂಗ ಜಂಗಮದಿಂದ ಪ್ರಾಪ್ತವಾಗುವ ತ್ರಿವಿಧ ಪ್ರಸಾದಗಳು ಕ್ರಮವಾಗಿ ಶುದ್ಧ ಸಿದ್ಧ ಹಾಗೂ ಪ್ರಸಿದ್ಧ ಪ್ರಸಾದಗಳ ಬಗ್ಗೆ ತಿಳಿದುಕೊಂಡು ಅನುಭವ ಪಡೆದುಕೊಂಡನು. ಅಂಗಸ್ಥಳ 44 ಮತ್ತು ಲಿಂಗಸ್ಥಳ 57 ಸೇರಿ ನೂರೊಂದು ಸ್ಥಲಗಳ ವಿವರವು ಸಹಾ ತಿಳಿದುಕೊಂಡನು. ವೀರಶೈವನ ಶರೀರವೆ ಷಡಕ್ಷರಮಯವೆಂದು ತಿಳಿಯುತ್ತ ಗುರು ಭಕ್ತನ ಮುಖವೆ ಓಂಕಾರ, ಎರಡು ಭುಜಗಳೇ ನಮಃಕಾರಗಳು, ದೇಹಮಧ್ಯವೆ ಶಿಕಾರವು ಎರಡು ಪಾದಗಳೇ ವಾಯಕಾರವು. ಜಪದಲ್ಲಿ ಅಗರ್ಭ ಹಾಗೂ ಸಗರ್ಭ ಗಳೆಂಬ ಎರಡು ವಿಧ ಜಪಗಳ ವಿಷಯ ತಿಳಿದು ಕೊಂಡನು. ಹೀಗೆ ಗುರುಗಳ ಸೇವೆಯಲ್ಲಿ ವಟುಗಲ್ಲಯ್ಯ ಅರ್ಥಾತ್ ಚನ್ನ ಬಸವ ದೇಶಿಕರು ಇರುವಾಗ್ಗೆ ಕನಕಗಿರಿಯಲ್ಲಿ ಒಂದು ಘಟನೆ ನಡೆಯುತ್ತದೆ. ಕನಕಾಚಲನ ಗುಡಿಯಲ್ಲಿ ಹರಿಕಥಾ ಕೀರ್ತನೆ ನಡೆಯುತ್ತಿರು ತ್ತದೆ. ಭಕ್ತ ಪ್ರಹ್ಲಾದನ ಕಥೆಯನ್ನು ಹೇಳುತ್ತಿರುವಾಗ್ಗೆ ಹರಿಕಥೆಯನ್ನು ಹೇಳುವ ಗೋವಿಂದ ಭಟ್ಟರು ಹಿರಣ್ಯಕಶ್ಯಪನ ಸಂಹಾರ ಮಾಡಿದ ಉಗ್ರನಾರಸಿಂಹ ಎಂದು ಹೇಳಿ ಮುಂದೆ ಅವರ ಉಗ್ರರೂಪ ಹೇಗೆ? ಯಾರು? ಶಮನಗೊಳಿಸಿದರೆಂದು ಮುಂದಿನ ಕಥಾಭಾಗ ಹೇಳದೆಯಿದ್ದಾಗ, ಹರನೇ ಸರ್ವೋತ್ತಮನೆಂದು ಕೈಯೆತ್ತಿ ಸಾರಿದಾಗ ಆ ಗೋವಿಂದ ಭಟ್ಟನ ಕೈಯಿಳಿಸಲು ಬಾರದೆ ಭುಜಸ್ತಂಭನವಾಗುತ್ತದೆ. ಹರಿಕಥೆಯನ್ನು ಕೇಳಲಿಕ್ಕೆ ಬಂದ ಭಕ್ತರೆಲ್ಲರೂ ಗಾಬರಿಯಾಗಿ ಏನೂ ತಿಳಿಯದೆ ತಮ್ಮ ತಮ್ಮಲ್ಲೆ ಗುಸುಗುಸು ಮಾತನಾಡಲಿಕ್ಕೆ ಪ್ರಾರಂಭ ಮಾಡಲು ಅದರಲ್ಲಿ ಓರ್ವ ಹಿರಿಯ ಹಾಗೂ ಅನುಭವವುಳ್ಳ ವೃದ್ಧನೋರ್ವನು ವಿರಕ್ತ ಮಠದಲ್ಲಿರುವ ಶ್ರೀಗುರು ಚನ್ನಮಲ್ಲ ಸ್ವಾಮಿಗಳಿಗೆ ವಿಷಯ ತಿಳಿಸಲು ಆಗ ನಿದ್ರಿಸುತ್ತಿದ್ದ ಚನ್ನ ಬಸವದೇಶಿಕರನ್ನು ಎಬ್ಬಿಸಿ ಕನಕಾಚಲವ ಗುಡಿಗೆ ಹೋಗಿ ಅಲ್ಲಿ ನಡೆದ ಘಟನೆಯ ಬಗ್ಗೆ ಹೇಳಿ, ಶಾಂತಿ ಕರುಣಿಸಿ ಬಾಯೆಂದು ಆಜ್ಞಾಪಿಸಲು, ಗುರುಗಳ ಆಜ್ಞೆಗೆ ಮಣಿದು ಕನಕಾಚಲದ ಗುಡಿಗೆ ವೃದ್ಧನ ಜೊತೆಯಲ್ಲಿ ಬಂದು ಗೋವಿಂದ ಭಟ್ಟರನ್ನು ನೋಡಿ, ಏನೂ ಗಾಬರಿ ಯಾಗಬೇಡಿರಿ ಹಿರಣ್ಯಕಶ್ಯಪನನ್ನು ಕೊಂದು ನಂತರ ಉಗ್ರನಾರಸಿಂಹನ ಮುಂದಿಗೆ ಕಥೆ ಹೇಳಿರಿ. ಎಂದಪ್ಪಣೆ ಕೊಡಿಸಲು ಆಗ ಗೋವಿಂದಭಟ್ಟನು ಚನ್ನ ಬಸವದೇಶಿಕರಿಗೆ ವಂದಿಸಿ ಮುಂದಿನ ಕಥೆ ಪ್ರಾರಂಭಿಸಿ ಉಗ್ರನಾರಸಿಂಹನ ಉನ್ಮತ್ತತೆಯ ಪ್ರಕೋಪವನ್ನು ಶಿವನ ಅಪ್ಪಣೆಯಂತೆ ವೀರಭದ್ರನು ನರಸಿಂಹನ ಉಗ್ರಶಾಂತಿಗಾಗಿ, **ಶರಭ ಸಾಳ್ವಾವ ತಾರ** (ಶಿವಪುರಾಣದ:—ಆರನೇ ಆಶ್ವಾಸ) ತಾಳಿ ಶಾಂತಿಗೊಳಿಸಿದನೆಂಬ ಸಹಜ ಸುಂದರ ಕಥೆಯನ್ನು ಹೇಳಿದಾಗ ಗೋವಿಂದ ಭಟ್ಟರಿಗೆ ಎತ್ತಿದ ಕೈಯಿಳಿಸಲು ಬಂದು ಶಿವನೇ ಸರ್ವೋತ್ತಮನೆಂದು ಅನನ್ಯ ಭಕ್ತಿಯಿಂದ ಸ್ತುತಿಸಿ ಕೃತಕೃತ್ಯನಾದನು.

ಶರಭ ಸಾಳ್ವಾವತಾರ ಚಾತ್ರಿ ಪಠಿಸು ಸಾಧನವಾದನ್ನು. ಅದನ್ನು ಕೇಳಿದ ಅಂಜಿಕೆ, ಅಪಮೃತ್ಯು, ಅರಿಸಿಡೆ, ಪಾಪತಾಪಗಳೊಂದೂ ಇರದೆ, ರಾಗದ್ವೇಷವಿರದೆ ಪಾವಿತ್ರ್ಯತೆಯನ್ನು ಪಡೆಯುವರು ಎಂದು ಹೇಳಿ ಶ್ರೀ ಚನ್ನಬಸವದೇಶಿಕರು ಎಲ್ಲರಿಗೂ ವಿಷಯ ತಿಳಿಯುವಂತೆ ಮಂಗಲದಲ್ಲಿ ಹೇಳಿ ಹರಸಿದರು. ಗುರುಗಳು ಈ ವಿಷಯ ವನ್ನೆಲ್ಲಾ ತಿಳಿದು ಬಹಳ ಸಂತೋಷಪಟ್ಟರು.

## ಏಳನೆಯ ಸಂಧಿ

### ವಳಬಳ್ಳಾರಿ ಮಠದೊಡೆತನ ವಹಿಸಿದ್ದು.

ವಳಬಳ್ಳಾರಿ ಮಠದ ಜೀರ್ಣೋದ್ಧಾರ ಮಾಡುವ ಕಾರ್ಯವಾಗಬೇಕಿತ್ತು. ಅದಕ್ಕೆ ದೇಶಿಕರಾರೂ ಇರದೆ ಅವ್ಯವಸ್ಥೆಗೊಂಡಿತ್ತು. ವಳಬಳ್ಳಾರಿ ಭಕ್ತರ ಅಪೇಕ್ಷೆ ಯಂತೆ ಚನ್ನಬಸವದೇಶಿಕರ ಅಭಿಪ್ರಾಯ ತಿಳಿದು ಈತನ ಗುರುಗಳಾದ ಚನ್ನಮಲ್ಲ ಸ್ವಾಮಿಗಳು ಮರಿದೇವರಾದ ಚನ್ನಬಸವದೇಶಿಕರಿಗೆ ಕಾವಿಬಟ್ಟೆ ಹಾಕಿಸಿ ಅಧಿಕಾರ ಕರುಣಿಸಿ ವಳಬಳ್ಳಾರಿ ಭಕ್ತರ ಜೊತೆಯಲ್ಲಿ ಭಂಡಿಯಲ್ಲಿ ಕಳುಹಿಸಿಕೊಟ್ಟರು.

ವಳಬಳ್ಳಾರಿ ಮಠಕ್ಕೆ ಬಂದ ದೇಶಿಕರನ್ನು ಊರಿನ ಭಕ್ತರು ಕ್ರಮ ಪದ್ಧತಿಯಂತೆ ಮಂಗಳವಾದ್ಯಗಳೊಡನೆ ಭಜನಾಮಂಡಳಿಯೊಡನೆ ಇದಿರ್ಗೊಂಡು ಮಹಾ ಗಣಾರಾಧನೆ ಮಾಡಿಸಿದರು.

ನಂತರ ಅವ್ಯವಸ್ಥೆಗೊಂಡಿರುವ ಮಠವನ್ನು, ಬೀಳುಬಿದ್ದಿರುವ ಮಠದ ಭೂಮಿಗಳ ಬಗ್ಗೆ ಯೋಜನೆಯನ್ನು ಹಾಕುತ್ತಾ ಅವುಗಳೆಲ್ಲಕ್ಕೆ ಭಕ್ತರ ಸಹಾಯದಿಂದ ಒಂದು ಹಂತಕ್ಕೆ ಹಾಗೂ ಹದಕ್ಕೆ ತಂದು ಮುಂದಿನ ವರ್ಷ ವಿಶೇಷವಾಗಿ ಫಸಲು ಬೆಳೆದು ಮಠದ ದಾಸೋಹವನ್ನು ನಿರ್ವಿಘ್ನವಾಗಿ ಮುಂದುವರಿಸಿಕೊಂಡು ಹೋದರು. ಶುಕ್ಲ ನಾಮ ವರ್ಷದಲ್ಲಿ ವಳಬಳ್ಳಾರಿ ಮಠಕ್ಕೆ ದಯಮಾಡಿಸಿದ ಚನ್ನಬಸವದೇಶಿಕರು ತಮ್ಮ ಶಿಷ್ಯ ಅಮರಯ್ಯನವರ ಜೊತೆಯಲ್ಲಿ ಸರಳತನದ ಪಾದಯಾತ್ರೆಯಿಂದ ಕೂಡಲ ಸಂಗಮ ಕ್ಷೇತ್ರಕ್ಕೆ ಹೋಗಿ, ಆ ಕ್ಷೇತ್ರದ ದಿವ್ಯದರ್ಶನದ ನಂತರ ಬರುವಾಗ್ಗೆ ದಕ್ಷಿಣಕಾಶಿ ಯೆನಿಸಿದ ಹಂಪಾಕ್ಷೇತ್ರಕ್ಕೆ ತೆರಳಿ ವಿರೂಪಾಕ್ಷ ದೇವರ ದರ್ಶನ ಮಾಡಿ ಅಲ್ಲಿ ತುಂಗಭದ್ರಾ ತೀರದಲ್ಲಿ ಅನುಷ್ಠಾನ ಮಾಡಿ ಕೆಲದಿನವಿದ್ದು ತಪೋಜ್ವಲ ಬೆಳಸಿಕೊಂಡು ತಮ್ಮ ಮಠಕ್ಕೆ ಹಿಂತಿರುಗಿ ಬಂದರು.

# ಎಂಟನೆಯ ಸಂಧಿ

## ಶ್ರೀ ಚನ್ನಬಸವದೇಶಿಕರು–ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರ ಪ್ರಥಮ ಸಂದರ್ಶನ.

ಈ ಸಂಧಿಯಲ್ಲಿ ಪರಮಗುರು ಶ್ರೀ ಚನ್ನಬಸವರ ದಿವ್ಯದರ್ಶನ ಹರನ ಕೃಪೆಯಲ್ಲಿ ನಾಗರಹಾಳು ಮಠದ ದೊಡ್ಡಯ್ಯಶಾಸ್ತ್ರಿಗಳು ಮಾಡಿಕೊಳ್ಳುವರು.

ಉನ್ನತವ ಅಭ್ಯಾಸಕ್ಕೆ ಕಾಶಿಗೆ ಹೋಗದೆ ಸ್ವಯಂ ಪ್ರತಿಭೆಯಿಂದ ಆಶು ಕವಿತಾ ಶಕ್ತಿ ಪಡೆದು, ಸರಳತೆಗೆ ಸಾಕಾರ ರೂಪದವರಾಗಿ ಪರಮ ಪಂಡಿತರಾಗಿ ನಡೆನುಡಿಗಳ ಪರಿಶುದ್ಧತೆಯಿಂದ ಶಿವಾನುಭವ ಸಂಪನ್ನರಾಗಿ, ಶ್ರೇಷ್ಠ ಶರಣರ ಜೀವನ ನಡೆಸು ವವರಾಗಿದ್ದರು. ಪುರಾಣ ಹೇಳುವ ಇವರ ಶೈಲಿಯೇ ಲಲಿತವಾದದ್ದು. ಜನರ ಮನಸ್ಸು ಅರಳಿಸುವಂಥಹದು. ಇಂತಹ ಶಾಸ್ತ್ರಿಗಳನ್ನು ಹೊನ್ನಳ್ಳಿ ಭಕ್ತರು ಪ್ಯಾಂಪುತ ಚನ್ನಕವಿಕೃತ ಹೇಮರಡ್ಡಿ ಮಲ್ಲಮ್ಮನ ಪುರಾಣವನ್ನು ಹೇಳಿಸಬೇಕೆಂದು ಕರೆಯಲಿಕ್ಕೆ ನಾಗರಹಾಳಿಗೆ ಬಂದು ಬಿನ್ನೈಸಿಕೊಳ್ಳಲು ಅದಕ್ಕೆ ಶಾಸ್ತ್ರಿಗಳು ಒಪ್ಪಿ ಶ್ರಾವಣದಿಂದ ಹೊನ್ನಳ್ಳಿಯಲ್ಲಿ ಹೇಮರಡ್ಡಿ ಮಲ್ಲಮ್ಮನ ಪುರಾಣ ಪ್ರಾರಂಭ ವಾಯಿತು. ಈ ವಿಷಯವನ್ನು ತಿಳಿದ ವಳಬಳ್ಳಾರಿ ಮಠದ ದೇಶಿಕರಾದ ಶ್ರೀ ಚನ್ನಬಸವ ಮಹಾಸ್ವಾಮಿಗಳು ದೊಡ್ಡಯ್ಯಶಾಸ್ತ್ರಿಗಳವರ ಪುರಾಣ ಪ್ರವಚನವನ್ನು ಕೇಳಲು ಇಚ್ಛಿಸಿ ಬರುವರು. ಪುರಾಣವನ್ನು ಕ್ರಮದಲ್ಲಿ ಹೇಳುವ ವಿಷಯಾಂತರ ಮಾಡದೆ ಯಥಾರ್ಥವಾಗಿ ಸಹಜ ಸರಳ ಸುಂದರ ಶೈಲಿಯಲ್ಲಿ ಧಾರ್ಮಿಕ ತತ್ವಗಳನ್ನು ಎಲ್ಲಾ ಜನರಿಗೆ ತಿಳಿಯುವಂತೆ ಬೋಧಿಸುವ ವಿಧಾನ ತಿಳಿದು ಶ್ರೀ ಚನ್ನಬಸವ ದೇಶಿಕರು ಬಹಳ ಸಂತೋಷಪಟ್ಟು ದೊಡ್ಡಯ್ಯಶಾಸ್ತ್ರಿಗಳ ಹೆಸರು ಸಾರ್ಥಕವಾಗಿದೆಯೆಂದು ಹೇಳಿ ಇವರು ನಿಜವಾಗಿಯೂ ದೊಡ್ಡಪ್ಪನವರೆಂದು ಕರೆದು ಮನದುಂಬಿ ಹೊಗಳಿ ಮಂಗಲಾಶೀರ್ವಚನ ಕರುಣಿಸುವರು. ಹೀಗೆ ಪುರಾಣ ಕೇಳಲು ಪ್ರತಿದಿನ ವಳಬಳ್ಳಾರಿಯಿಂದ ಹರಿಗೋಲಲ್ಲಿ ದಾಟಿಬಂದು ಹೊನ್ನಳ್ಳಿಯಲ್ಲಿ ಶಾಸ್ತ್ರಿಗಳ ಪುರಾಣ ತುಂಬು ಮನಸ್ಸಿನಿಂದ ಕೇಳು ತ್ತಿದ್ದರು. ಮಧ್ಯದಲ್ಲಿ ಒಮ್ಮೆ ಶ್ರೀ ಶಾಸ್ತ್ರಿಗಳನ್ನು ತಮ್ಮ ವಳಬಳ್ಳಾರಿ ಮಠಕ್ಕೆ ಆಹ್ವಾನಿಸಿದಾಗ ಅವರ ಅಪ್ಪಣೆಯಂತೆ ವಳಬಳ್ಳಾರಿ ಮಠಕ್ಕೆ ಹೋಗಿ ಶ್ರೀ ಶಾಸ್ತ್ರಿಗಳು ಶ್ರೀ ಚನ್ನಬಸವರ ಪಾದಪೂಜೆ ಬಹಳ ಶ್ರದ್ಧೆಯಿಂದ ಮಾಡಿಕೊಂಡು ಕರುಣ ಪ್ರಸಾದ ಪಡೆದುಕೊಳ್ಳುವರು. ಅಂದೇ ಶ್ರೀ ಶಾಸ್ತ್ರಿಗಳನ್ನು ತಮ್ಮ ಸಂಸ್ಥಾನ ಮಠದ ಮಹಾ ಪಂಡಿತರೆಂದು ಸ್ವೀಕರಿಸಿ ಹಾರೈಸುವರು. ಮುಂದೆ ಪುರಾಣ ಮಂಗಲವು ಶ್ರೀಗಳ ಕೃಪೆಯಲ್ಲಿ ಜೇಗರಕಲ್ ನರಸಪ್ಪ. ವೀರಪ್ಪ, ಷಣ್ಮುಖಪ್ಪ ಇತ್ಯಾದಿ ಊರ ಗೌಡರೂ ಸೇರಿ ಪ್ರಮುಖ ಭಕ್ತ ಜನ ಸಮೂಹದೊಡಗೂಡಿ ಅತ್ಯಂತ ವಿಜೃಂಭಣೆಯಿಂದ ಮಾಡಿ ಹರಗುರು ಚರವರರ ಕೃಪೆಗೆ ಪಾತ್ರರಾಗುವರು.

# ಒಂಭತ್ತನೆಯ ಸಂಧಿ

## ಶ್ರೀ ಚನ್ನಬಸವ ದೇಶಿಕರಿಗೆ ಪಟ್ಟಾಧಿಕಾರವಾದದ್ದು

ಸ್ವಾಮಿಗಳಿಗೆ ಇರತಕ್ಕ ಲಕ್ಷಣಗಳೆಲ್ಲವೂ ಪೂರ್ಣತ್ವದಿಂದ ಕೂಡಿ ಕಂಗೊಳಿಸಿದ ಚನ್ನಬಸವ ದೇಶಿಕರನ್ನು ವಳಬಳ್ಳಾರಿ ಮಠದ ಶಾಖಾಮಠವಾದ ನದಿಚಾಗಿಯಲ್ಲಿ (ಆದವಾನಿ ತಾಲ್ಲೂಕು ಕರ್ನೂಲು ಜಿಲ್ಲೆ) ಅವರ ಪಟ್ಟಾಧಿಕಾರ ಮಾಡುವ ಪೂರ್ವ ದಲ್ಲಿ ಕಾರಣಾಂತರದಿಂದ ಅನೇಕ ಹಳ್ಳಿಗಳಿಗೆ ಸಂದರ್ಶನವಿತ್ತು ಭಕ್ತರನ್ನು ಉದ್ಧರಿ ಸುತ್ತಾ ಸಂತೇಕೂಡ್ಲೂರು ಗ್ರಾಮಕ್ಕೆ ಬಂದು ಆ ದಿನ ಸಂಗನಗೌಡ ಎಂಬ ಭಕ್ತನ ಮನೆಯಲ್ಲಿ ದೇಶಿಕರ ಶಿವಪೂಜೆ ಮುಗಿಸಿದರು. ಶ್ರೀಗಳವರ ಪ್ರಸಾದವೂ ಆಯಿತು. ಇತ್ತ ಹೊರಗೆ ಅವರ ಸೇವಕನಿಗೆ ಹಳಸಿದನ್ನ, ತಣ್ಣನೆಯ ಸಾರು ಉಣಲು ಬಡಿಸಿದಾಗ ಅದನ್ನು ಉಣ್ಣದೆ ಕೈ ತೊಳೆದ ಸೇವಕನನ್ನು ಕಂಡ ಸೂಕ್ಷ್ಮಮತಿಗಳಾದ ಶ್ರೀಗಳು ಸೇವಕನಿಗೆ ಕುದುರೆಯ ಥಡಿಯು ಹಾಕಲು ಹೇಳಿ, ನಂತರ ಈ ರಾತ್ರಿಯಲ್ಲಿ ಪಯಣ ಬೇಡವೆಂದು ಗೌಡರು ಹೇಳಿದರೂ ಶಿವನ ಇಚ್ಛೆಯಾಗಿದೆ ಹೊರಡುವುದಾಗಿ ಶ್ರೀಗಳು ಹೇಳಿ ಪ್ರಯಾಣ ಮಾಡಿಯೇ ಬಿಟ್ಟರು.

ಒಂದು ಮೈಲು ಪ್ರಯಾಣ ಮಾಡಿ ನಡೆಯುವಾಗ್ಗೆ ಎದುರುಗಡೆಯಿಂದ ಓರ್ವ ಮುದುಕನು ಬಂದು ಚನ್ನಬಸವ ದೇಶಿಕರನ್ನು ನೋಡಿ ಅವರ ಶಿರ ಮುಟ್ಟಿ, ಮೈದಡವಿ ಹರುಷದಿಂದ ಹಾರೈಸಿ ತನ್ನ ಹಸುಬೆಯೊಳಗಿನಿಂದ ಬಾಳೆಯ ಹಣ್ಣಗಳನ್ನು ಸನ್ನೆಮಾಡಿ ಸೇವಕನಿಗೆ ಕೊಡುವುದಾಗಿ ಹೇಳಿ ಶ್ರೀಗಳ ಕೈಯಲ್ಲಿ ಹಣ್ಣಗಳನ್ನು ಕೊಟ್ಟಾಗ ಆ ಹಣ್ಣಗಳನ್ನು ಸೇವಕನಿಗೆ ಕೊಡಲು ಅದರಲ್ಲಿ ಒಂದು ಬಾಳೆಯ ಹಣ್ಣು ತಿನ್ನಲು ಬಹಳ ಸಂತೃಪ್ತನಾದ ಸೇವಕನು ಹಳಸಿದ ಅನ್ನ ತಣ್ಣನೆಯ ಸಾರು ನೀಡಿದಾಗ್ಗೆ ಹೊರಗೊಂದು ಒಳಗೊಂದು ತರತಮವೆಂದು ಖೇದದಿಂದ ಪರಿತಪಿಸಿದ್ದು ಉಂಟು. ತನ್ನನ್ನು ಕ್ಷಮಿಸೆಂದು ಶ್ರೀಗಳನ್ನು ಕೇಳಲು ಕ್ಷಮಿಸುವುದಕ್ಕೆ ತಾವ್ಯಾರು? ಹಣ್ಣು ಕೊಟ್ಟ ಮುದುಕನಿಗೆ ವಂದಿಸೆಂದು ಹೇಳಲು ಅದೇ ಪ್ರಕಾರ ಸೇವಕ ವಂದಿಸಲು ಮುಂದೆ ಹೋಗಲು ಅಲ್ಲಿ ಮುದುಕನಿರದೆ ಮಾಯವಾಗಿದ್ದುದು ನೋಡಿ ವಿಸ್ಮಯರಾಗಿ ಮುದುಕನ ವೇಷದಲ್ಲಿ ಬಂದ ಶಿವನೇ ಆತನೆಂದು ತಿಳಿದ ಶ್ರೀಗಳು ಶಿವಶಿವಾ ಎಂತಹ ಲೀಲೆಯು ಶಿವನು ಸಾಕಾರ ರೂಪದಲ್ಲಿ ದರ್ಶನ ಮಾಡಿಕೊಂಡ ಭಾಗ್ಯವು ತಮ್ಮದೆಂದು ಹರುಷಿಸಿಸುವ ಸಮಯದಲ್ಲಿ, ಇತ್ತ ಸಂತೇಕೂಡ್ಲೂರಲ್ಲಿ ಸಂಗನ ಗೌಡನಿಗೆ ತಾನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತದಂತೆ ಉದರಶೂಲಿಯಿಂದ ನರಳುತ್ತಾ, ವಾಂತಿ-ಭೇದಿ ಗಳಾಗುತ್ತಾ ಸಂಕಟದಲ್ಲಿರುವಾಗ್ಗೆ ಇದು ತಾನು ಮಾಡಿದ ಅಪರಾಧವೆಂದು ತಿಳಿಯುತ್ತಾ ಕಾಪಾಡು ಗುರುವೇ ಎಂದು ಗೋಳಿಡುತ್ತಾ ದುರಿತ ಕರ್ಮದ ಫಲಕ್ಕೆ ಪ್ರಾಣವನೇ ಥಾರಿಹೋಗಿತ್ತು!

ಇಂತು ರಾತ್ರಿಯೆಲ್ಲಾ ಪ್ರಯಾಣ ಮಾಡಿ ಶ್ರೀಗಳು ಸೇವಕನೊಡನೆ ವಳಬಳ್ಳಾರಿಗೆ ತಲುಪಿದಾಗ್ಗೆ ಸೂರ್ಯೋದಯವಾಗಿತ್ತು ! ಸತ್ತ ಗೌಡನ ವಾರ್ತೆ, ನಂತರ ತಿಳಿದ ಶ್ರೀಗಳು ಶಿವನ ಅಪೇಕ್ಷೆ ತಮಗೆ ತಿಳಿಯದೆಂದೂ ಸಹಜದಲ್ಲಿ ನುಡಿದು ಸುಮ್ಮನಾದರು. ಇವರ ನಡೆನುಡಿಗಳ ಪರಿಶುದ್ಧತೆಯನ್ನು ಕಂಡ ಗುರುಗಳು ನದಿಚಾಗಿ ಮಠದ ಭಕ್ತರು, ಕಾತರಕಿ, ಹಳ್ಳಿಯ ಭಕ್ತರು ಸೇರಿ ಅಧಿನಾಯಕನ ವಿರಕ್ತ ಮಠದ ಪಟ್ಟಾಧಿಕಾರ ಮಹೋತ್ಸವವನ್ನು ಮಾಡಲು ನಿರ್ಧರಿಸಿದಾಗ ಜನಮತಕ್ಕೆ ಒಪ್ಪಿ ಪಟ್ಟಾಧಿಕಾರ ಕಾರ್ಯಕ್ಕೆ ಅನುಮತಿ ಕೊಡಲು ಭಕ್ತ ಜನರು ಧನಧಾನ್ಯ ಸಂಗ್ರಹ, ಇದ್ದ ಮಣ್ಮಠಗಳನ್ನು ಚಂದಮಾಡುತ್ತಾ ಅಹರ್ನಿಶಾ ಬದ್ಧ ಕಂಕಣರಾಗಿ ಪಟ್ಟಾಧಿಕಾರದ ಮಹತ್ ಕಾರ್ಯದೊಳು ನಿರತರಾದರು.

ಇದೇ ಸಮಯದಲ್ಲಿ ಒಂದು ದಿನ ಲಿಂಗಣ್ಣನ ಜೊತೆಯಲ್ಲಿ ನದಿಚಾಗಿಯ ಹಂಪನಗೌಡನು ಬಂದು ಲಿಂಗಣ್ಣನಿಗೆ ಈಗ ತಮ್ಮ ಆಶೀರ್ವಾದದಿಂದ ಗಂಡುಮಗುವಾಗಿದೆಯೆಂದೂ ಹಿಂದೆ ವಿಕ್ರಮವರ್ಷದಿ ನದಿಚಾಗಿಗೆ ದಯಮಾಡಿಸಿ ಆ ಊರಿನ ಮಠದ ಗುರುಗಳಿಗೂ ಮತ್ತು ಲಿಂಗಣ್ಣ ಭಕ್ತನಿಗೆ ಹೊಲದ ವಿಷಯದಲ್ಲಿ ಬಂದ ಮನಸ್ತಾಪವನ್ನು ಸರಿಪಡಿಸಿ ಜಂಗಮ ದ್ವೇಷ ನಿರಸನಮಾಡಿ ಹರಸಿದುದರ ತತ್ಫಲವಾಗಿ ಲಿಂಗಣ್ಣನಿಗೆ ಗಂಡುಮಗುವಾಗಿತ್ತೆಂದೂ ಅದಕ್ಕೆ ಶ್ರೀಗಳು ಆ ಮಗುವಿಗೆ ತಿರುನೀಲಕಂಠನೆಂದು ನಾಮಕರಣ ಮಾಡ್ರೆಂದು ಹೇಳಿ ಹರಸಿ ಹಾರೈಸಿ ನದಿಚಾಗಿಯ ಮಠದ ತೋಂಟದಾರ್ಯರ ಗದ್ದುಗೆಗೆ ರುದ್ರಾಭಿಷೇಕ ಮಾಡಲು ಹೇಳಿ ಮನೆ ಗುರುಗಳನ್ನು ಕರೆಸಿ ವರಗಣಾರಾಧನೆ ಮಾಡಿರೆಂದು ಹೇಳಿದರು. ಜೊತೆಗೆ ಪಟ್ಟಾಧಿಕಾರದ ಮಹತ್ಕಾರ್ಯದಲ್ಲಿ ಐಕ್ಯಭಾವದಿಂದ ಕಾರ್ಯ ಮಾಡಿರೆಂದು ಹಂಪನಗೌಡರಿಗೆ ಹೇಳಿ ಕಳುಹಿಸಿಕೊಟ್ಟರು. ಶ್ರೀಗಳಂತೆ ತಮ್ಮ ಕಾರ್ಯಮಾಡಿದ ಲಿಂಗಣ್ಣನು ಮುಂದೆ ಹಂಪನಗೌಡನ ಜೊತೆಗೂಡಿ ಶ್ರೀಗಳ ಪಟ್ಟಾಧಿಕಾರದ ದೊಡ್ಡಕಾರ್ಯಕ್ಕೆ ಸೇವೆ ಮಾಡಲು ನಿರತನಾದನು.

ಪಾರ್ಥಿವನಾಮ ಸಂವತ್ಸರದ ಮಾಘಮಾಸದ ಪಾಡ್ಯದಿಂದ ನವಮಿಯವರೆಗೆ ಅನೇಕ ಪಂಡಿತರು, ಗಾಯನ ಕೋವಿದರಿಂದ ಪ್ರವಚನ ಹಾಗೂ ಸಂಗೀತ ಕಾರ್ಯಕ್ರಮಗಳು, ಗುರುಭಜನೆ ಇತ್ಯಾದಿ ಕಾರ್ಯಗಳು ನಡೆದವು.

ಮುಚ್ಚುಮರೆ ಸಂಗಪ್ಪಶಾಸ್ತ್ರಿಗಳು ಪಂಡಿತ ದೊಡ್ಡಯ್ಯಶಾಸ್ತ್ರಿಗಳು, ಶಾಸ್ತ್ರಿ ಮಲ್ಲನಗೌಡರು ಸೇರಿ ವಿಬುಧರಗೋಷ್ಠಿಗಳನ್ನು ನಡೆಸಿ ಘನಕಾರ್ಯಕ್ಕೆ ಮೆರುಗು ತಂದವರಲ್ಲಿ ಅಗ್ರಗಣ್ಯರು ! ಕನಕಗಿರಿ ಮಠದ ಒಡೆಯರಾದ ಚನ್ನಮಲ್ಲಸ್ವಾಮಿಗಳು ದಶಮಿಯ ದಿನ ಶ್ರೀ ಚನ್ನಬಸವದೇಶಿಕರಿಗೆ ಮಡಿಕಾವಿ ಬಟ್ಟೆಗಳಿಂದ ಶೃಂಗರಿಸಿ, ಚರ ಪಟ್ಟಾಧಿಕಾರವನ್ನು ಕರುಣಿಸಿದರು. ನಂತರ ಹರಗುರು ಚರಮೂರ್ತಿಗಳು,

ಪಂಡಿತರಿಗೂ ಗಾಯನ ಕಲಾಕೋವಿದರಿಗೂ ಯೋಗ್ಯ ದಕ್ಷಿಣೆ ಸಂಭಾವನೆಗಳು ಕ್ರಮವಾಗಿ ಕೊಟ್ಟು ಕಳುಹಿಸಿದರು. ಅನಂತರ ಶ್ರೀ. ಮ. ನಿ. ಪ್ರ. ಚನ್ನಬಸವ ಮಹಾಸ್ವಾಮಿಗಳು ನದಿ ಚಾಗಿಯಲ್ಲಿ ಪಟ್ಟಾಧಿಕಾರ ವಹಿಸಿಕೊಂಡು ಭಕ್ತಜನರುದ್ಧಾರ ಕಾರ್ಯಗಳಲ್ಲಿ ಮಗ್ನರಾದರು.

## ಹತ್ತನೆಯ ಸಂಧಿ

### ಲೋಕ ಕಲ್ಯಾಣಕ್ಕಾಗಿ ಚರಜಂಗಮರಾಗಿ ಶ್ರೀಗಳು ಚರಿಸಿದ್ದು

ಜಂಗಮತ್ವದಲ್ಲಿ ಮೂರು ವಿಧವಾಗಿದೆ, ಸ್ವಯ, ಚರ ಮತ್ತು ಪರ ಜಂಗಮ ಗಳೆಂದು! ಪೂರ್ವಾಶ್ರಯ ನಿರಸನಗೊಂಡು ತ್ರಿಕರಣದಲ್ಲೂ, ತಂದೆ, ತಾಯಿ, ಬಂಧು ಬಳಗ ಮೊದಲಾದವರ ಸಂಬಂಧಗಳ ಸೋಂಕಿರದೆ ಪರಿಶುದ್ಧಾತ್ಮರಾಗಿ ಭಕ್ತರ ಅಪೇಕ್ಷೆ ಯಂತೆ, ಗುರುಗಳ ಮಹತ್ ಕೃಪೆಯೊಳಗೆ ಧರ್ಮಕಾರ್ಯಗಳನ್ನು ಮಠದಲ್ಲಿದ್ದೇ ಮಾಡುವ ವಿರಕ್ತನಿಗೆ ಸ್ವಯ ಜಂಗಮನೆಂತಲೂ ಕರೆಯುವರು.

ಇದಾದ ನಂತರ ದೇಶಸಂಚಾರ ಮಾಡುತ್ತಾ, ಹಳ್ಳಿಗೆ ಏಕ ರಾತ್ರಿ, ಪಟ್ಟಣಕ್ಕೆ ಪಾಂಚರಾತ್ರಿಯಂತೆ ಇದ್ದು ಅಲ್ಲಿನ ಜನರನ್ನು ಧರ್ಮ ಮಾರ್ಗಾವಲಂಬಿಗಳಾಗುವಂತೆ ಮಾಡಿ ಭವಸಾಗರದಿಂದ ದೂರವಾಗುವ ಸಕೀಲುಗಳನ್ನು ಹೇಳಿ ಆತ್ಮೋನ್ನತಿಯ ಜೊತೆಗೆ ಧರ್ಮದ ಏಳ್ಗಿ ಹಾಗೂ ಲೋಕಕಲ್ಯಾಣದ ಉನ್ನತಿಯ ಧ್ಯೇಯಧೋರಣೆ ಗಳಿಂದ ಸಮಾಜದ ಹಿತಚಿಂತಕರಾಗಿ ಚರಿಸುವ ವಿರಕ್ತಾಗ್ರಣಿಗೆ ಚರಜಂಗಮರೆಂದು ಕರೆಯುವರು.

ಈ ಪ್ರಕಾರ ದಿವ್ಯಸಾಧನೆ ಮಾಡಿ ಸುಖದಲ್ಲಿ ಹಿಗ್ಗದೆ, ದುಃಖದಲ್ಲಿ ಕುಗ್ಗದೆ, ಸುಖದುಃಖಗಳನ್ನು ಸಮಾನ ದೃಷ್ಟಿಯಿಂದ ನೋಡಿ ಸಮತ್ವೇ ಯೋಗ ಉಚ್ಯತೇ ಯೆನ್ನುವಂತೆ ಸಮತಾ ಯೋಗಿಯಾಗಿ ಕೊನೆಗೆ ೧೨ ವರ್ಷಗಳು ಮಿಕ್ಕ ಲೋಕಕಲ್ಯಾಣ ಕ್ಕಾಗಿ ಸಂಚರಿಸಿ ಭಕ್ತರನ್ನು ಉದ್ಧರಿಸಿ, ಇದಾದ ಬಳಿಕ ತಮ್ಮ ಮೂಲ ಮಠಕ್ಕೆ ಹಿಂತಿರುಗಿ ಕೇವಲ ಒಂದೇ ಸ್ಥಳದಲ್ಲಿದ್ದು ಲಿಂಗಾಂಗ ಸಾಮರಸ್ಯ ಸುಖವನ್ನು ಅನುಭವಿ ಸುತ್ತಾ ಇರುವುದೇ ಪರಜಂಗಮದ ಮುಖ್ಯ ಲಕ್ಷಣವೆನಿಸುವುದು.

ಈಗ ಈ ಕಾವ್ಯದ ಕಥಾನಾಯಕರಾದ ಶ್ರೀ ಚನ್ನಬಸವ ಮಹಾಸ್ವಾಮಿಗಳು ಚರಜಂಗಮರಾಗಿ ಚರಿಸುತ್ತಾ ವೀರಶೈವ ಧರ್ಮ ತತ್ವಗಳನ್ನು ತಿಳಿಸುತ್ತಾ ಸ್ವಧರ್ಮ ದಲ್ಲಿ ನಿಷ್ಠೆ, ಪರಧರ್ಮದಲ್ಲಿ ವಿಶ್ವಪ್ರೇಮದ ಸಹಿಷ್ಣುತೆಯುಳ್ಳವರಾಗಿ ದೇಶಸಂಚಾರ ಮಾಡುತ್ತಾ ಈ ಕೆಳಗಿನ ಲೀಲಾ ವಿಲಾಸಗಳನ್ನು ಮಾಡುವ ಮಹಾಶಿವಯೋಗಿ ಗಳಾಗುವರು !

## ಒಂದು ಪವಾಡ

ಒಮ್ಮೆ ಉಮ್ಮಾಳಿ ಹೊಸೂರಿನ ನಾಗರೆಡ್ಡಿಯವರ ಪಂಪನಗೌಡ್ರ ಮನೆಗೆ ಶ್ರೀಗಳು ಭಕ್ತರ ಬಿನ್ನಹದ ಮೇರೆಗೆ ಬಂದಿದ್ದರು. ಅದೇ ಸಂದರ್ಭದಲ್ಲಿ ಅದೇ ಊರಿನ ರಾಮಣ್ಣಗೌಡನು ಶ್ರೀಗಳಲ್ಲಿಗೆ ಬಂದು ಒಂದು ಪೂಜೆಯನ್ನು ತಮ್ಮ ಮನೆಯಲ್ಲಿ ಮಾಡಬೇಕೆಂದು ಬಿನ್ನೈಸಿಕೊಂಡನು. ಅದಕ್ಕೊಪ್ಪಿದ ಗುರುಗಳು ರಾಮಣ್ಣಗೌಡನ ಮನೆಯಲ್ಲಿ ಒಂದು ಪೂಜೆ ಮಾಡಿದರು. ಆ ಸಮಯದಲ್ಲಿ ತಮ್ಮ ವ್ಯಾಧಿಪೀಡಿತಳಾದ ಮಗಳನ್ನು ಶ್ರೀಗಳ ಪಾದಕ್ಕೆ ಹಾಕಿ ಹಿಂದೆ ಸತ್ತ ಎರಡು ಕೂಸುಗಳ ಬಗ್ಗೆ ತಿಳಿಸಿ ಇದ್ದ ಈ ಮಗಳು ಸಹಾ ಮರಣಕಾಲದ ಸಮೀಪದಲ್ಲಿರುವ ಅವಸ್ಥೆಯನ್ನು ವಿವರಿಸಿ ದಿಕ್ಕಿಲ್ಲದವರಿಗೆ ಒಂದು ಗತಿಕಾಣಿಸಲು ಶ್ರೀಗಳಲ್ಲಿ ಗೌಡನು ಅತ್ಯಂತ ವಿನೀತ ಭಾವದಲ್ಲಿ ಬಿನ್ನೈಸಿಕೊಂಡಾಗ ದಂಪತಿಗಳೀರ್ವರ ಬಿನ್ನಹದಂತೆ ಶ್ರೀಗಳು ಅನುಗ್ರಹಿಸುತ್ತಾ ತಮ್ಮ ಗ್ರಾಮದಲ್ಲಿರುವ ಸಿದ್ಧೇಶ್ವರನಿಗೆ ನಡೆದುಕೊಂಡು ಪೂಜೆ ಮಾಡಬೇಕೆಂದು ಹೇಳಿ ರುದ್ರಾಭಿಷೇಕ, ಗಣಾರಾಧನೆ ಮಾಡಿರೆಂದು ಸೂಚಿಸುತ್ತಾ ಹರಸಿದರು. ಅದೇ ಪ್ರಕಾರ ದಂಪತಿಗಳು ಸೇವೆ ಮಾಡಿ ಪ್ರತಿವರ್ಷ ಶ್ರಾವಣ ಮಾಸದಲ್ಲಿ ಸಿದ್ಧೇಶ್ವರನಿಗೆ ಭಕ್ತಿಭಾವದ ಪೂಜೆ ಮಾಡುವುದಾಗಿ ಹೇಳಿದ ದಂಪತಿಗಳು ಅದರಂತೆ ನಡೆದುಕೊಂಡಾಗ ತಮ್ಮ ಮಗಳು ಮಲ್ಲಮ್ಮನಿಗೆ ಬಂದ ಜಾಡ್ಯ ಗುಣವಾಗಿ ಶ್ರೀಗಳಿಗೆ ಗುರು ಕಾಣಿಕೆ ಕೊಟ್ಟು ಧನ್ಯರಾದರು. ಆದರೆ ಆ ಯಾವಕಾಲದಲ್ಲಿ ಮಳೆಬಾರದೆ ಊರಿನವರು ಚಿಂತಿಸಿ, ಒಣಗಿದ ಪೈರುಗಳು, ಕಾದಭೂಮಿಯ ಬಿರುಕು, ದನಗಳಿಗೆ ಮೇವುಯಿಲ್ಲದೆ ಹಾಹಾಕಾರವೆದ್ದಿರುವ ಸಮಯದಲ್ಲಿ ಸಪ್ತಭಜನೆ ಮಾಡಿದರೂ ಹರ ಕಾ ಯು ವ ಸ್ಥಿತಿಯಲ್ಲಿ ಇಲ್ಲದಿರುವಾಗ್ಗೆ ಗುರು ಕಾಯುವನೆಂಬ ದೃಢನಂಬುಗೆಯಿಂದ ಒಳಬಳ್ಳಾರಿ ಶ್ರೀಗಳಲ್ಲಿಗೆ ಬಂದು ಮಳೆ ಬರಲಿಕ್ಕೆ ಕೃಪೆಮಾಡಬೇಕೆಂದು ಕೇಳಲು ಯೋಗಮುಖಿ ಯಾಗಿ ಶಿವಯೋಗಿಗಳಾದ ಶ್ರೀ ತಾತನವರು ಭಕ್ತರನ್ನು ನೋಡಿ ತಾವು ಗೈಯ್ಯು ತ್ತಿರುವ ಭಜನೆ ಬಿಡದೆ ನಿಷ್ಠೆಯಿಂದ ಮುಂದುವರಿಸಲು ಹೇಳಿ ಖಂಡಿತ ಶಿವನ ಕೃಪೆ ಯಾಗುವುದೆಂದು ಹೇಳಿ, ಹಾರೈಸಿದರು. ನಂತರ ಅಕಾಲದಲ್ಲಿ ಆಗಸದಲ್ಲಿ ಮೋಡಗಳು ಕವಿದು ಗುಡುಗು ಮಿಂಚುಗಳಿಂದ ಧರೆಯೊಳಗೆ ಕಾದಿರುವ ಭೂಮಿಗೆ ಶಾಂತಿ ಕರುಣಿಸುವ ಭಾವದಿಂದ ಸೊಗಸಾದ ಮಳೆ ಬಂದು, ಲೋಕದ ಜನರಿಗೆ ಪರಮ ಶಾಂತಿ ತೃಪ್ತಿಗಳು ನೀಡಿತು. ಇದೆಲ್ಲಾ ಕಾರಣಿಕ ಶ್ರೀ ಚನ್ನಬಸವ ಶ್ರೀಗಳ ಕೃಪೆಯೆಂದು ಭಾವಿಸಿದ ಭಕ್ತರು ಅನನ್ಯ ಭಕ್ತಿಯಿಂದ ಸ್ತುತಿಸಿ, ನುತಿಸಿ ಹೊಗಳಿದರು.

ಶ್ರೀಗಳ ಅಪ್ಪಣೆಯಿಂದ ಮಾರನೆಯ ದಿನ ಶ್ರೀ ಸಿದ್ಧೇಶ್ವರನ ಗುಡಿಯಲ್ಲಿ ಗಣಾರಾಧನೆ ಮಾಡಿಸಿ ಶ್ರೀಗಳ ನೇತೃತ್ವದಲ್ಲಿ ಅಸಂಖ್ಯ ಜನ ನಿತ್ಯ ತೃಪ್ತರಾದರು. ಶ್ರೀಗಳ ನೋಟ, ಮಾಟ ಹಾಗೂ ಕೂಟಗಳೆಂಬ ತ್ರಿಪುಟಿಯ ರಹಸ್ಯವನ್ನರಿದ ಭಕ್ತರು ಶ್ರೀ ತಾತನವರು ವಳಬಳ್ಳಾರಿ ಮಠಕ್ಕೆ ಯೋಗ್ಯ ರೀತಿಯಲ್ಲಿ ಜೋಡು ಎತ್ತಿನ ಗಾಡಿಯಲ್ಲಿ ಕಳುಹಿಸಿ ಕೊಟ್ಟರು. ನಂತರ ಒಳಬಳ್ಳಾರಿ ಮಠದಲ್ಲಿ ನೆಲೆನಿಂತು ಶ್ರೀ ತಾತನವರು ಮಠದಲ್ಲಿ ನಿತ್ಯದಾಸೋಹಿಯಾಗಿ, ಸತ್ಯಶುದ್ಧ ಕಾಯಕ ಯೋಗಿಗಳಾಗಿ ಜೊತೆಗೆ ಮಠದ ಹೊಲ ಗದ್ದೆಗಳನ್ನು ಸಮಾಜದ ಹಿತಚಿಂತನೆಗಾಗಿ ಚೆನ್ನಾಗಿ ನೋಡಿಕೊಳ್ಳುತ್ತಾ ಮಠದ ಕೀರ್ತಿಯನ್ನು ಘಟದಿಂದ ಬೆಳಗಿಸಿ ವರತಪೋಧನರಾಗಿ ಪ್ರಕಾಶದಲ್ಲಿ ವಿರಾಜ ಮಾನರಾದರು.

## ಹನ್ನೊಂದನೆಯ ಸಂಧಿ

### ಅಡವಿ ಅಮರೇಶ್ವರನ ಕ್ಷೇತ್ರದಲ್ಲಿ ಲಿಂಗ ಪ್ರತಿಷ್ಠಾಪಿಸಿ ಜಸದೊಳು ಖ್ಯಾತಿ ಹೊಂದಿದ್ದು

ಹೊಸೂರಿನ ವಿರುಪಯ್ಯನ ಜೊತೆಯಲ್ಲಿ ನರಸಯ್ಯ ಸೇರಿಕೊಂಡು ಈರ್ವ. ವೈಶ್ಯರು ವ್ಯಾಪಾರ ಮಾಡುತ್ತಿದ್ದರು. ಸರಳ ಜೀವನ ನಡೆಸುತ್ತಾ, ಜನರನ್ನು ವಂಚಿಸಿ ವ್ಯಾಪಾರ ಮಾಡದಲೆ ಸತ್ಯ ಶುದ್ಧ ಕಾಯಕ ಜೀವಿಗಳಾಗಿದ್ದರು. ಬಸ್ಸಿನ ಸೌ ಕ ರ್ಯ ವಿ ಲ್ಲ ದೆ ಯಿ ರು ವ ಕಾಲದಲ್ಲಿ ಕಾಲು ನಡಿಗೆಯಲ್ಲಿಯೆ. ಸಂಚರಿಸಿ ವ್ಯಾಪಾರ ಮಾಡುವ ವೈಶ್ಯರಿಬ್ಬರು ಒಮ್ಮೆ ವಿಜಯನಾಮ ಸಂವತ್ಸರದ ಫಾಲ್ಗುಣ ಮಾಸದ ಕೊನೆಯಲ್ಲಿ ಬ್ಯಾಗವಾಟದ ವರ್ತಕರನ್ನು ಕೂಡಿಕೊಂಡು ಮಾರ್ಗಾಯಾಸ ದಿಂದ ಬಳಲಿ ಈಗಿರುವ ಅಮರೇಶ್ವರನ ಕ್ಷೇತ್ರದ ಸ್ಥಳದಲ್ಲಿ ಇರುವ ಆಗಿನ ಸಣ್ಣ ಹಳ್ಳದಲ್ಲಿ ಒರತೆಯ ನೀರನ್ನು ಕುಡಿಯಲು ಹೋದಾಗ್ಗೆ ಅಲ್ಲಿರುವ ಭಿನ್ನವಾದ ಶಿವಲಿಂಗ ಹಾಗೂ ಬಸವಣ್ಣನನ್ನು ನೋಡಿ ಉನ್ನತ ಭಾವದಲ್ಲಿ ವಿಚಾರಿಸಿ ಇಲ್ಲಿ ಒಂದು ಶಿವಾಲಯವನ್ನು ನಿರ್ಮಾಣ ಮಾಡಿದರೆ ಈ ಮಾರ್ಗದಲ್ಲಿ ಸಂಚಾರ ಮಾಡುವವರಿಗೆ ಮಾರ್ಗದ ಆಯಾಸ ಕಳೆಯಲು ಒಂದು ಮಹತ್ತರವಾದ ಆಶ್ರಯದ ಆಲಯವಾಗಬಹುದೆಂದು ವಿಚಾರ ಮಾಡಿ ಬೇಗ ವಾಟದ ಬಸವಣ್ಣ, ಬಾಗಿಲ್ವಾಡದ ನರಸಯ್ಯ ಕೂಡಿಕೊಂಡು ಪರ್ತಾರಾಮಣ್ಣನಿಗೆ ವಿಷಯ ತಿಳಿಸಿದರು. ಇದು ಒಬ್ಬರು ಮಾಡುವ ಕಾರ್ಯವಲ್ಲವೆಂದೂ ಹಲವಾರು ಉತ್ತಮರು ಕೂಡಿಕೊಂಡು ಮಾಡುವ

ಮಹಾ ಕಾರ್ಯವೆಂದು ಉಮ್ಮಾಳದ ಹೊಸೂರು ಗೌಡರ ನೇತೃತ್ವದಲ್ಲಿ ಚಂದಾಹಣ ಕೂಡಿಸಿ ಗಳಿಕೆಯ ಹಣವನ್ನು ಯೋಗ್ಯದಿಂದ ಬಳಕೆ ಮಾಡಿ ಸರಳ ಸುಂದರ ಶಿವನ ಮಂದಿರ ಕಟ್ಟಿ ಶಿವಲಿಂಗವನ್ನು, ಜೊತೆಗೆ ಧರ್ಮರೂಪಿ ಬಸವಣ್ಣನನ್ನು ಕಾಶಿಯಿಂದ ತರಿಸಿ ಶ್ರೀ ವಳಬಳ್ಳಾರಿ ತಾತನವರ ಅಮೃತ ಹಸ್ತದಿಂದ ಪ್ರತಿಷ್ಠಾಪಿಸಬೇಕೆಂಬ ಮಹದಾಶೆಯಿಂದ ತಾತನವರಲ್ಲಿಗೆ ಹೋಗಿ ವಿಷಯ ವಿಚಾರ ವಿನಿಮಯ ಮಾಡಿಕೊಂಡು ಬಿನ್ನೈಯಿಸಿ ಕೊಂಡರು. ಅದಕ್ಕೆ ಶ್ರೀ ತಾತನವರು ಗುರುವು ದೀಕ್ಷಾಮೂರ್ತಿಯು, ಲಿಂಗವು ಪೂಜಾಮೂರ್ತಿಯು ಮತ್ತು ಜಂಗಮನು ಭೋಗಮೂರ್ತಿಯೆಂದು ನಿಯಮವು ವೀರಶೈವ ಧರ್ಮದಲ್ಲಿದೆ. ಆದ್ದರಿಂದ ಗುರುವಾಗಿರುವ ಭೋಗಾಪುರದಲ್ಲಿರುವ ವಿರೂಪಾಕ್ಷಸ್ವಾಮಿಗಳವರ ಅಮೃತ ಹಸ್ತದಿಂದ ಲಿಂಗ ಪ್ರತಿಷ್ಠಾಪನೆ ಮಾಡಿರೆಂದು ಹೇಳಲು ಈ ವಿಷಯವನ್ನು ಭೋಗಾಪುರದ ಶ್ರೀಗಳಿಗೆ ತಿಳಿಸಲು ಅದಕ್ಕೆ ಅವರು ಒಪ್ಪದೆ ನಡೆದ ಒಂದು ಘಟನೆಯನ್ನು ವಿವರಿಸುವರು. ಹಿಂದೆ ಸಿದ್ಧಾರೂಢರು ಸಮೀಪದಲ್ಲಿರುವ ಹಳ್ಳಿಯೊಂದರಲ್ಲಿರುವ ದೊಡ್ಡ ಬಸವೇಶ್ವರನ ಜಾತ್ರೆಯ ಸಮಯದಲ್ಲಿ ಆ ದೊಡ್ಡ ಬಸವೇಶ್ವರನ ಮಹಾಮೂರ್ತಿಯ ಮೇಲೆ ಹತ್ತಿ ಕುಳಿತಾಗ ಅಲ್ಲಿ ಜಾತ್ರೆಗೆಂದು ಸೇರಿದ ಜನರು ಹುಚ್ಚನೆಂದು ಪರಿಗಣಿಸಿ ಹೊಡೆಯಲು ಸಿದ್ಧರಾದಾಗ ಅಲ್ಲಿರುವ ವೃದ್ಧನೋರ್ವನು ಸನಿಹಕ್ಕೆ ಬಂದು ಸಿದ್ಧಾರೂಢರು ಹೀಗೇಕೆ ಮಾಡಿದಿರೆಂದು ಕಾರಣ ಹೇಳಿದಾಗ್ಗೆ ಆಗ ಸಿದ್ಧಾರೂಢರು ಈ ದೊಡ್ಡ ಬಸವನಮೂರ್ತಿಯಲ್ಲಿ ದೈವೀಕಲೆ ಕಡಿಮೆಯಾಗಿರುವುದರಿಂದ, ಆ ದೈವೀಕಲೆ ತುಂಬಿದೆನು ಇಲ್ಲದಿದ್ದರೆ ಈ ಮೂರ್ತಿಯು ಕಳಾವಿಹೀನರಾಗಿ ಮುಂದೆ ಪೂಜ್ಯತೆ ಕಳೆದುಕೊಳ್ಳುತ್ತಿತ್ತೆಂದೂ ಹೇಳಲು ಆ ಮಾತಿಗೆ ವೃದ್ಧನು ಸಹಿತ ಜನರು ಸಂತೋಷಗೊಂಡು ಸಾಧು ಪಾದಕ್ಕೆ ನಮಿಸಿ, ಒಳಗಣ್ಣು ತೆರೆಸಿದಿರೆಂದು ಹೊಗಳಿ ಕಳುಹಿಸಿಕೊಟ್ಟರಂತೆ. ಶಿಲೆಯೊಳಗೆ ಶಿವತತ್ವ ಕಲೆಯನ್ನು ಹಲವು ಮಂತ್ರ ತಂತ್ರಗಳಿಂದ ಕೆಲವು ಜನರು ಸ್ಥಾಪಿಸಿದ ದೇಗುಲಗಳು ದೀಪಗಾಣವಲೆ ಹಾಳು ಬಿದ್ದಿರುವುದಾಗಿ ತಿಳಿಸಿ ಇಂಥಹ ಕಾರ್ಯಗಳನ್ನು ದಿವ್ಯಹಸ್ತವುಳ್ಳ ಮಹಾ ಮಹಿಮರಿಂದಲೇ ಪ್ರತಿಷ್ಠಿಸಬೇಕೆಂದು ಹೇಳಿ ಭೋಗಾಪುರದ ಶ್ರೀಗಳು ಇದಕ್ಕೆ ವಳಬಳ್ಳಾರಿ ಶ್ರೀಗಳೇ ಯೋಗ್ಯರೆಂದು ತಿಳಿಸಿ ವಳಬಳ್ಳಾರಿ ತಾತನವರು ವಿನಯದಿಂದ ಬಿನ್ನಯಿಸಿಕೊಳ್ಳಲು, ಅವರೆಲ್ಲರ ಮಾತಿಗೆ ಒಪ್ಪಿದ ಶ್ರೀಗಳು ಅಡವಿ ಅಮರೇಶ್ವರ ಕ್ಷೇತ್ರದಲ್ಲಿ ಶಿವಲಿಂಗ ಹಾಗೂ ಬಸವಣ್ಣನನ್ನು ಶಿವ ಮಂದಿರದಲ್ಲಿ ತಮ್ಮ ಅಮೃತ ಹಸ್ತದಿಂದ ಪ್ರತಿಷ್ಠಾಪಿಸಿದರು. ಜಯನಾಮ ಸಂವತ್ಸರದ ಶ್ರಾವಣ ಮಾಸದ ಶುದ್ಧ ಶುಕ್ರವಾರದ ದಿನದಲ್ಲಿ ಲಿಂಗಸ್ಥಾಪನೆ ಮಾಡಿದ ಮಹತ್‌ಕಾರ್ಯ ಸಾಧನೆಯ ಸುದಿನವೇ ಮಹಾದಿನವಾಗಿ ವರಗಣಾರಾಧನೆಯ ತೃಪ್ತಿಯಿಂದ ನೆರೆದ ಜನ ಸಂತೃಪ್ತರಾಗಿ ಧರೆಯೊಳಗೆ ಅಡವಿ ಅಮರೇಶ್ವರನ ಕ್ಷೇತ್ರ ಧರ್ಮ ಕ್ಷೇತ್ರವಾಗಿ ಬೆಳಗಿತು. ಮುಂದೆ ಮನ್ಮಥನಾಮ ವರ್ಷದಲ್ಲಿ ಚೈತ್ರ ಮಾಸದಲ್ಲಿನ ಕೃಷ್ಣಪಕ್ಷದ ಪಂಚಮಿಯಂದು ದಿವ್ಯರಥೋತ್ಸವವು

ನಡೆದು ಚಂದವಾಗಿ ಜಾತ್ರೆಯಲ್ಲಿ ಏಳು ದಿನಗಳು ದನಗಳ ಪರಿಶೆಯಾಗಿ ಆಗಿನ ಸಮಯ:ದಲ್ಲಿ ಎಲ್ಲಾ ಜನರಿಗೆ ದಾಸೋಹ ಮಾಡುವ ಕಾರ್ಯ ಶ್ರೀಗಳಿಂದ ನಡೆದು ಶಿ ವಾ ನು ಭ ವ ಪ್ರವಚನದ ಕಾರ್ಯಗಳು ಮೂರು ದಿನಗಳು ನಡೆದು ತ್ರಿವಿಧ ದಾಸೋಹ ಕಾರ್ಯ ಶ್ರೀಗಳಿಂದ ಸಾಂಗವಾಗಿ ನೆರವೇರಿತು. ಈ ಕ್ಷೇತ್ರದ ಒಡೆತನ ಶ್ರೀ ತಾತನವರಿಗೆ ಒಪ್ಪಿಸಿದ ಭಕ್ತ ಜನರು, ದುಡ್ಡು ಸ್ಥಾವರ- ದುಡಿತ ಜಂಗಮವೆಂದು ತಿಳಿದು ದುಡ್ಡಿಗೆ ನಾಶವಿದ್ದರೂ ದುಡಿತ (ಕಾರ್ಯ)ಕ್ಕೆ ಅಳಿವಿಲ್ಲವೆಂಬ ರಹಸ್ಯವನ್ನು ತಿಳಿದು ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲವೆಂಬುದನ್ನು ಚೆನ್ನಾಗಿ ಶ್ರೀಗಳಿಂದ ತಿಳಿದುಕೊಂಡು ಅಡವಿ ಅಮರೇಶ್ವರರ ಕೃಪೆಗೆ ಪಾತ್ರರಾದರು.

## ಹನ್ನೆರಡನೆಯ ಸಂಧಿ

### ಧರೆಯ ಜನರುದ್ಧಾರಕ್ಕಾಗಿಯೆ ಶ್ರೀ ಚನ್ನಬಸವರು ಪವಾಡ ಮಾಡಿದ ದಿವ್ಯ ಪ್ರಸಂಗಗಳು

### (ಪ್ರಸಂಗ–೧) ಭಕ್ತನಜಾಡ್ಯ ನಿವಾರಣೆ

ರಾಯಚೂರು ಜಿಲ್ಲಾ, ಸಿಂಧನೂರು ತಾಲೂಕಿಗೆ ಸೇರಿದ ಹೊಸಳ್ಳಿ ಎಂಬುದೊಂದು ಗ್ರಾಮ ಈ ಗ್ರಾಮದಲ್ಲಿ ಪಂಪಾಪತಿಗೆ ವೆಂಕಣ್ಣ ಎಂಬೊಬ್ಬ ಮಗನಿದ್ದನು. ವೆಂಕಣ್ಣನಿಗೆ ಮದುವೆ ಮಾಡಿದ ವರ್ಷದಲ್ಲಿಯೇ ನವಸಂಸಾರದ ಸುಸಮಯದಲ್ಲಿ ಒಂದು ತರಹದ ಜಾಡ್ಯ ಆವರಿಸಿ ಬಾಹ್ಯ ಪ್ರಜ್ಞೆಯ ವ್ಯವಹಾರ ಗೊತ್ತಾದುದೆ ಜಡಸ್ಥಿತಿಯುಂಟಾಗಿ ಬಹಳ ದುಃಖಕ್ಕೆ ಈಡಾದರು. ಬಲ್ಲ ವೈದ್ಯರಲ್ಲಿ ತೋರಿಸಲು ಮಿರ್ಜಿಪಟ್ಟಣಕ್ಕೆ ಕರೆದೊಯ್ದು ಯೋಗ್ಯ ಚಿಕಿತ್ಸೆ ಮಾಡಿಸಿರೆಂದು ಸೂಚಿಸಿದರು. ಇದ್ದ ಮಗನಿಗೆ ಯಾವ ಜನ್ಮದ ಪಾಪದ ಫಲವೋ ಏನೋ ಇಂತಹ ಕಠಿಣ ತರವಾದ ಜಾಡ್ಯ ಬಂ ದೊ ದ ಗಿ ತೆಂ ದು ತಂದೆಯಾದ ಪಂಪಾಪತಿಯು ಚಿಂ ತೆ ಯ ಲ್ಲಿ ಮುಳುಗಿದನು. ಈ ಸಮಯದಲ್ಲಿ ಸಿಂಧನೂರಿನ ಶರಣ ಬಾದರ್ಲಿ ವೆಂಕಟಗೌಡರ ಮನೆಗೆ ಅವರ ಬಿನ್ನಹದ ಮೇರೆಗೆ ವಳಬಳ್ಳಾರಿ ತಾತನವರು ಆಗಮಿಸಿದ್ದರು. ಈ ಸುದ್ದಿಯನ್ನು ತಿಳಿದ ಪಂಪಾಪತಿಯು ತನ್ನ ಮಗ ವೆಂಕಣ್ಣನನ್ನು ಸಿಂಧನೂರಿಗೆ ಕರೆದೊಯ್ದು ತಾತನವರ ಪಾದಕ್ಕೆ ಹಾಕಿ ತನ್ನ ದುಃಖದಿಂದ ಎಲ್ಲಾ ವಿವರಿಸಿ ಆತ್ಮ ನಿವೇದನೆ ಮಾಡಿದನು. ಗೌಡರ ಮನೆಯಲ್ಲಿ ವರಗಣಾರಾಧನೆಯ ನಂತರ ಶ್ರೀಗಳು ಪಂ ಪಾ ಪ ತಿ ಯ ಮಗನನ್ನು ಮುಟ್ಟಿ ಮೈದಡವಿ ಕರುಣಾದೃಷ್ಟಿ ಬೀರಿ ಅಡವೀ

ಅಮರೇಶ್ವರನ ಕ್ಷೇತ್ರದಲ್ಲಿ ನಾಲ್ವತ್ತೊಂದು ದಿನಗಳು ಶ್ರದ್ಧೆಯಿಂದ ಪೂಜೆ ಮಾಡಿರೆಂದು ಹಾಗೆ ಮಾಡಿದಾಗ್ಗೆ ಅಮರೇಶ್ವನು ನಿಮಗೆ ಒಲಿದು ರೋಗ ಪರಿಹಾರವಾಗುವುದೆಂದು ಇದಕ್ಕೆ ಸಂಶಯ ಬೇಡವೆಂದು ಆಶೀರ್ವದಿಸಿ ಕಳುಹಿಸಿ ಕೊಡುವಾಗ್ಗೆ, ಜೊತೆಯಲಿದ್ದ ಹಾಲ್ವಿ ಶ್ರೀಗಳು ಸಹಾ ತಡಮಾಡದೆ ಅಂದೇ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಹೋಗಿರೆಂದು ಸಾಂತ್ವನಗೊಳಿಸಿ ಕಳುಹಿಸಿಕೊಟ್ಟರು. ತಮ್ಮ ಗ್ರಾಮಕ್ಕೆ ಬಂದ ತಂದೆ ಮಗನು ತಮಗೆ ಬೇಕಾದ ಸಾಮಾನು ಸಾಮಗ್ರಿಗಳನ್ನು ತೆಗೆದುಕೊಂಡು ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಹೋದರು.

ಒಮ್ಮನದಿಂದ ತಂದೆ ಮಗನೂ ನಿಷ್ಠಾ ಭಕ್ತಿಯಿಂದ ನಾಲ್ವತ್ತೊಂದು ದಿನಗಳ ವರೆವಿಗೂ ವಿಧ್ಯುಕ್ತವಾಗಿ ತಾತನವರು ಹೇಳಿದ ಪ್ರಕಾರ ಅಮರೇಶ್ವರ ಲಿಂಗಕ್ಕೆ ನಡೆದು ಕೊಂಡು ಪೂಜೆ ಸಲ್ಲಿಸಿದಾಗ್ಗೆ ವೆಂಕಣ್ಣನಿಗೆ ಬಂದಿದ್ದ ಜಾಡ್ಯ ಹೋಗಿ ಸ್ಮೃತಿಯು ಬಂದು ಹೊಸಜನ್ಮ ಪಡೆದನು. ಇದೆಲ್ಲಾ ವಳಬಳ್ಳಾರಿ ಶ್ರೀಗಳ ಕೃಪೆಯೆಂದು ಅನನ್ಯ ಭಕ್ತಿಯಿಂದ ತಂದೆ ಮಗನು ತಾತನವರನ್ನು ನೆನೆದುಕೊಳ್ಳುತ್ತಾ, ಭವರೋಗ ವೈದ್ಯ ಅನಿಮಿತ್ತ ಬಂಧುವೂ ಹಾಗೂ ತಾತನೇ ಪರಮಾತ್ಮನೆಂದು ತಿಳಿದು ಶ್ರೀ ಕ್ಷೇತ್ರದೊಡೆಯನಿಗೆ ಮಹಾರುದ್ರಾಭಿಷೇಕ ಮಾಡಿಸಿ ನಂತರ ತಾತನವರಲ್ಲಿಗೆ ಬಂದು ನಡೆದ ವಿಷಯ ತಿಳಿಸಿದರು. ಹಾಗು ತಮ್ಮ ಊರಿಗೆ ಬಂದು ಭಕ್ತರನ್ನು ಹರಸಬೇಕೆಂದಾಗ್ಗೆ ಅದಕ್ಕೆ ಒಪ್ಪಿ ಶ್ರೀ ತಾತನವರು ಹೊಸಳ್ಳಿ ಗ್ರಾಮಕ್ಕೆ ಬಂದು ಗಣಾರಾಧನೆಯ ಕಾರ್ಯ ನೆರವೇರಿಸಿ ಆ ಸಮಯದಲ್ಲಿ ಪಂಪಾಪತಿಯು ೧೦೧ ರೂಪಾಯಿಗಳು ಕಾಣಿಕೆ ಸಲ್ಲಿಸಲು ಅದನ್ನು ಶ್ರೀ ತಾತನವರು ಮುಟ್ಟದೆ ಅಡವಿ ಅಮರೇಶ್ವರನ ಕಟ್ಟಡಕ್ಕಾಗಿ ಸಲ್ಲಿಸಿರೆಂದು ಹೇಳಿ ಧಣಿಯ ಧನವನು ಧರ್ಮಕ್ಕಾಗಿಯೆ ಸಲ್ಲಿದರೆ ಅದುವೆ ಧನ್ಯಜಗದೊಳೆಂದು ಹೇಳಿ ಹರಸಿ ತಮ್ಮ ಮಠಕ್ಕೆ ಹಿಂತಿರುಗಿದರು.

ಇತ್ತ ಕೆಲದಿನಗಳು ಕಳೆದ ನಂತರ ಒಟ್ಟನಲ್ಲಿ ವೆಂಕಣ್ಣನ ಸಂಸಾರದಲ್ಲಿ ಸುಖಿಸುತ್ತಾ ಒಬ್ಬ ಪುತ್ರನನ್ನು ಪಡೆದು ಅತ್ತೆಮಾವರು ಸೊಸೆಯನ್ನು ಪ್ರೀತಿಸಿ ಮೊಮ್ಮಗನನ್ನು ಸಂತೋಷದಿಂದ ಎತ್ತಿ ಆಡಿಸುವ ಸೌಭಾಗ್ಯವನ್ನು ಶ್ರೀ ವಳಬಳ್ಳಾರಿ ತಾತನವರಿಂದ ಪಡೆದು ಸುಖಶಾಂತಿಗಳಿಂದ ಬಾಳಿದರು.

## (ಪ್ರಸಂಗ-೨)

### (ಧನಿಕನ ಕ್ಷಯರೋಗ-ನಿವಾರಣೆ)

ಜಗತ್ತಿನಲ್ಲಿ ಅತಿಭಯಂಕರವಾದ ರೋಗಗಳಾದ ಕ್ಷಯವು, ಕ್ಯಾನ್ಸರ್ ಕುಷ್ಠ ಇತ್ಯಾದಿ ರೋಗಗಳು ಸಮಾಜದ ಜನತೆಗೆ ಪೀಡಿಸುವುದನ್ನು, ತಪ್ಪಿಸಲು ಧನ

ಸರ್ಕಾರದವರು ಬಹಳಷ್ಟು ಶ್ರಮಿಸಿದರೂ ವಿಜ್ಞಾನದ ಪ್ರಗತಿಯಿಂದ ಸೌಕರ್ಯಗಳಿದ್ದರೂ ಈ ಬೇನೆಗಳು ಶ್ರೀಮಂತ ವ್ಯಾಧಿಗಳೆ ವಿನಃ ಬಡವರ ಬೇನೆಗಳಲ್ಲ. ಅದೇನೇ ಇದ್ದರೂ ಇಂಥಹ ಬೇನೆಗಳು ಬಡವ ಬಲ್ಲಿದನೆಂಬ ತರತಮ ಭಾವವನ್ನು ತೋರದೆ ಎಲ್ಲರನ್ನು ಕಾಡುತ್ತಿದ್ದವು. ಇಂಥಹ ಸನ್ನಿವೇಶದಲ್ಲಿ ಮಾನ್ವಿ ತಾಲೂಕಿನ ಭಾನದ ಅಮರಾವತಿಯ ಗ್ರಾಮದ ಸಿದ್ಧರಾಮಪ್ಪನೆಂಬ ಧನಿಕನಿಗೆ ಹೀನ ದೆಶೆಯಿಂದ ಕ್ಷಯ ರೋಗ ಪ್ರಾಪ್ತವಾಗಿ ಅನೇಕ ವಿಧದಿಂದ ಕಾಡುತ್ತಿತ್ತು. ಶ್ರೀಮಂತಿಕೆಯ ದುಡ್ಡು ಚಿಕಿತ್ಸೆಗಾಗಿ ಕರಗಿ ಕ್ಷಯರೋಗವು ಉಲ್ಬಣಿಸಿ, ಹೆಚ್ಚಾಗಿ ಧನಿಕನ ಧೈರ್ಯ ಕುಗ್ಗಿಸಿದಾಗ್ಗೆ ನೋಡಲಿಕೆ ಬಂದ ಆತ್ಮೀಯ ಬಂಧುಗಳು ಹಾಗು ಮಿತ್ರರ ಸಲಹೆಯಂತೆ ವಳಬಳ್ಳಾರಿ ತಾತನವರ ಮೊರೆಹೊಕ್ಕರು. ಮೊರೆ ಹೋಗುವ ಸಮಯಕ್ಕೆ ಮುನ್ನಾ ದಿನವೇ ಸಿದ್ಧರಾಮಪ್ಪ ಧಣಿಯು ಕನಸಿನಲ್ಲಿ ವಳಬಳ್ಳಾರಿ ಶ್ರೀಗಳ ದರ್ಶನವಾಗಲು ಅದು ಶುಭ ಸೂಚಕವೆಂದು ಭಾವಿಸಿ ವಳಬಳ್ಳಾರಿ ಮಠಕ್ಕೆ ಬಂದರು. ಇದೆಲ್ಲವನ್ನು ಅರಿತ ಶ್ರೀಗಳು ಸಿದ್ಧರಾಮಪ್ಪ ಧಣಿಗೆ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಹೋಗಿ ಸುಮಾರು ಎರಡೂವರೆ ತಿಂಗಳು ಅಲ್ಲೇ ಇದ್ದು ಪೂಜೆ ಮಾಡಲಿಕ್ಕೆ ಹೇಳಿದರು. ಹಾಗೆ ಮಾಡಿದರೆ ಕ್ಷಯರೋಗ ಜೊತೆಗೆ ಬಂದ ಬುದ್ಧಿಭ್ರಮಣೆಯು ಸಹಾ ಹೋಗುವುದಾಗಿ ಹೇಳಿ ಕಳುಹಿಸಿಕೊಟ್ಟರು.

ಶ್ರೀ ತಾತನವರ ಅಪ್ಪಣೆಯಂತೆ ಸಿದ್ಧರಾಮಪ್ಪನು ತನ್ನ ಮನೆಯವರ ಸಂಗಡ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಬಂದು ಭಕ್ತಿನಿಷ್ಠೆಗಳಿಂದ ಪೂಜೆ ಮಾಡಿ ನಾಲ್ವತ್ತೊಂದು ದಿನಗಳು ಕಳೆಯಲು ಬುದ್ಧಿಭ್ರಮಣೆಯ ಜೊತೆಗೆ ಕ್ಷಯರೋಗವು ಮಾಯವಾಗಿ ಹೊಸಜನ್ಮ ಪಡೆದವನಂತೆ ಹರುಷಿತಗೊಂಡನು. ದಾನ, ಜಪ, ಹೋಮ ಸಿದ್ಧಔಷಧಗಳಿಗೆ ಹೋಗದೆಯಿರುವ ಭಯಂಕರ ರೋಗ ನಿವಾರಣೆ ಶ್ರೀ ತಾತನವರಿಂದ ಹೋದುದಕ್ಕೆ ಹಿಗ್ಗುತ್ತಾ ಶ್ರೀ ತಾತನವರು ಸಾಕ್ಷಾತ್ ಪರಶಿವನೆಂದು ತಿಳಿಯುತ್ತಾ ಕ್ಷೇತ್ರದ ಲಿಂಗದ ಮಹಿಮೆಗೆ ಭಕ್ತಿ ಹೆಚ್ಚಿಸಿ ನಿಷ್ಠೆತೋರಿಸಿ ಈ ಎಲ್ಲಾ ವಿಷಯವನ್ನು ವಳಬಳ್ಳಾರಿಗೆ ಬಂದು ತಾತನವರಿಗೆ ಹೇಳಿದನು. ಧನಿಕನಾ ಹೊಗಳಿಕೆಗೆ ಹಿಗ್ಗದೆ ಅದೆಲ್ಲಾ ಶಿವನಕೃಪೆಯೆಂದು ಹೇಳಿದರು. ಶ್ರೀಗಳವರಿಗೆ ತನ್ನ ಭಕ್ತಿ ಕಾಣಿಕೆಗಾಗಿ ನಾಲ್ಕುವರೆ ಎಕರೆ ಭೂಮಿಯನ್ನು ದಾನಕೊಡುವುದಾಗಿ ಹೇಳಿದಾಗ್ಗೆ ತಮ್ಮ ಮಠಕ್ಕೆ ಸೇರಿದ ಭೂಮಿಗಳನ್ನು ನೋಡಿಕೊಳ್ಳುವುದೇ ಸಾಕು, ತಮಗೆ ಆಸೆ, ಆಮಿಷಗಳಿಲ್ಲವೆಂದು ಇದ್ದುದರಲ್ಲಿಯೇ ತ್ರಿವಿಧ ದಾಸೋಹತ್ವವನ್ನು ನಡೆಸುವುದಾಗಿ ಹೇಳಿದರು. ಆಗ ಧನಿಕನು ಸಂತನಾದ ವಿನೋಬಾ ಭಾವೆಯವರ ಭೂದಾನ ಕಾರ್ಯ ನೆನಪಿಸಿ ಸಮಾಜ ಕಲ್ಯಾಣದ ಕಾರ್ಯಕ್ಕಾಗಿ ಉಪಯೋಗಿಸಿರೆಂದು ತಾತನವರನ್ನು ಒಪ್ಪಿಸಿ ತನ್ನ ನಾಲ್ಕುವರೆ ಎಕರೆ ಜಮೀನನ್ನು ತಾತನವರಿಗೆ ಭಕ್ತಿ ಕಾಣಿಕೆಯಾಗಿ ಸಲ್ಲಿಸಿದರು. ನಂತರ ಸಿದ್ಧರಾಮಪ್ಪ ಧನಿಕನು ಸುಖ ಸಂಸಾರದಲ್ಲಿದ್ದು ಕಾಲ ಕಳೆದನು.

## (ಪ್ರಸಂಗ-೩)

### (ಭಕ್ತನ ಅಂಧತ್ವ ಕಳೆದು ದೃಷ್ಟಿಯನ್ನು ಕರುಣಿಸಿದ್ದು)

ಜಗತ್ತಿನಲ್ಲಿ ಅಂಧತ್ವವು ಮೂರು ವಿಧವಾಗಿವೆ. ಹುಟ್ಟು ಕುರುಡರು, ಕೆಟ್ಟು ಕುರುಡರು, ಹಾಗೂ ಕಣ್ಣಿದ್ದ ಕುರುಡರು. ಹುಟ್ಟು ಕುರುಡರ ಕೆಟ್ಟು ಕುರುಡರ ದೃಷ್ಟಿ ನೆಟ್ಟಗೆ ಮಾಡಬಹುದು. ಕಣ್ಣಿದ್ದ ಕುರುಡರ ಅಂಧತ್ವ ಕಳೆಯಲು ಅತಿಕಷ್ಟಕರವಾದದ್ದು, ಜಗದೊಳು ಅತಿಕಾಮಿಗಳಾಗಿ, ಕಂಗೆಟ್ಟವರಾಗಿ ಅನಂತ ದುಃಖದಲ್ಲಿ ತನ್ನ ಜೀವನ ಪರ್ಯಾವಸಾನ ಮಾಡಿಕೊಳ್ಳುವರು.

ಕೊಟ್ನೆಕಲ್ಲು ಗ್ರಾಮದ ಶಿವಕಾಂತಪ್ಪನೆಂಬ ಭಕ್ತನು ತನ್ನ ಎರಡೂ ಕಣ್ಣಿಗಳ ದೃಷ್ಟಿ ಹೋಗಿ ಅಂಧಕಾರದಲ್ಲಿರುವಾಗ್ಗೆ ಅನೇಕ ಹಳ್ಳಿ, ಬೆಂಗಳೂರಿನಂತಹ ದೊಡ್ಡ ನಗರಕ್ಕೆ ಹೋಗಿ ವೈದ್ಯಕೀಯ ಚಿಕಿತ್ಸೆ ಮಾಡಿಸಿಕೊಂಡರೂ ಫಲವು ಕೊಡದೆ ನಿಷ್ಪ್ರಯೋಜಕವಾದವು. ಆರು ಪ್ರಯತ್ನಗಳು ಮುಗಿದು ಏಳನೇ ಯತ್ನವಾದ ಗುರು ಸೇವೆಯಂತೆ ಶ್ರೀ ವಳಬಳ್ಳಾರಿ ತಾತನವರ ಮೊರೆಹೊಕ್ಕನು. (ಷಡ್ಬಿರ್ ಮನುಷ್ಯ ಯತ್ನಾನಿ ಸಪ್ತಮಂ ದೈವಚಿಂತನಂ)

ನೀತಿಸೂಕ್ತಿ :- ೧) ಉದ್ಯಮ, ೨) ಸಾಹಸ, ೩) ಧೈರ್ಯ ೪) ಬುದ್ಧಿ ೫) ಶಕ್ತಿ ೬) ಪರಾಕ್ರಮ ೭) ದೈವಯತ್ನ.

ಆಗ ಶ್ರೀಗಳು ತಮ್ಮ ಯೋಗ ದೃಷ್ಟಿಯಿಂದ ಪರಿಕಿಸಿ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಹೋಗಿ ಭೂಲೋಕದ ಮುಕ್ಕಣ್ಣನಂತಿರುವ ಅಡವಿ ಅಮರೇಶ್ವರನು ದೃಷ್ಟಿಯನ್ನು ಕರುಣಿಸುವನೆಂದು ಮೂರು ತಿಂಗಳು ಎಡೆಬಿಡದೆ ಪೂಜೆ ಮಾಡೆಂದು ಹೇಳಿ ಹರಸಿ ಕಳುಹಿಸಿಕೊಟ್ಟರು.

ಶ್ರೀ ತಾತನವರ ಆಜ್ಞೆಯಂತೆಯೇ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಹೋಗಿ ಶಿವಕಾಂತಪ್ಪನು ಮೂರು ತಿಂಗಳು ಅಲ್ಲೇ ಇದ್ದು ಸಕ್ರಮದಲ್ಲಿ ಚಾರು ಲಿಂಗದ ಪೂಜೆ ಮಾಡಲು ಪರಮ ಪವಿತ್ರವಾದ ಲಿಂಗಗತ ಶಕ್ತಿಯ ಕಿರಣವು ಶಿವಕಾಂತಪ್ಪನ ಕಣ್ಣಿಗಳಲ್ಲಿ ಸೇರಿ ಅಂಧತ್ವವನ್ನು ಕಳೆದು ದೃಷ್ಟಿ ಬಂದಿತು. ಈ ಕಾರಣಕ್ಕಾಗಿ ಶಿವಕಾಂತಪ್ಪನು ಶ್ರೀ ತಾತನವರಲ್ಲಿಗೆ ಬಂದು ವಿಷಯ ತಿಳಿಸಿ ತ್ಯಾಗ ಬುದ್ಧಿಯಿಂದ ಎಂಟು ಎಕರೆ ಭೂಮಿಯನ್ನು ಶ್ರೀಗಳಿಗೆ ಕಾಣಿಕೆಯಾಗಿ ಅರ್ಪಿಸಿ ಧನ್ಯನಾದನು.

## (ಪ್ರಸಂಗ-೪)

### ಸಂಸ್ಮರಣೆ. ಗುರು ಶಿಷ್ಯರ ಮನಸ್ತಾಪ ಹೋಗಲಾಡಿಸುವಿಕೆ

ನದಿಚಾಗಿಯಲ್ಲಿನ ಲಿಂಗಣ್ಣನೆಂಬ ಭಕ್ತನು ತನ್ನ ಮಕ್ಕಳು ಸತ್ತ ನೆಪ ಹೂಡಿ ಊರಿನ ಮಠದ ಗುರುಗಳನ್ನು ಕರೆಯುವುದು ಬಿಟ್ಟು ಹಬ್ಬ ಹುಣ್ಣಿಮೆಗೆ ಗುರುಗಳಿಲ್ಲದೆಯೆ ಆಚರಿಸಿ ಗುರುಭಕ್ತಿಗೆ ವಂಚಕನಾಗಿದ್ದನು. ಪ್ರತಿ ವರ್ಷ ಪದ್ಧತಿಯಂತೆ ಶಿವರಾತ್ರಿಗೆ ಗುರುಗಣಾರಾಧನೆ ಮಾಡದೆ ನಿಲ್ಲಿಸಿ ಉದಾಶೀನ ಭಾವದಲ್ಲಿದ್ದನು. ಶ್ರೀಗಳು ಲಿಂಗಣ್ಣನನ್ನು ಕರೆಸಿ ಸನ್ಮಾರ್ಗಕ್ಕೆ ಹಚ್ಚಿ ಗುರುಭಕ್ತನ ಮನಸ್ತಾಪ ದೂರಮಾಡಿದ ಸವಾಡವನ್ನು ಶ್ರೀಗಳು ವಳಬಳ್ಳಾರಿಯಿಂದ ನದಿಚಾಗಿಗೆ ಬಂದಾಗ ಪೂರ್ವದ ಸಂಸ್ಮರಣೆ ಮಾಡಿಕೊಂಡು ಆನಂದಿಸಿದರು.

## (ಪ್ರಸಂಗ-೫)

ಆಲಬನೂರಿನ ಗ್ರಾಮಕ್ಕೆ ಬಂದ ಮಾರಿಕಾಂಬೆಯ ಮುನಿಸನ್ನು ಶ್ರೀಗಳು ಕಳೆದುದು.

ವಿಳಂಬಿ ನಾಮ ಸಂವತ್ಸರ (೧೯೫೮) ದಲ್ಲಿ ಆಲಬನೂರು ಗ್ರಾಮಕ್ಕೆ ದೇಶ ಸಂಚಾರಿಯಾಗಿ ಓರ್ವ ಸಾಧು ಪುರುಷರು ಬಂದು ಈ ಊರಿಗೆ ಮಾರಿಕಾಂಬೆಯ ಹಾವಳಿ ಇದೆ. ಅದಕ್ಕೆ ಮುನ್ನವೆ ಎಚ್ಚರದಿಂದ ಸಪ್ತ ಭಜನೆ ಮಾಡಿ ಪ್ರಸನ್ನಮಾಡಿ ಸಂತುಷ್ಟಿಗೊಳಿಸಿರೆಂದು ಭವಿಷ್ಯ ನುಡಿದು ತನ್ನ ಪಾಡಿಗೆ ತಾನು ಹೊರಟುಹೋಗುವನು.

ಭಕ್ತರೆಲ್ಲರೂ ಸೇರಿ ತಮ್ಮ ಊರಿನ ಬಸವಲಿಂಗ ಶಾಸ್ತ್ರಿಗಳಲ್ಲಿಗೆ ಹೋಗಿ ವಿಷಯ ತಿಳಿಸಿ ಸಪ್ತಭಜನೆಯನ್ನು ಪರಮ ಪಂಚಾಕ್ಷರಿಯ ಮಂತ್ರದಿಂದ ಮಾಡುವೆವು ಎಂದು ತಿಳಿಸಿದರು. ಅದಕ್ಕೆ ಶಾಸ್ತ್ರಿಗಳು ವಳಬಳ್ಳಾರಿ ಶ್ರೀ ತಾತನವರಲ್ಲಿಗೆ ಹೋಗಿ ವಿಷಯ ತಿಳಿಸಿ ಅವರ ಅಪ್ಪಣೆ ಕೇಳಿ ಬರುವುದಾಗಿ ಹೇಳಿ ತಾತನವರಲ್ಲಿಗೆ ಬಂದು ಶಾಸ್ತ್ರಿಗಳು ವಿಷಯ ತಿಳಿಸಿದರು.

ಪರಮ ಪತಿವ್ರತೆಗೆ ತನ್ನ ಗಂಡನ ಹೆಸರನ್ನು ಹಗಲೆಲ್ಲ ಹೇಳಿಕೊಂಡು ತಿರುಗುವುದಿಲ್ಲ. ಶರಣಸತಿ ಲಿಂಗಪತಿಯ ಹೆಸರನ್ನು ಶಿವಮಂತ್ರ ಪೂರ್ವಕವಾಗಿ ಗೋಪ್ಯದಲ್ಲಿ ಹೇಳುವ ಪದ್ಧತಿಯು ರೂಢಿಯೊಳಗಿದೆ. ಹೊರಗೆ ಉಚ್ಚರಿಸಿ, ಹಣೆಬಡಿಸಿಕೊಂಡು ಅಜಗಣ್ಣ ಶರಣನು ಪ್ರಾಣವಾಯುವು ಆತನನ್ನೇ ಬಿಟ್ಟು ಹೊರಟುಹೋಯಿತು. ಈ ವಿಷಯ ತಿಳಿಸಿ ಸಪ್ತ ಭಜನೆಯ ಬದಲು ಶಿವಾನುಭವ ಸಾಪ್ತಾಹ ಮಾಡಿರೆಂದು ಹೇಳಿ ಕಳುಹಿಸಿದರು. ಅದರಂತೆ ಶಿವಾನುಭವ ಸಾಪ್ತಾಹಕ್ಕೆ ಸನ್ನಾಹ ಮಾಡಿಕೊಂಡು ಆಲಬನೂರಿನ ಭಕ್ತರು ಶ್ರೀ ತಾತನವರ ದಿವ್ಯನೇತೃತ್ವದಲ್ಲಿ ಶ್ರೀ ವೀರಭದ್ರೇಶ್ವರನ ದೈವಾಲಯದಲ್ಲಿ ಪಂಡಿತರು ಗಾಯಕರು ಸೇರಿ ಸಡಗರದಿ ಪ್ರವಚನಗಳು ಸಾಗಿರುವಾಗ

ಗಾಳಿ ಹೆಚ್ಚು ಬೀಸಿ, ಸೀಮೆ ಎಣ್ಣೆ ದೀಪವು ಮಂಟಪಕ್ಕೆ ಬಡಿದು ಒಡನೆ ಉರಿಹತ್ತಿ ಮಾರಿಮುನಿದೆದ್ದು ಅಗ್ನಿ ರೂಪದಿ ಬಂದಳೋ ಎನ್ನುವಂತೆ ಮಂಟಪವು ಸುಡುತ್ತಾ ಇರುವಾಗ್ಗೆ ಶ್ರೀ ತಾತನವರು ಅಚಲದೆ ಕುಳಿತಿದ್ದರೂ ಸೇರಿದ ಭಕ್ತಜನ ಚಲ್ಲಾಪಿಲ್ಲಿ ಯಾಗಿ ಚದುರಿದರು. ತಾತನವರು ಕೂತ ಸ್ಥಳಬಿಟ್ಟು ಉಳಿದೆಲ್ಲಾ ಮಂಟಪ ಉರಿದು ಕರುಕಾಗಿ ಬಿದ್ದಿತು.

ಇದೇನು ಭಕ್ತಿಯ ಕೊರತೆ ಶಿವಶಿವಾಯೆಂದ ಶ್ರೀ ತಾತನವರು ಶಿವನನ್ನು ಧ್ಯಾನಿಸುತ್ತಾ ಒಳ್ಳೇ ಕಾರ್ಯಕ್ಕೆ ವಿಘ್ನಗಳು ಬರುವುದು ಸಹಜ. ಅದಕ್ಕೆ ಧೈರ್ಯ ಗುಂದದೆ ವೀರಭದ್ರ ದೇವರ ಜೊತೆಗೆ ಬಸವಣ್ಣನಿಗೆ ಅಭಿಷೇಕ ಮಾಡಿಸಿ ಪುನಃ ಶಿವಾನುಭವದ ಮಂಟಪ ನೂತನವಾಗಿ ಮಾಡಿ ಕಾರ್ಯಮುಗಿಸಬೇಕೆಂದು ಶ್ರೀಗಳು ಅಪ್ಪಣೆ ಕೊಡಲು ಅಲಬನೂರಿನ ಭಕ್ತರ ಜೊತೆಗೆ ನೆರೆಹಳ್ಳಿ ಜನರೆಲ್ಲಾ ಸೇರಿ ಅಭಿಷೇಕ ಮಾಡಿಸಿ ನೂತನ ಶಿವಾನುಭವ ಮಂಟಪ ನಿರ್ಮಾಣ ಮಾಡಿ ಶಿವಾನು ಭಾವದ ಮಹತ್ ಕಾರ್ಯಕ್ರಮಗಳನ್ನು ಶ್ರೀ ತಾತನವರ ದಿವ್ಯ ಕೃಪೆಯಲ್ಲಿ ಮಾಡಿ ಮುಗಿಸಿದರು. ವಿಳಂಬಿನಾಮ ಸಂವತ್ಸರದ ವೈಶಾಖ ಮಾಸದ ಶುದ್ಧದ ದಶಮಿ ದಿನಗಳಲ್ಲಿ ಶಿವಾನುಭಾವ ಸಪ್ತಾಹ ಕಾರ್ಯವನ್ನು ಕವಿ, ಗಮಕಿ, ಪಂಡಿತರ ಜೊತೆಯಲ್ಲಿ ಗಾಯನ ಕಲಾಕೋವಿದರನ್ನು ಕೂಡ್ರಿಸಿಕೊಂಡು ಶ್ರೀಗಳ ಕೃಪೆಯಲ್ಲಿ ಎಲ್ಲಾ ಕಾರ್ಯಗಳು ಸಾಂಗವಾಗಿ ನೆರವೇರಿದವು. ಇದರಿಂದ ಮಾರಿಕಾಂಬೆಯು ಶಾಂತಳಾಗಿ ದಯಾಮಯಿಯೆಂಬುದಕ್ಕೆ ಸಾರ್ಥಕತೆ ಪಡೆದು ಗಣತೃಪ್ತಿಯೊಡನೆ ವೆಂಕಟರಾಯ ಭಕ್ತನು ಭೂರಿ ದಕ್ಷಿಣೆಕೊಟ್ಟು ಸರ್ವದೈವದ ಭಕ್ತರ ಜೊತೆಗೆ ಶ್ರೀಗಳ ಕೃಪೆಗೆ ಪಾತ್ರರಾದರು.

## (ಪ್ರಸಂಗ-೭)

### ಮದುವೆ ಭಂಡಿಗಳಿಗೆ ಮಳೆಯು ಸೋಂಕದೆ ಮಳೆ ಬರಿಸಿದ್ದು

ಅಲಬನೂರಿನಲ್ಲಿ ನಡೆದ ಶಿವಾನುಭವ ಪ್ರವಚನ ಕಾರ್ಯಕ್ರಮಗಳಿಗೆ ಮಗಳ ಮದುವೆಯ ಕೆಲಸದಲ್ಲಿ ನಿರತನಾಗಿದ್ದ ಆ ಊರಿನ ಬಡಿಗಾರ ಈಶ್ವರಪ್ಪನು ಶ್ರೀಗಳಲ್ಲಿ ಬಂದು ತನ್ನ ಅಸಹಾಯಕತೆಯನ್ನು ತೋಡಿಕೊಂಡು ತಪ್ಪನ್ನು ಮನ್ನಿಸಲೆಂದು ಕೇಳಲು ಪ್ರತಿಯೊಬ್ಬ ತಂದೆಯು ಮಾಡುವ ಕೆಲಸವೆ ಮಾಡಿದ್ದೀಯ, ಮೊದಲು ಲೌಕಿಕ ನಂತರ ಪಾರಮಾರ್ಥಿಕವೆಂದು ಹೇಳುತ್ತಾ ಮದುವೆ ಕಾರ್ಯವನ್ನು ಚಂದವಾಗಿ ಮಾಡಿರೆಂದು ಹರಸಿ ಕಳುಹಿಸಿದರು. ಮದುವೆಯ ಭಂಡಿಗಳು ಸಿದ್ಧಾಪುರದಲ್ಲಿ ನಡೆಯುವ ಮದುವೆಯ ಕಾರ್ಯಕ್ಕಾಗಿ ಬಂಧು ಬಾಂಧವರ ಜೊತೆಯಲ್ಲಿ ಮುಂದೆ ಸಾಗಿರಲು ಒಂದುಗಾವುದ ದೂರ ಹೋದಾಗ್ಗೆ ಮುಗಿಲಲ್ಲಿ

ಕಾರ್ಮೋಡಗಳು ಕವಿದು ಕೋಲ್ಮಿಂಚು ಜೊತೆಗೆ ಗುಡುಗಿನಿಂದ ಭೋರ್ಗರೆವ ಮಳೆ ಬಂದರೂ ಆ ಭಂಡಿಗಳು ಸಿದ್ಧಾಪುರ ಗ್ರಾಮಕ್ಕೆ ಮುಟ್ಟುವ ತನಕ ಮಳೆ ರಾಯನು ಭಂಡಿಯ ಸುತ್ತಾ ಬೀಳದೆ ಅತ್ತಇತ್ತ ಬಂದು ವರುಣನ ಕೃಪೆ ಶ್ರೀಗಳ ಕೃಪೆಯಲ್ಲಿ ಸಾಮರಸ್ಯ ಹೊಂದಿ ಮದುವೆಯ ಜನರಿಗೆ ಯಾವ ತೊಂದರೆಯೂ ಆಗದೆ ಸಾಂಗದಲ್ಲಿ ನೆರವೇರಿದ ಮದುವೆಯ ವಿಷಯವನ್ನು ಶ್ರೀಗಳಿಗೆ ಈಶ್ವರಪ್ಪನು ಬಂದು ಹೇಳಲು ಅದೆಲ್ಲಾ ಈಶನ ಕೃಪೆಯೆಂದು ಹೇಳಿ ಆಶೀರ್ವದಿಸಿ ಕಳುಹಿಸಿಕೊಟ್ಟರು.

(ಪ್ರಸಂಗ–೭)

### ಬಂಜೆಯ ಕೊರಗು ನೀಗಿಸಿ ಮಕ್ಕಳಾಗ್ವಂತೆ ಹರಸಿ–ಕರುಣಿಸಿದುದು

ಹೆಣ್ಣಿಗೆ ಜಗತ್ತಿನ ಭೋಗಭಾಗ್ಯಗಳ ಜೊತೆಗೆ ರತ್ನಾಭರಣಗಳ ಅಲಂಕಾರ ವಿದ್ದರೂ ತಾಯ್ತನ ಪ್ರಾಪ್ತವಾಗದೆ ಇದ್ದರೆ ಸುಖಜೀವನವಾಗದೆ ಬಂಜೆಯ ಬಾಳ್ವೆಯು ದುಃಖಮಯವಾಗುವುದು. ಬಳ್ಳಾರಿ ಜಿಲ್ಲೆ ಸಿರುಗುಪ್ಪ ತಾಲ್ಲೂಕು ನಾಗರಹಾಳು ಗ್ರಾಮವೆಂದರೆ ಶ್ರೀ ದೊಡ್ಡಯ್ಯ ಶಾಸ್ತ್ರಿಗಳಿರುವ ಊರೆಂದು ಪ್ರಸಿದ್ಧತೆಯಿಂದ ಹೆಸ ರಾದ ನಾಗರಹಾಳು ! ಆ ಊರಿನ ಶ್ರೀ ನಾ ಮ ದೊಡ್ಡಯ್ಯ ಶಾಸ್ತ್ರಿಗಳವರ ಶಿಷ್ಯ ಲಿಂಗನಗೌಡರು ಮತ್ತು ಅವರ ಧರ್ಮಪತ್ನಿಯಾದ ವೀರಮಾಂಬೆಯೆಂಬ ಈರ್ವ ಶರಣ ದಂಪತಿಗಳಿಗೆ ನಾಗರೆಡ್ಡಿಯೆಂಬ ಓರ್ವನೇ ಮಗನಿದ್ದನು. ಈತನಿಗೆ ಪಾರ್ವತಮ್ಮ ಎಂಬ ಹೆಂಡತಿ ಇದ್ದಳು. ಲೋಕದ ಹೆಣ್ಣಗಳಂತೆ ಈತನ ಸತಿಯು ತಾಯ್ತನ ಪಡೆಯದೆ ಮಕ್ಕಳಾಗದೆ ಇರಲು, ಮೊಮ್ಮಕ್ಕಳನ್ನು ಕಾಣುವ ಭಾಗ್ಯ ಅತ್ತೆ ಮಾವನವರಿಗಿಲ್ಲದಾಗಿರಲು ಕೊರಗಿ ಲೋಕಾಪವಾದಕ್ಕೆ ಗುರಿಯಾಗಿರುವ ಸತಿ ಸಾಧ್ವಿ ಪಾರ್ವತಮ್ಮನನ್ನು ಗಂಡನಾದ ನಾಗರೆಡ್ಡಿಯು ಸಾಂತ್ವನ ಶಕ್ತಿಯಿಂದ ಸಮಾಧಾನ ಹೇಳಿ ಹರನ ಕರುಣೋದಯಕ್ಕೆ ಕಾಯಬೇಕೆಂದು ಶಿವನಲ್ಲಿ ಮೊರೆಯಿಟ್ಟನು. ಊರಿನ ಮಠದ ಗುರುಗಳಾದ ಶ್ರೀ ದೊಡ್ಡಯ್ಯ ಶಾಸ್ತ್ರಿಗಳಲ್ಲಿಗೆ ಹೋಗಿ ತಾಯಿ ವೀರ ಮಾಂಬೆಯು ಎಲ್ಲಾ ನಿವೇದಿಸಿದಳು. ಶ್ರೀ ಶಾಸ್ತ್ರಿಗಳು ವಳಬಳ್ಳಾರಿ ಶ್ರೀಗಳಲ್ಲಿಗೆ ಹೋಗಿ ಬನ್ನಿರಿ ಶ್ರೀಗಳು ಅನುಗ್ರಹಿಸುವರೆಂದು ಹೇಳಲು ಅದರಂತೆ ಶ್ರೀಗಳಲ್ಲಿಗೆ ಹೋಗಿ ತಮ್ಮ ಕೊರತೆಯ ಅರಿಕೆಯನ್ನು ಮಾಡಿಕೊಳ್ಳಲು ಶ್ರೀ ತಾತನವರು ಶಿವನ ಮೈವೆಳಗಾದ ಭಸ್ಮವನ್ನು ಕೊಟ್ಟು ಧರಿಸುವ ಕ್ರಮ, ಪೂಜಿಸುವ ಪದ್ಧತಿ ತಿಳಿಸಿ ಹಾರೈಸಿ ಕಳುಹಿಸಿಕೊಟ್ಟರು. ಊರಿಗೆ ಬಂದ ಸತಿ–ಪತಿಗಳೊಂದಾದ ಭಕ್ತಿಹಿತ ವಪ್ಪುದು ಶಿವಂಗೆಯೆನ್ನುವಂತೆ ಇವರೀರ್ವರ ಭಕ್ತಿ ಶ್ರದ್ಧೆ ನಿಷ್ಠಾ ಪೂಜೆಗೆ ಒಲಿದು

ಶಿವನು ಇವರಿಗೆ ಹೆಣ್ಣುಮಗುವೊಂದನ್ನು ಕರುಣಿಸಿದಾಗ್ಗೆ ಸೊಸೆಯು ಬಂಜೆತನ ಹೋಗಿ ವಂಶೋದ್ಧಾರವಾಯಿತೆಂದು ಹಿಗ್ಗಿದ ವೀರಮಾಂಬೆಯು ಹೊಸ ತಿರುವು ಬಾಳಲ್ಲಿ ಕರುಣಿಸಿದ ಶ್ರೀ ತಾತನವರ ಕೃಪೆಗೆ ತಮ್ಮ ಮನೆತನದವರೆಲ್ಲರೂ ಚಿರಋಣಿಗಳೆಂದು ಆಜೀವ ಪರ್ಯಂತರ ಭಕ್ತಿ ಕಿಂಕರತೆ ಬಿಡದೆ ಪೂಜಿಸುವುದಾಗಿ ತಿಳಿದು ಗುರು ಜಂಗಮರಲ್ಲಿ ಸದಾ ಭಕ್ತಿಯಿಡುವ ಮನೋಭಾವ ಕರುಣಿಸೆಂದು ಶ್ರೀ ತಾತನವರನ್ನು ಅನನ್ಯಭಕ್ತಿಯಿಂದ ಸ್ತುತಿಸಿ ಧ್ಯಾನಿಸಿ ಜನ್ಮಸಾರ್ಥಕತೆಯನ್ನು ಪಡೆದರು.

(ಪ್ರಸಂಗ-೮)

## ಭಕ್ತನಿಗೆ ಹಿಡಿದು ಕಾಡುವ ಭೂತವನ್ನು ಹೊಡೆದೋಡಿಸಿದ್ದು.

ಮಾನ್ವಿ ತಾಲೂಕಿನ ಅ ಮ ರಾ ವ ತಿ ಗ್ರಾಮದ ಕೋಮಟಿಗರ ಕುಲದ ಈಶ್ವರಯ್ಯನಿಗೆ ಮೂರು ಹೆಣ್ಣುಗಳಾದರೂ ಆ ಯಾವ ಮೂರು ಹೆಣ್ಣುಗಳು ಸತ್ತು ಹೋಗಿ ನಷ್ಟ ಸಂತಾನ ಪ್ರಾಪ್ತಿಯಾಗಿದ್ದಿತು. ಮೂರು ಹೆ ಣ್ಣಾ ದ ಮೇಲೆ ನಾಲ್ಕನೆಯ ಮಗುವು ಹೆಣ್ಣು ಮಗುವು ಆಗಿದ್ದಿತು. ಇದು ಕೂಡ ತಾಯಿಯ ಹಾಲು ಕಾಣದೆ ಬಾಲ್ಯದಲ್ಲಿಯೇ ಒಳಲುವುದನ್ನು ಕಂಡು ಗುರುಹಿರಿಯರ ಸಲಹೆಯಂತೆ ಮನೆದೇವರಾದ ಬಸವಣ್ಣನಿಗೆ ಬೇಡಿಕೊಂಡು ತೀರ್ಥತಂದು ಕುಡಿಸಿ ಬೆಳಸುತ್ತಿದ್ದರು. ಈ ಸಮಯದಲ್ಲಿ ಮನೆಯವರಿಗೆಲ್ಲಾ ಗ್ರಹದ ಚೇಷ್ಠೆ ಬಾಧಿಸಹತ್ತಿತು. ಮನೆಯವರು ಉಂಡ ಅನ್ನ ಜೀರ್ಣಿಸದಂತೆ ಮಾಡಿ ಹೊಟ್ಟೆಯ ಉಬ್ಬಸ; ಆದರಿಂದ ವಾಂತಿಯಾಗುತ್ತಾ ವಿಧ ವಿಧವಾಗಿ ಭೂತ ಕಾಡಹತ್ತಿತು. ಈ ವಿಷಯವನ್ನು ವಳಬಳ್ಳಾರಿ ತಾತನವರಲ್ಲಿಗೆ ಹೋಗಿ ತಿಳಿಸಲು ಆಗ ಅವರು ಅಡವಿ ಅಮರೇಶ್ವರನ ಕ್ಷೇ ತ್ರ ಕ್ಕೆ ಹೋಗಿ ಅಲ್ಲೆ ಇದ್ದು ಪೂಜೆಮಾಡಿರಿ ಎಂದು ಹೇಳಿ ಕಳುಹಿಸಿದರು. ಶ್ರೀ ತಾತನವರಪ್ಪಣೆಯಂತೆಯೇ ಈಶ್ವರಯ್ಯನು ಅಡವಿ ಅಮರೇಶ್ವರ ಕ್ಷೇತ್ರಕ್ಕೆ ಹೋಗಿ ಅನೇಕ ದಿನ ಪೂಜೆ ಮಾಡಿದರು. ಗ್ರಹದ ಚೇಷ್ಠೆ ನಿಲ್ಲಲಿಲ್ಲ. ಈಶ್ವರಯ್ಯನವರ ಮನೆಯ ಜನ ಕುಡಿವ ನೀರಲ್ಲಿ ಮೂತ್ರ ಬಿಡುವುದು. ಪಡಿಪದಾರ್ಥಗಳಲ್ಲಿ ಮಲವನ್ನು ಹಾಕಿ ಬಹು ವಿಧದಲ್ಲಿ ಕಾಡ ಹತ್ತಿತು. ಮಕ್ಕಳ ಪ್ರಾಣ ತೆಗೆಯುವುದು, ಅವರ ಎತ್ತುಗಳ ಕೊಂಬುಗಳನ್ನು ಮುರಿಯುವುದು. ಹೀಗೆ ಅನುದಿನದಿ ಯಾವುದೋ ಒಂದು ರೀತಿಯಲ್ಲಿ ಕಾಡಿಯೇ ಕಾಡ ಹತ್ತಿತು. ಈಶ್ವರಯ್ಯನು ಪುನಃ ತಾತನವರ ಸನ್ನಿಧಿಗೆ ಬಂದು ಎಲ್ಲಾ ಇದ್ದ ವಿಷಯವನ್ನು ವಿವರಿಸಿ ಅದಕ್ಕೆ ಪರಿಹಾರವನ್ನು ಕೇಳಿದನು, ಅದಕ್ಕೆ ಶ್ರೀ ತಾತನವರು ಈಶ್ವರಯ್ಯನಿಗೆ ಕೆಲವು ದಿನಗಳವರೆಗ ಈಗಿರುವ ಮನೆಯನ್ನು ಬಿಟ್ಟು ಬೇರೆಯ ಮನೆಯಲ್ಲಿರಲು ಹೇಳಿ, ಹಾಲ್ವಿ ರುದ್ರಮುನಿ ಮಹಾಸ್ವಾಮಿಗಳನ್ನು

ಕರೆದು ಆ ನಿಮ್ಮ ಪೂರ್ವದ ಮನೆಯಲ್ಲಿ ಶಿವಪೂಜೆ ಮಾಡಿಸಿರಿ ಎಂದು ಹೇಳಿ ಕಳುಹಿಸಿದರು. ಅದೇ ಪ್ರಕಾರ ಈಶ್ವರಯ್ಯನು ಹಾಲ್ವಿ ಶ್ರೀಗಳನ್ನು ಕರೆಯಲು ಹೋಗಿ ವಿಷಯವೆಲ್ಲಾ ತಿಳಿಸಿದನು. ಅದನ್ನೆಲ್ಲಾ ಕೇಳಿದ ಹಾಲ್ವಿ ಶ್ರೀಗಳು ಹಿಂದೆ ತಮ್ಮ ಗುರುಗಳಿಗಾದ ಆಗಾಥದ ಕಥೆಯನ್ನು ಹೇಳಿದರು. ತಮ್ಮ ಹಿಂದಿನ ಪರಂಪರಾ ಗುರುಗಳಾದ ಶ್ರೀ ರುದ್ರಮುನಿಸ್ವಾಮಿಗಳನ್ನು ನೈಜಾಂ ಪ್ರಾಂತ್ಯದಲ್ಲಿ ಹಳ್ಳಿಯೊಂದಕ್ಕೆ ಭಕ್ತನು ಬಿನ್ನಹದ ಮೇಲೆ ಕರೆದುಕೊಂಡು ಹೋಗಿ ಅವರ ಮನೆಯಲ್ಲಿ ಪೂಜೆ ಮಾಡಿಸಿದರಂತೆ. ಪೂಜೆ ಮಾಡುವ ಸಮಯದಲ್ಲಿ ಶ್ರೀಗಳ ಕರದೊಳಗಿರುವ ಇಷ್ಟಲಿಂಗವು ಮಾಯವಾಗಲು ಗುರುಗಳು ಹಾಹಾಕಾರಿ ಮನದಲ್ಲಿ ಇದು ಭೂತ ಚೇಷ್ಟೆಯೆಂದು ತಿಳಿದು ಹೊರಗಿರುವ ಭಕ್ತರನ್ನು ಕರೆದು, ತಮ್ಮ ಮರಿಗಳೊಬ್ಬರು ಬಿಟ್ಟು ಎಲ್ಲರೂ ಹೊರಗೆ ಹೋಗಲು ಅಪ್ಪಣೆ ಮಾಡಿ ತಮ್ಮ ನಿಷ್ಠೆಯ ಪೂಜೆ ಮುಂದುವರಿಸಿದರಂತೆ. ಭೂತನಾಥನನ್ನು ಮನದಲ್ಲಿ ನೆನೆಯುತ್ತಾ ಘಾತುಕ ಕೆಲಸ ಮಾಡಿದ ಶ್ರೀಮಂತನನ್ನು ಸರಿಯಾಗಿ ವಿಷಯ ತಿಳಿಸದಿದ್ದುದಕ್ಕಾಗಿ ಮರುಗುತ್ತಾ ತಮ್ಮ ಅಚಲ ಭಕ್ತಿಯ ಪೂಜೆ ಮುಂದುವರಿಸಿದರು. ಸಾಯಂಕಾಲದವರೆವಿಗೂ ಪೂಜೆ ನಡೆಸಿದಾಗ್ಗೆ ಭೂತವು ವಿನಯದಿಂದ ಶ್ರೀಗಳ ನಿಷ್ಠೆಯ ಪೂಜೆಗೆ ಮಣಿದು ಶ್ರೀಗಳ ಲಿಂಗವನ್ನು ಹಿಂತಿರುಗಿಸಿ, ಜಗತ್ತಿನಲ್ಲಿ ಶ್ರೀಗಳು ಅತಿ ಸಮರ್ಥರೆಂದು ಹೊಗಳಿ ತನ್ನ ಅಪರಾಧಗಳನ್ನು ಮನ್ನಿಸಬೇಕೆಂದು ಬೇಡಿಕೊಂಡು ತನ್ನ ಬ್ರಹ್ಮ ರಾಕ್ಷಸತ್ವವನ್ನು ಕಳೆದು ಉದ್ಧರಿಸಬೇಕೆಂದು ಕೇಳಿಕೊಂಡಿತು. ಅದಕ್ಕೆ ಶ್ರೀಗಳು ಮೋಕ್ಷವನ್ನು ಕರುಣಿಸಿದರಂತೆ. ವಸ್ತು ಸ್ಥಿತಿ ಹೀಗಿರುವಾಗ್ಗೆ, ನಮ್ಮ ಗುರುಗಳು ಅತಿ ಸಮರ್ಥರು ತಮಗೆ ಆ ಯಾವ ಶಕ್ತಿಯಿಲ್ಲವೆಂದು ಹೇಳಿ ವಳಬಳ್ಳಾರಿ ತಾತನವರು ತಮ್ಮ ಜೊತೆಯಲ್ಲಿ ಇದ್ದರೆ ಮಾತ್ರ ತಾವು ಬರುವುದಾಗಿ ತಿಳಿಸಲು ಈಶ್ವರಯ್ಯ ಭಕ್ತನು ಹಾಗೆ ಆಗಲಿ ಶ್ರೀ ತಾತನವರು ಸಹಾ ಬರುವರೆಂದು ಹಾಲ್ವಿ ಶ್ರೀಗಳನ್ನು ಒಪ್ಪಿಸಿ ಈಶ್ವರಯ್ಯನು ಹಾಲ್ವಿ ಶ್ರೀಗಳ ಜೊತೆಯಲ್ಲಿ ವಳಬಳ್ಳಾರಿ ಮಠಕ್ಕೆ ಬಂದನು. ಶ್ರೀ ತಾತನವರಿಗೆ ಎಲ್ಲಾ ವಿಷಯವನ್ನು ವಿವರಿಸಿ, ಹಾಲ್ವಿ ಶ್ರೀಗಳು ವಳಬಳ್ಳಾರಿ ತಾತನವರು ಮತ್ತು ಈಶ್ವರಯ್ಯನು ಎಲ್ಲರೂ ಕೂಡಿಕೊಂಡು ಅಮರಾವತಿ ಗ್ರಾಮಕ್ಕೆ ಬಂದರು. ಬರುವ ಸಮಯದಲ್ಲಿ ಇವರ ಭಂಡಿಯ ಸುತ್ತ 'ಕಾ' 'ಕಾ' ಎನ್ನುತ್ತಾ ಕರಿಯ ಕಾಗೆಯು ಎಡೆಬಿಡದೆ ಕಾಡುತ್ತಾ ನಡೆಯಿತು. ಭೂತದುಪಟಳ ತಪ್ಪಿಸಲು ಶ್ರೀ ತಾತನವರ ಪೂಜೆಗೆ ತನ್ನ ಮನೆಯಲ್ಲಿ ಎಲ್ಲಾ ಸಜ್ಜುಗೊಳಿಸಿದನು. ಉಭಯ ಶ್ರೀಗಳು ಮಾಡಿದ ಪೂಜೆಯದು ಬಹಳ ನಿಷ್ಠೆಯಿಂದ ನಡೆಯಿತು. ಶ್ರೀ ತಾತನವರ ಅಚಲ ನಿಷ್ಠೆಯ ಪೂಜೆಗೆ ಕಾಗೆ ರೂಪದಲ್ಲಿ ಕಾಡಿದ ಭೂತ ಬಿಟ್ಟು, ಭೀತಿಯಿಂದ ಕಾಗೆ ಸತ್ತು ಹೋಗಿ ಅಂಗಳದಲ್ಲಿ ಬಿದ್ದ ಕಾಗೆಯನ್ನು ಊರ ಹೊರಗೆ ದಹನಿಸಿ ಮಣ್ಣು ಮುಚ್ಚಿಸಿದ ಭಕ್ತನು, ಪ್ರೇತದುಪಟಳ ಕಳೆದ ತಾತನಿಗೆ ವಿನಯದಿಂದ ವಂದಿಸಿ ಜೊತೆಗೆ ಹಾಲ್ವಿ ಶ್ರೀಗಳಿಗೂ ವಂದಿಸಿ ಉಭಯ

ಶ್ರೀಗಳ ಪೂಜೆಗಳಿಂದ ತಮ್ಮ ಮನೆತನಕ್ಕೆ ಒದಗಿದ ದೊಡ್ಡ ವಿಪತ್ತು ದೂರವಾದುದಕ್ಕೆ ಸಂತೋಷವಾಗುತ್ತಾ ಉಭಯ ಶ್ರೀಗಳ ಪಾದ ಪೂಜೆ ಮಾಡಿಸಿ ಭಕ್ತಿ ಕಾಣಿಕೆ ಸಲ್ಲಿಸಿ ಈಶ್ವರಯ್ಯನು ಕೃತ ಕೃತ್ಯನಾದನು.

## (ಪ್ರಸಂಗ-೯)

### ಗೋರೆಬಾಳಲ್ಲಿ ಶರಣಬಸವೇಶ್ವರ ಪುರಾಣ ಹಾಗೂ ಗುಡಿ ಸ್ಥಾಪಿಸಿದ್ದು

ರಾಯಚೂರು ಜಿಲ್ಲೆ, ಸಿಂಧನೂರು ತಾಲ್ಲೂಕಿನಲ್ಲಿರುವ ಗೋರೇಬಾಳಿನ ಗ್ರಾಮಕ್ಕೆ ಒಮ್ಮೆ ಭೀಕರ ಬರಗಾಲ ಪ್ರಾಪ್ತವಾಗಿ, ದನಗಳಿಗೆ ಮೇವು ಸಿಗದೆ ಕುಡಿಯಲು ನೀರು ದೊರಕದೆ ಬಹಳ ದುಃಖದಾಯಕವಾದ ದಿನಗಳು ಬಂದಿದ್ದವು. ಆ ಊರಿನ ಭಕ್ತರು ಶ್ರೀವಳಬಳ್ಳಾರಿ ತಾತನವರಲ್ಲಿ ವಿಷಯ ಹೇಳಿ ಬಿನ್ನಯಿಸಿಕೊಂಡಾಗ ಶರಣಬಸವೇಶ್ವರ ಪುರಾಣ ಊರಲ್ಲಿ ಪ್ರಾರಂಭ ಮಾಡಿರಿ. ಹರನ ಕೃಪೆಯಾಗುವುದೆಂದು ಹೇಳಿದರು. ಹಾಗೆಯೇ ಭಕ್ತರು ಪುರಾಣ ಪ್ರಾರಂಭಿಸಲು ಊರಲ್ಲಿ ಯಾರಿಗೂ ಸಮಾಧಾನವಿರದೆ ಪುರಾಣ ಕೇಳಲಿಕ್ಕೆ ಕೇವಲ ಕೆಲವೇ ಮಂದಿ ಬರುತ್ತಿದ್ದರು. ಪುರಾಣ ಓದುವವರು ಶರಣಯ್ಯಗವಾಯಿಗಳು. ಪ್ರವಚನಕಾರರು ವಿರೂಪಾಕ್ಷ ಶಾಸ್ತ್ರಿಗಳು. ಊರಲ್ಲಿನ ಜನ ಉತ್ಸಾಹ ತೋರಿಸದ ಕಾರಣ ಇದ್ದ ವಿಷಯವನ್ನು ಮತ್ತೊಮ್ಮೆ ತಾತನವರಲ್ಲಿ ಅರಿಕೆ ಮಾಡಿಕೊಳ್ಳಲು, ಹಿಡಿದ ಕಾರ್ಯ ಬಿಡದೆ ಮಾಡಬೇಕು ಎಂದು ಹೇಳುತ್ತಾ ಭಕ್ತರ ಜೊತೆಗೆ ಶ್ರೀ ತಾತನವರು ಗೋರೇಬಾಳಿಗೆ ದಯಮಾಡಿಸಿದರು. ಮುದ್ದರೆಡ್ಡಿ, ಯಮನಪ್ಪ, ಪರ್ವತಯ್ಯ ಹಾಗೂ ನೆಟೆಕಲ್ ರಾಮಚಂದ್ರಪ್ಪನು, ಸುಬ್ಬಣ್ಣನವರ ವೀರಾರೆಡ್ಡಿ, ಯಮನಪ್ಪ ಇತ್ಯಾದಿ ಪ್ರಮುಖರೆಲ್ಲರೂ ಸೇರಿ ಹೇಗೋ ಪುರಾಣ ಮುಂದುವರಿಸಿದರು. ದಿನಗಳುರುಳಿದರೂ ಮಳೆಯು ಬಾರದೆ ಇದ್ದಾಗ ಜನರು ಚಿಂತಾಗ್ನಿಯಲಿ ಬೆಂದು ಖಿನ್ನವದನದವರಾಗಿದ್ದರು. ಇದನ್ನೆಲ್ಲಾ ತಿಳಿದ ಶ್ರೀ ತಾತನವರು ಶಿವನಿಗೆ ಕರುಣವಿಲ್ಲ. ಇನ್ನು ಪುರಾಣ ನಿಲ್ಲಿಸಿಬಿಡಿರೆಂದು ಹೇಳಿ ತಾವು ವಳಬಳ್ಳಾರಿ ಮಠಕ್ಕೆ ಪ್ರಯಾಣ ಮಾಡಿದರು. ಇತ್ತ ಗೋರೇಬಾಳಲ್ಲಿ ಮೋಡಗಳು ಕವಿದು ಸುತ್ತಲೂ ಕೋಲ್ಮಿಂಚ್ ಗುಡುಗಿನಿಂದ ಕೂಡಿದ ಭೋರ್ಗರೆದು ಮಳೆಯು ಬಂದಿತು. ಇದಕ್ಕೆ ಗೋರೇಬಾಳಿನ ಭಕ್ತಾದಿಗಳು ಬಹಳ ಸಂತಸಪಟ್ಟರು. ಇದು ಶ್ರೀ ತಾತನವರ ಪವಾಡವೆಂದು ಹಿಗ್ಗಿದ ಜನಗಳು ವಳಬಳ್ಳಾರಿ ಮಠಕ್ಕೆ ಹೋಗಿ ಇದ್ದ ವಿಷಯ ತಿಳಿಸಲು ತಾತನವರು ಭಗವದನುಗ್ರಹವಾಗಿದೆ ಎಂದು ಹೇಳಿ ಭಕ್ತರಪೇಕ್ಷೆಯ ಮೇರೆಗೆ ಭಕ್ತರೊಡಗೂಡಿ ಗೋರೆಬಾಳಿಗೆ ಬಂದು ಉಳಿದ ಪುರಾಣ ನಡೆಸಿ, ನಂತರ ಪುರಾಣ ಮಂಗಲ ಮಾಡಿದರು. ಶ್ರೀ ತಾತನವರಪ್ಪಣೆಯಂತೆ ಗೋರೇಬಾಳಿನ ಭಕ್ತರು ಹನ್ನೆರಡು ವರ್ಷ ಪುರಾಣವನ್ನು ಬಿಡದೆ ನಡೆಸಿದುದರ

ಕುರುಹಿಗಾಗಿ ಶರಣಬಸವೇಶ್ವರನ ಗುಡಿಯು ಗೋರೇಬಾಳಲ್ಲಿ ಮಾಡಿರೆಂದು ತಾತನವರು ಭಕ್ತರಿಗೆ ಹೇಳಿದರು. ಆ ಊರಿನ ಹೊರಗಡೆ ಇರುವ ಲಿಂಗೋಜಿ ಭಾವಿಯ ಹತ್ತಿರ ವಿರುವ ಜಾಗ ತೋರಿಸಿದ ತಾತನು ಅದೇ ಪ್ರಶಸ್ತವಾದ ಸ್ಥಳವೆಂದು ಖರ್ಚು ಜಾಸ್ತಿ ಯಾದರೂ ಚಿಂತೆಯಿಲ್ಲ. ಅಲ್ಲಿ ಶರಣಬಸವೇಶ್ವರರ ಗುಡಿ ಕಟ್ಟಿರೆಂದು ಹೇಳಿ ತಾವೇ ಮೊದಲು ದುಡ್ಡು ಕೊಟ್ಟು ಆಶೀರ್ವದಿಸಿದರು. ೧೯೬೮ರಲ್ಲಿ ಗುಡಿ ಕಟ್ಟಲು ಪ್ರಾರಂಭಿಸಿದ್ದು, ನಂತರ ಮುಂದಿನ ೧೯೭೦ರಲ್ಲಿ ಪರಮ ಪಾವನ ಪರ್ವ ಕಾಲದಲ್ಲಿ ಶರಣ ಬಸವೇಶ್ವರ ಮೂರ್ತಿಯು ಶ್ರೀ ತಾತನವರ ಅಮೃತ ಹಸ್ತದಿಂದ ಪ್ರತಿಷ್ಠಾಪಿ ಸಲ್ಪಟ್ಟಿತು. ಇಂದಿಗೂ ಬಹಳ ಪ್ರತಿಭೆಯಿಂದ ಧರ್ಮಕಾರ್ಯಗಳು ಗೋರೇಬಾಳಲ್ಲಿ ಶ್ರೀ ತಾತನವರ ಕೃಪೆಯಿಂದ ನಡೆಯುವುವು.

## (ಪ್ರಸಂಗ–೧೦)

### ಹೊಸಪೇಟೆ ಕೊಟ್ಟೂರು ಸ್ವಾಮಿಗಳಿಗೆ ಶ್ರೀ ತಾತನವರಿಂದ ಪಟ್ಟಾಧಿಕಾರವಾದದ್ದು

ಹಿಂದಿನ ಕೊಟ್ಟೂರು ಸ್ವಾಮಿಗಳು ಲಿಂಗೈಕ್ಯರಾದ ನಂತರ ಹೊಸಪೇಟೆಯ ಮಠಕ್ಕೆ ನೂತನ ಉತ್ತರಾಧಿಕಾರಿಗಳನ್ನು ಆಗಿ ಪಟ್ಟಾಧಿಕಾರ ಮಾಡದೆ ಹಾಗೆಯೆ ಬಿಟ್ಟಿದ್ದರು. ಬಳ್ಳಾರಿ–ಹೊಸಪೇಟೆಯ ಭಕ್ತರು ಸೇರಿ ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀಜಗದ್ಗುರು ಗಂಗಾಧರ ಮಹಾಸ್ವಾಮಿಗಳ ಅಧ್ಯಕ್ಷತೆಯಲ್ಲಿ ಸಭೆ ಸೇರಿ ಹೊಸ ಪೇಟೆಯ ಮಠದಲ್ಲಿ ಮೂರು ಸಾವಿರ ಶ್ರೀಗಳ ಅಭಿಮತದಂತೆ ಸಂಗನಬಸವ ದೇಶಿಕ ರನ್ನು ಆರಿಸಿ ಮುಂದೆ ಪಟ್ಟಾಧಿಕಾರದ ಮಹತ್ಕಾರ್ಯಕ್ಕೆ ಸುವರ್ಣಗಿರಿ ಸಂಸ್ಥಾನದ ಮಠಾಧೀಶ್ವರರಾದ ಶ್ರೀ ಮ. ನಿ. ಚನ್ನಬಸವ ಮಹಾಸ್ವಾಮಿಗಳವರನ್ನು ನೇಮಿಸಿ ಮುಂದಿನ ೧೯೭೩ನೇ ವರ್ಷದ ವೈಶಾಖ ಬಹುಳದ ಬೃಹಸ್ಪತಿವಾರ (ಗುರುವಾರ) ದ ಶುಭ ದಿನದಲ್ಲಿ ವಳಬಳ್ಳಾರಿ ಶ್ರೀ ತಾತನವರಿಂದ ಷಟ್‌ಸ್ಥಲ ಬ್ರಹ್ಮೋಪದೇಶದಿಂದ ಗುರುವಿನ ಅನುಗ್ರಹವು ಶ್ರೀ ಸಂಗನ ಬಸವ ಮಹಾಸ್ವಾಮಿಗಳಿಗೆ ಲಭಿಸಿತು.

## (ಪ್ರಸಂಗ–೧೧)

### ಅಡವಿ ಅಮರೇಶ್ವರ ಕ್ಷೇತ್ರದಲ್ಲಿ ಕಲ್ಪ ಭಸ್ಮದ ಕಣಜ ಹಾಗೂ ೩೧ ಮಂಟಪದ ಪೂಜೆ ಮಾಡಿಸಿದುದು

ಒಂದು ದಿನ ಅಡವಿ ಅಮರೇಶ್ವರನ ದಿವ್ಯ ಕ್ಷೇತ್ರದಲ್ಲಿ ಸುಂದರವಾದ ಪ್ರಕೃತಿ ರಮ್ಯದ ಪ್ರಾಶಾಂತ ಪರಿಸರದಲ್ಲಿ ತಾತನು ತಮ್ಮ ಸುಂದರವಾದ ಪಾದಕಮಲಗಳಿಂದ

ನಡೆದಾಡುವಾಗ್ಗೆ ಕಲ್ಪ ಭಸ್ಮ ಮಾಡುವ ವ್ರತವನ್ನು ಮಾಡಿ ಕಲ್ಪ ಭಸ್ಮದ ಕಣಜ ವನ್ನು ಶ್ರೀ ಕ್ಷೇತ್ರದಲ್ಲಿ ಸ್ಥಾಪಿಸಬೇಕೆಂಬ ಬಯಕೆಯಾಯಿತು. ತಮ್ಮ ಮರಿದೇವರನ್ನು ಕರೆದು ತಮ್ಮ ಭಕ್ತರನ್ನು ಕರೆಸಿ ಕಲ್ಪ ಭಸ್ಮ ಮಾಡುವ ಮಹತ್ಕಾರ್ಯಕ್ಕೆ ಸಹಕರಿಸ ಬೇಕೆಂದು ಹೇಳುತ್ತಾ ಭಸ್ಮದ ಮಹಿಮೆಯ ಬಗ್ಗೆ ತಮ್ಮ ದೇಶಿಕರನ್ನು (ಈಗಿನ ಶಾಂತಮಲ್ಲಸ್ವಾಮಿಗಳು) ಕೂಡ್ರಿಸಿಕೊಂಡು ಅತ್ಯಂತ ಹರ್ಷಚಿತ್ತರಾಗಿ ಭಕ್ತರಿಗೆಲ್ಲಾ ಭಕ್ತಿಭಾವದಿಂದ ವಿವರಿಸಿದರು. ಶಿವನ ವೈಭವೆಳಗಾದ ಶ್ರೀ ವಿಭೂತಿಯು ಗುರುತರದಿ ನಿರುಪಾಧಿಕವು. ಹರನ ಜ್ಞಾನದಿಂದ ಉದಿಸಿ ಚಿದ್ಭಾಸಿತವಾಗುವುದು. ಸೋಪಾಧಿಕ ಭಸ್ಮ ಪಡೆಯುವುದಕ್ಕೆ ಹಲವು ಕ್ರಮಗಳಿವೆಯೆಂದು ಈ ಪ್ರಕಾರ ತಿಳಿಸಿದರು.

ಶಿವನ ಸದ್ಯೋಜಾತ ಮುಖ, ವಾಮದೇವಮುಖ, ಅಘೋರಮುಖ, ತತ್ಪುರುಷ ಮುಖ ಹಾಗೂ ಈಶಾನ್ಯ ಮುಖದಿಂದ ಕ್ರಮವಾಗಿ ನಂದೆ, ಭದ್ರೆ, ಸುರಭಿ, ಸುಶೀಲೆ ಮತ್ತು ಸುಮನವೆಂಬ ಗೋವುಗಳಿಂದ ಅನುಕ್ರಮದಲ್ಲಿ ಹುಟ್ಟಿದುದು ವಿಭೂತಿ, ಭಸಿತ, ಭಸ್ಮ, ಕ್ಷಾರ, ಮತ್ತು ರಕ್ಷೆಯೆಂಬ ಐದು ಪ್ರಕಾರದ ವಿಭೂತಿಯೇ ಸೋಪಾಧಿಕವೆಂದು ಶ್ರೀ ತಾತನವರು ವಿವರಿಸಿ ಪಂಚ ವಿಧವಾದ ಭಸ್ಮಗಳನ್ನು ಸಿದ್ಧಪಡಿಸುವ ಬಗೆಗೆ ಹೇಳುತ್ತಾ ಕಲ್ಪ, ಅನುಕಲ್ಪ, ಉಪಕಲ್ಪ ಹಾಗೂ ಅಕಲ್ಪ ಎಂದು ನಾಲ್ಕು ವಿಧವಾಗಿ ರುವುದೆಂದು ಹೇಳುತ್ತಾ ಗೋವುಗಳ ಗೋಮಯವನ್ನು ಭೂಮಿಗೆ ಬೀಳದಂತೆ ಅಂತರ ದಲ್ಲಿ ಹಿಡಿದು ಸದ್ಯೋಜಾತ ಮಂತ್ರದಿಂದ ಹಿಡಿದು ವಾಮದೇವ ಮಂತ್ರದಿಂದ ಉಂಡೆ ಯನ್ನು ಮಾಡಿ ತತ್ಪುರುಷ ಮಂತ್ರದಿಂದ ಒಣಗಿಸಿ ಅಘೋರ ಮಂತ್ರದಿಂದ ಮತ್ತು ಶಿವಮಂತ್ರದಿಂದ ಸತ್ಕರಿಸಿದ ಅಗ್ನಿಯಲ್ಲಿ ಸುಟ್ಟು ಅದನ್ನು ಮೂಲ ಮಂತ್ರದಿಂದ ಶೋಧಿಸಿ ಸಿದ್ಧಪಡಿಸುವುದೇ "ಕಲ್ಪ ಭಸ್ಮ" ವೆನಿಸುವುದು. ಈ ಮಹಾ ಕಾರ್ಯ ವನ್ನು ಆನಂದನಾಮ ವರ್ಷದ ಮಾರ್ಗಶಿರ ಮಾಸದಲ್ಲಿ ಪ್ರಾರಂಭ ಮಾಡಿ ಮಾಘ ಮಾಸದಲ್ಲಿ ಕೂಡಿಸಿದ ಕಲ್ಪ ಭಸ್ಮದ ಕಣಜದ ಉದ್ಘಾಟನೆಯನ್ನು ಶ್ರೀ ತಾತನವರ ಅಮೃತ ಹಸ್ತದಿಂದ ನೆರವೇರಿತು. ಜೊತೆಗೆ ಇಪ್ಪತ್ತೊಂದು ಮಂಟಪದ ಪೂಜೆ ಸಹಾ ಸರಳ ಸುಂದರ ಭಾವದಿಂದ ನೆರವೇರಿಸಿದರು.

(ಪ್ರಸಂಗ-೧೨)

ಭಕ್ತನೋರ್ವನಿಗೆ ವಂಶೋದ್ಧಾರಕ ಮಗುವನ್ನು ಕರುಣಿಸಿದುದು

ತೆಲುಗು (ಆಂಧ್ರ) ದೇಶದ ಆದವಾನಿ ತಾಲೂಕಿನಲ್ಲಿರುವ ಸಂತೇ ಕೂಡ್ಲೂರಿನ ಗ್ರಾಮಸ್ಥನಾದ ಉಳ್ಳಿಗಡೆ ಬಸಪ್ಪನಿಗೆ ಮೂವರು ಹೆಣ್ಣು ಮಕ್ಕಳಿದ್ದರು. ಆತನಿಗೆ

ಬಹುಕಾಲ ಗಂಡು ಸಂತಾನವಾಗದೆ ವಂಶೋದ್ಧಾರಕ ಗಂಡು ಮಗುವಿನ ಬಯಕೆಯು ಬಹು ಬಲವತ್ತರವಾಗಿದ್ದಿತು. ಉಳ್ಳಿಗಡ್ಡೆ ಬಸಪ್ಪನು ತನ್ನ ಸತಿ ಸಮೇತವಾಗಿ ವಳಬಳ್ಳಾರಿ ತಾತನವರಲ್ಲಿಗೆ ಹೋಗಿ ತಮಗೆ ದತ್ತು ಮಗನಿದ್ದರೂ ತಮಗೆ ಶಾಂತಿಯಿಲ್ಲ ವೆಂದೂ ತಮ್ಮ ವಂಶದ ಕುಡಿ ಚಾಚಲು ಗಂಡು ಮಗುವಿನ ಬಯಕೆಯಾಗಿದೆಯೆಂದೂ ಬಿನ್ನಹ ಮಾಡಿಕೊಂಡರು. ತಮ್ಮ ಊರಿನಲ್ಲಿರುವ ಬಸವೇಶ್ವರನಿಗೆ ಶ್ರದ್ಧೆಯಿಂದ ಮೂರು ತಿಂಗಳು ಬಿಡದೆ ಪೂಜೆ ಮಾಡಿರೆಂದು ಶ್ರೀ ತಾತನವರು ಹೇಳಿ ಕಳುಹಿಸಿ ಕೊಟ್ಟರು. ಶ್ರೀ ತಾತನವರ ಅಪ್ಪಣೆಯಂತೆ ಊರಿಗೆ ಬಂದ ದಂಪತಿಗಳು ಶ್ರದ್ಧೆಯಿಂದ ಊರಿನ ಬಸವೇಶ್ವರನಿಗೆ ಪೂಜೆ ಮಾಡುತ್ತಾ ಇರುವಾಗ್ಗೆ ಆ ಬಸವೇಶ್ವರನ ಕೃಪೆಯಿಂದ ಉಳ್ಳಿಗಡ್ಡೆ ಬಸಪ್ಪನ ಹೆಂಡತಿ ಗರ್ಭವತಿಯಾಗಿ ಕಾಲದ ಪದ್ಧತಿ ಪ್ರಕಾರ ಗಂಡು ಮಗುವಿಗೆ ಜನನವಿತ್ತಳು. ಈ ವಿಷಯ ಶ್ರೀ ತಾತನವರಿಗೆ ತಿಳಿಸಿದಾಗ ಬಸವನೆಂದೇ ನಾಮಕರಣ ಮಾಡಲು ಸೂಚಿಸಿದರು. ತಮ್ಮ ಊರಿಗೆ ಬರಲು ಬಿನ್ನಯಿಸಿದರೂ ತಾತನವರು ಶಿವನ ಅಪ್ಪಣೆಯಾಗಿಲ್ಲವೆಂದೂ ಕಳುಹಿಸಿದರು. ಇದಕ್ಕೆ ಧೃತಿಗೆಡದ ಬಸಪ್ಪನು ಐದು ವರ್ಷಗಳ ತನಕ ಬಸವೇಶ್ವರನ ಪೂಜೆ ಮುಂದುವರಿಸಿ ಮಂಗಳ ಕಾರ್ಯಕ್ಕೆ ಬರಬೇಕೆಂದು ಮತ್ತೊಮ್ಮೆ ಬಸಪ್ಪನು ಬಿನ್ನೈಸಿಕೊಳ್ಳಲು ಅದಕ್ಕೆ ತಾತನವರು ಒಪ್ಪಿ ಮುಂದೆ ನಳನಾಮ ವರ್ಷ (೧೯೭೭) ದ ಮಾಘ ಮಾಸದ ಶುದ್ಧ ದಲ್ಲಿ ಸಂತೇ ಕೂಡ್ಲೂರಿಗೆ ದಯಮಾಡಿಸಿದರು. ಜೊತೆಗೆ ಮಂಡಿಗಿರಿ ಶ್ರೀ ಬೋಳ ಬಸವಸ್ವಾಮಿಗಳು ಶ್ರೀ ಹಾಲ್ವಿ ರುದ್ರ ಮುನಿಸ್ವಾಮಿಗಳು ಶಿವಕವಿ ಶ್ರೀ ದೊಡ್ಡಯ್ಯ ಶಾಸ್ತ್ರಿಗಳು, ಶ್ರೀ ಮೃತ್ಯುಂಜಯ ಮರಿದೇವರೂ ಚಾಕೀ ಮಠದ ದೇಶಿಕರೂ, ಪಾಲ್ತೂರು ಶ್ರೀ ಗುರುಗಳು ಬಂದು ಉಳ್ಳಿಗಡ್ಡೆ ಬಸಪ್ಪನವರ ಗಂಡು ಮಗುವಿನ ಮಂಗಲದ ಮಹಾ ಕಾರ್ಯವನ್ನು ನೆರವೇರಿಸಿ ಜೊತೆಗೆ ದತ್ತು ಮಗನನ್ನು ನಿಷ್ಕಪಟತ್ವ ದಿಂದ ನೋಡಿಕೊಳ್ಳಿರಿ ಎಂದು ಹೇಳಿ, ಹಾರೈಸಿ ತಮ್ಮ ಮೂಲ ಮಠಕ್ಕೆ ಶ್ರೀ ತಾತನವರು ದಯಮಾಡಿಸಿದರು.

## (ಪ್ರಸಂಗ–೧೩)

### ತುಂಗಭದ್ರಾ ನದಿಯಲ್ಲಿ ಮುಳುಗುವ ಭಕ್ತನನ್ನು ಕೈಹಿಡಿದು ಸಲಹಿದ್ದು

ಹೀಗಿರುತ್ತಿರಲೊಂದು ದಿನ ಸಂಧ್ಯಾ ಸಮಯದಲ್ಲಿ ಶಿವಧ್ಯಾನದಲ್ಲಿ ಮಗ್ನವಾಗಿ ರುವ ಶ್ರೀ ತಾತನವರಿಗೆ ತಮ್ಮ ಅಂತರಂಗದಲ್ಲಿ ಭಕ್ತನೋರ್ವನು "ರಕ್ಷಿಸು ತಾತಾ" ಎಂಬ ಕೂಗು ಕೇಳಿದಂತೆ ಭಾಸವಾಗಲು ಕೂಡಲೆ ಎದ್ದು, ಒಬ್ಬ ಭಕ್ತನನ್ನು ಹಿಂದೆ ಕರೆದುಕೊಂಡು ಕೈದೀವಿಗೆಯನ್ನು ಹಿಡಿದ ಭಕ್ತನ ಜೊತೆಗೆ ತುಂಗಭದ್ರಾ ನದೀ

ತೀರಕ್ಕೆ ಬಂದು ನೋಡಲು ನದಿಯ ನೀರಿನ ಮಡುವಿನಲ್ಲಿ ಮುಳುಗಿ ತೇಲುವ ಭಕ್ತ ನೋರ್ವನನ್ನು ಕಂಡ ತಾತನವರು ಕೈಎತ್ತಿ ಈ ಕಡೆಗೆ ಬಾ ಎಂದು ಹೇಳಿದಾಗ ನೀರಿನ ಝುರಿಯೇ ಶ್ರೀ ತಾತನವರ ಸಮ್ಮುಖದಲ್ಲಿ ಬಂದು ಭಕ್ತನನ್ನು ದಡಕ್ಕೆ ತಲುಪಿಸಿತಂತೆ. ಆಗ ಶ್ರೀ ತಾತನವರು ಭಕ್ತನ ಕೈ ಹಿಡಿದು ಎತ್ತಿ ನೋಡಿದಾಗ ಆತನೇ ಸಿರುಗುಪ್ಪೆಯ ತಾಲ್ಲೂಕಿನಲ್ಲಿರುವ ಬೇವಿನ ಮರದ ಸೂಗೂರು ಗಾಣಿಗರ ರಾಮಣ್ಣನೆಂಬಾತ ನಾಗಿದ್ದನು.

ಸಂಜೆಯಲ್ಲಿ ಕಾಲು ಹೊಳೆಯ ದಾರಿ ತಪ್ಪಿ ಮಡುವಿಗೆ ಬಿದ್ದು ಈ ಪ್ರಕಾರ ಅನಾನುಕೂಲ ಘಟಿಸಿತೆಂದು ತಮ್ಮ ಕೃಪೆಯಲ್ಲಿ ಪುನರ್ಜನ್ಮ ಪಡೆದೆನೆಂದು ಶ್ರೀ ತಾತ ನವರ ದಿವ್ಯ ಪಾದಾರವಿಂದಗಳಿಗೆ ವಂದಿಸಿ, ತನ್ನ ಭಕ್ತಿ ಕಿಂಕರತೆಯನ್ನು ಸೂಚಿಸಿದ ಶ್ರೀ ತಾತನವರು ರಾಮಣ್ಣನನ್ನು ಮಠಕ್ಕೆ ಕರೆದೊಯ್ದು ತೀರ್ಥಪ್ರಸಾದ ಕರುಣಿಸಿ ಒಂದು ದಿನ ಮಠದಲ್ಲಿ ಉಳಿಸಿಕೊಂಡು ನಂತರ ಆ ಭಕ್ತನನ್ನು ಹರಸಿ ಕಳುಹಿಸಿಕೊಟ್ಟ ರಂತೆ.

## (ಪ್ರಸಂಗ-೧೪)

ಶ್ರೀ ಪಂಡಿತ ದೊಡ್ಡಯ್ಯ ಶಾಸ್ತ್ರಿಗಳಿಗೆ ಶ್ರೀ ತಾತನವರ ನೇತೃತ್ವದಲ್ಲಿ ಸನ್ಮಾನ!

ಬಳ್ಳಾರಿ ಜಿಲ್ಲೆ, ಸಿರಗುಪ್ಪ ತಾಲ್ಲೂಕು ನಾಗರಹಾಳು ಗ್ರಾಮದಲ್ಲಿ ಸರಳ ಮನ ಸ್ಸಿನ ಶರಣರಾದ ಪಂಡಿತ ಶ್ರೀ ನಾ. ಮ. ದೊಡ್ಡಯ್ಯಶಾಸ್ತ್ರಿಗಳವರು ಇದ್ದರು. ಇವರು ನಾಡಿಗೆ ಸಮಾಜಕ್ಕೆ ಮಾಡಿದ ಸೇವೆಯನ್ನು ಸ್ಮರಿಸಲು ನೆರೆಯ ಹಳ್ಳಿಗಳಾದ ಅಲಬನೂರು, ಬಿ. ಎಂ. ಸೂಗೂರು, ವೆಂಕಟಾಪುರ, ಹಾಗೂ ಆಗಸನೂರು, ನಾಡಂಗ ಇತ್ಯಾದಿ ಹಳ್ಳಿಯವರೆಲ್ಲಾ ನಾಗರಹಾಳು ಮಠದ ಶ್ರೀ ನಾ.ಮ. ಸಿದ್ಧರಾಮಯ್ಯನವರ ಮಾರ್ಗದರ್ಶನದಲ್ಲಿ ನಾಗರಹಾಳಲ್ಲಿನ ಮಠದಲ್ಲಿ ಕೂಡಿ ಶ್ರೀ ಶಾಸ್ತ್ರಿಗಳಿಗೆ ಸನ್ಮಾನ ಕಾರ್ಯ ಮಾಡಲು ನಿರ್ಧರಿಸಿದರು. ಹೊಗಳಿಕೆಗೆ ಹಿಗ್ಗದೆ, ತೆಗಳಿಕೆಗೆ ಕುಗ್ಗದೆ ಬಗೆ ಬಗೆಯ ಬಣ್ಣ ತೋರದ ಸಹಜ ಸುಂದರ ಬಾಳಿನಲ್ಲಿ ಬೆಳಕು ಕಂಡವರೆಂದರೆ ಶ್ರೀ ದೊಡ್ಡಯ್ಯಶಾಸ್ತ್ರಿಗಳು, ಬಿರುದು ಪ್ರಶಸ್ತಿಗಳಿಗಾಗಿ ಮನಕೊಡದೆ ತಮ್ಮ ಶಿವಾನುಭವದ ಸೇವೆ ನಾಡಿನ ಜನರಿಗೆ ತಿಳಿಸಿದ ಮಹಾ ಶರಣರು ಇವರು! ಇಂಥವರಿಗೆ ಸನ್ಮಾನಿಸುವುದರಲ್ಲಿ ಅತಿಶಯೋಕ್ತಿಯಿಲ್ಲವೆಂದು ಶ್ರೀ ತಾತನವರೇ ಈ ಮಹಾಕಾರ್ಯಕ್ಕೆ ಸಂಪೂರ್ಣವಾಗಿ ಹರಸಿ ತಮ್ಮ ನೇತೃತ್ವದಲ್ಲಿಯೇ ಶ್ರೀ ದೊಡ್ಡಯ್ಯಶಾಸ್ತ್ರಿಗಳನ್ನು ೧೯೭೭ರ ಜನವರಿ ತಿಂಗಳಲ್ಲಿ (೨೧-೧-೧೯೭೭)

ಸನ್ಮಾನಿಸಿ ಹೂವಮಾಲೆ ಹಾಕಿ ಶ್ರೀ ತಾತನವರು ಶಾಲು ಹೊದಿಸಿ ಮನಸಾರೆ ಆಶೀರ್ವದಿಸಿದರು. ಶ್ರೀ ಶಾಸ್ತ್ರಿಗಳವರು ಪರಮ ಪೂಜ್ಯ ತಾತನವರಿಗೆ ಬಹು ಸುಂದರ ಹಾರ ಹಾಕಿ ನುಡಿ ಮುತ್ತುಗಳಿಂದ ಶ್ರೀ ತಾತನವರ ಘನತೆಯ ಬಗ್ಗೆ ಭಕ್ತರಿಗೆ ಪ್ರವಚನದ ಮೂಲಕ ಹೇಳಿ ಎಲ್ಲರನ್ನೂ ಆನಂದ ಸಾಗರದಲ್ಲಿ ಮುಳುಗಿಸಿ ಭಾವನಾ ತರಂಗಗಳಿಂದ ಎಬ್ಬಿಸಿ ಕೃತಾರ್ಥರನ್ನಾಗಿ ಮಾಡಿದರು.

## (ಪ್ರಸಂಗ–೧೫)

### ಶ್ರೀ ಶೈಲದ ಕದಳೀ ಬನದಲ್ಲಿ ಶ್ರೀ ತಾತನವರ ಪೂಜೆ ಮಾಡಿದ್ದು

ಹಲವು ದಿನಗಳು ಕಳೆದ ನಂತರ ಕೆಲವು ಆತ್ಮೀಯ ಭಕ್ತರು ವಳಬಳ್ಳಾರಿ ಮಠಕ್ಕೆ ಬಂದು ದಕ್ಷಿಣ ಕೈಲಾಸವೆನ್ನುವ ಶ್ರೀ ಶೈಲಕ್ಕೆ ಹೋಗಿ ಬರಲು ಪ್ರಸ್ತಾಪ ಮಾಡಲು ಆರೋಗ್ಯ ಸರಿಯಾಗಿರದಿದ್ದರೂ ಭಕ್ತರ ಅಪೇಕ್ಷೆಗೆ ಒಪ್ಪಿ, ಭಕ್ತರ ಜೊತೆಗೆ ಶ್ರೀಶೈಲಕ್ಕೆ ವಳ ಬಳ್ಳಾರಿ ತಾತನವರು ಹೊರಟು ಶ್ರೀಶೈಲವನ್ನು ತಲುಪಿದರು. ಅಲ್ಲಿನ ಮಲ್ಲಿಕಾರ್ಜುನ ಲಿಂಗಕ್ಕೆ ಹಾಗೂ ಭ್ರಮರಾಂಬೆ ಮಹಾ ತಾಯಿಗೆ ಮಂಗಳಾ ರತಿ ಮಾಡಿಸಿದ ನಂತರ ವೀರಶೈವ ಪಂಚ ಪೀಠಗಳಲ್ಲಿ ಒಂದಾದ ಪಂಡಿತಾರಾಧ್ಯರ ಪೀಠವು ಗುಡಿಯ ಎಡಭಾಗದಲ್ಲಿರುವುದು ಕಂಡು ಪೀಠಕ್ಕೆ ವಂದಿಸಿ ಶ್ರೀ ತಾತನವರು ಗುರು ವಿರಕ್ತರ ಸಮನ್ವಯದಲ್ಲಿ ಕಂಡ ಕಣ್ಮಣಿಯಾಗಿ ಕಂಗೊಳಿಸಿದರು. ಜೊತೆಗೆ ಬಂದ ಭಕ್ತರಲ್ಲಿ ಮುಂದಾಳಾಗಿರುವ ಶ್ರೀ ಎಂ. ವಿರೂಪಾಕ್ಷಯ್ಯನು ಶ್ರೀ ತಾತನವರಿಗೆ ಬೆಳಗಿನ ಪೂಜೆ ಅಕ್ಕ ಮಹಾದೇವಿಯ ಕದಳೀ ಬನದಲ್ಲಿ ನಡೆಯಲಿ. ನಾವೆಲ್ಲಾ ಸಾಹಸ ಮಾಡಿಕೊಂಡು ಕರೆದುಕೊಂಡು ಹೋಗುವುದಾಗಿ ಶ್ರೀ ತಾತನವರನ್ನು ಒಪ್ಪಿಸಿ ಕದಳೀ ಬನಕ್ಕೆ ಕರೆದುಕೊಂಡು ಹೊರಟರು. ದಂಡಕಾರಣ್ಯದಲ್ಲಿ ಶೋಭಿಸುವ ಕಂಡ ಕಣ್ಣುಗಳಿಗೆ ನಲಿವನ್ನು ನೀಡುವ ದಂಡೆಯೊಳು ಹರಿವಂಥಾ ಕೃಷ್ಣಾನದಿಯು ಸೊಬಗಿನ ಸೌಂದರ್ಯ ಲಹರಿಯಲ್ಲಿ ಗಂಗೆಯು ಕಂಡು ಕಾಣಿಸದಂತೆ ಮುಳುಗಿ ತೇಲಿ ಹರಿಯುತ್ತಾ ವಿಸ್ಮಯವನ್ನು ಉಂಟುಮಾಡುವಳು. ಅಂತೂ ಕದಳೀ ಬನಕ್ಕೆ ಸೇರಿ ಶ್ರೀ ತಾತನವರ ಪೂಜೆಗೆ ಅಣಿಮಾಡಿ ತಾತನವರು ಪೂಜೆಗೆ ಕೂಡ್ರಲು ನೈವೇದ್ಯಕ್ಕೆ ಆಕಳು ಹಾಲು ತರುವುದು ಮರೆತು ಬಿಟ್ಟಿದ್ದರು. ಆಗ ಭಕ್ತಜನ ಹೌಹಾರಿ ಆ ದಂಡಕಾರಣ್ಯದಲ್ಲಿ ಹಾಲು ಸಿಗುವುದೆಂತು ? ಎಂದು ಆಲೋಚಿಸುವಾಗ ನದಿ ಚಾಗಿಯ ಮರಿದೇವರನ್ನು ಅಲ್ಲಲ್ಲಿ ಹುಡುಕಿರಿ, ಚಂಚರು ಕಾಯುವ ದನಗಳು ಇರ ಬಹುದೆಂದು ನೋಡಲು ಅಲ್ಲಿ ಯಾರೂ ಕಾಣಿಸದೆ ಇದ್ದಾಗ ಎಲ್ಲರೂ ದಿಗಿಲುಗೊಂಡರು ಅಂತಹ ಸಂದಿಗ್ಧ ಸಮಯದಲ್ಲಿ, ದೂರದಲ್ಲಿ ಓರ್ವ ಚಂಚರ ವೇಷದಲ್ಲಿರುವ ವ್ಯಕ್ತಿಯು

ಕೈಯಲ್ಲಿ ಆಕಳನ ಹಾಲಿನ ತಂಬಿಗೆಯನ್ನು ಹಿಡಿದುಕೊಂಡು ಬಂದು ಶ್ರೀ ತಾತನವರ ಪೂಜೆಗೆ ಕೊಟ್ಟನು. ಅವನ ದುಡ್ಡು ಕೊಡಬೇಕೆನ್ನುವಷ್ಟರಲ್ಲಿಯೇ ಆ ಚಂಚರವನು ಅಲ್ಲಿರದೆ ಮಾಯವಾಗಿದ್ದನು. ಇದನ್ನು ತಿಳಿದ ಶ್ರೀ ತಾತನವರು ಆ ಚಂಚರಾತನೇ ಶ್ರೀ ಗಿರಿಯ ಮಲ್ಲಯ್ಯನೆಂದೂ ಈ ರೂಪದಿಂದ ಬಂದು ತಮ್ಮ ಪೂಜೆಗೆ ಅಮೃತ ಕರುಣಿಸಿದನೆಂದು ವಿನಮ್ರತೆಯಿಂದ ವಿಚಾರ ಮಾಡಿ, ಎಲ್ಲವೂ ಶಿವನ ಇಚ್ಛೆಯೆಂದು ಪೂಜೆ ಮುಗಿಸಿದರಂತೆ. ಇಂತಹ ಮಹಾ ಪವಾಡಕ್ಕೆ ಭಕ್ತರೆಲ್ಲರೂ ಭಕ್ತಿಯ ಆಧಿಕ್ಯ ದಿಂದ ತಮ್ಮ ಆನಂದ ವ್ಯಕ್ತಪಡಿಸಿ ಶ್ರೀ ತಾತನವರ ಘನತೆಯನ್ನು ಕೊಂಡಾಡಿ ಅಲ್ಲಿಂದ ತಮ್ಮ ಮಠಕ್ಕೆ ಬಂದು ಸೇರಿದರಂತೆ.

## ಹದಿಮೂರನೆಯ ಸಂಧಿ (ವಜ್ರಮಹೋತ್ಸವ)

### ಶ್ರೀ ತಾತನವರು ತಮ್ಮ ವೃದ್ಧಾಪ್ಯವನ್ನು ಗಮನಿಸಿ ದೇಶಿಕರಿಗೆಲ್ಲಾ ಪಟ್ಟಾಧಿಕಾರ ಮಾಡಿದ್ದು

ಕನಕಗಿರಿ ಶ್ರೀ ಗುರುಗಳ ಕೃಪೆಯೊಳಗೆ ವಳಬಳ್ಳಾರಿ ಶ್ರೀ ತಾತನವರು ಜಗತ್ತಿನಲ್ಲಿ ಅನೇಕ ಲೀಲಾ ವಿಲಾಸಗಳನ್ನು ಮಾಡಿದರು. ಸ್ವಯ, ಚರ ಮತ್ತು ಪರ ಜಂಗಮರಾಗಿ ಸೇವೆ ಸಲ್ಲಿಸಿದರು. ಸೇವೆ ಮಾಡಿ ದಣಿದು ವೃದ್ಧರಾದರು. ಈ ಕಾರಣ ದಿಂದ ವಳಬಳ್ಳಾರಿ ಮಠ, ನದಿಚಾಗಿ ಹಾಗೂ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ನೇಮಕ ಗೊಂಡ ಮರಿದೇವರುಗಳಿಗೆಲ್ಲಾ ಪಟ್ಟಾಧಿಕಾರ ಮಾಡಬೇಕೆಂಬ ತಮ್ಮ ಶಿವ ಸಂಕಲ್ಪ ವನ್ನು ಭಕ್ತರ ಮುಂದೆ ಇಡಲು ಎಲ್ಲಾ ಭಕ್ತ ಜನಗಳು ಒಪ್ಪಿದರು. ಬಸವಯ್ಯ ಮತ್ತು ನೀಲಮ್ಮರೆಂಬ ಶರಣ ದಂಪತಿಗಳು ಬಳ್ಳಾರಿ ಜಿಲ್ಲೆಗೆ ಸೇರಿದ ಹಡಗಲಿ ತಾಲೂಕಿನ ಮಾಗಳ ಗ್ರಾಮಕ್ಕೆ ಸೇರಿದವರು. ಈ ಶರಣ ದಂಪತಿಗಳ ಸುಪುತ್ರ ರತ್ನವೇ ಮುಂದೆ ಅಡವಿ ಅಮರೇಶ್ವರನ ಕ್ಷೇತ್ರಕ್ಕೆ ಶಾಂತಮಲ್ಲ ಮಹಾಸ್ವಾಮಿಗಳಾಗಿ ನೇಮಕ ವಾದರು. ಬಿಜಾಪುರ ಜಿಲ್ಲಾ, ಬಾದಾಮಿ ತಾಲೂಕಿಗೆ ಸೇರಿದ ಬೇಲೂರು ಗ್ರಾಮದ ದೇಶಿಕರೇ ನದಿಚಾಗಿಯ ತೋಂಟದಾರ್ಯನೆಂದು ನೇಮಕಗೊಂಡನು. ಧಾರವಾಡ ಜಿಲ್ಲಾ ಹಾನಗಲ್ ತಾಲೂಕು ಕಾಡಶೆಟ್ಟಿಹಳ್ಳಿಯ ಶರಣ ದಂಪತಿಗಳಾದ ಗುರು ಪಾದಯ್ಯ ಸರ್ವಮಂಗಳ ಇವರ ಸುಪುತ್ರ ರತ್ನವೇ ವಳಬಳ್ಳಾರಿ ಸಂಸ್ಥಾನ ಮಠಕ್ಕೆ ನೇಮಕಗೊಂಡ ಸಿದ್ಧಲಿಂಗ ಮಹಾಸ್ವಾಮಿಗಳು.

ಈ ಮೇಲೆ ಸೂಚಿಸಿದವರ ದೇಶಿಕರ ತಂದೆ ತಾಯಿಗಳನ್ನು ಒಪ್ಪಿಸಿ ತಮ್ಮ ಹಾಗೂ ಶಾಖಾ ಮಠಗಳಿಗೆ ಸ್ವಾಮಿಗಳನ್ನು ಮಾಡಿ ಪಟ್ಟಾಧಿಕಾರ ಮಾಡಬೇಕೆಂಬ ವಿಷಯವನ್ನು ಬಾದರ್ಲಿ ವೆಂಕಟರಾಯರು, ಸಿಂಧನೂರಿನ ಗೌಡರೂ, ಮಾನವಿಯ

ಗೌಡರು, ಸಿರುಗುಪ್ಪ, ಆದವಾನಿ ತಾಲೂಕಿನ ಎಲ್ಲಾ ಭಕ್ತರನ್ನೂ ಕೂಡಿಸಿ ಪಟ್ಟಾಧಿಕಾರದ ಮಹಾ ಕಾರ್ಯದ ಬಗ್ಗೆ ತಿಳಿಸಿದರು. ಈ ಮಹಾ ಕಾರ್ಯದ ಜೊತೆಗೆ ತಾತನವರಿಗೆ ವಜ್ರಮಹೋತ್ಸವವನ್ನು ಮಾಡಲು ಶ್ರೀ ಕೊಟ್ಟೂರು ಸ್ವಾಮಿಗಳ ಅಭಿಮತದಂತೆ ಭಕ್ತರು ತಾತನವರನ್ನು ಕೇಳಿ ಕೊನೆಗೆ ಒಪ್ಪಿಸಿ, ಈ ಎರಡೂ ಮಹತ್ ಕಾರ್ಯಗಳನ್ನು ಯಶಸ್ವಿಗೊಳಿಸಲು ಅಸಂಖ್ಯ ಭಕ್ತರು ಹರಗುರು ಚರವರೇಣ್ಯರು ಶ್ರಮಿಸಿ ಕಾರ್ಯೋನ್ಮುಖರಾದರು.

ಮೂರುಸಾವಿರ ಮಠದ ಜಗದ್ಗುರು ಗಂಗಾಧರ ರಾಜಯೋಗೀಂದ್ರ ಮಹಾ ಸ್ವಾಮಿಗಳ ಅಧ್ಯಕ್ಷತೆಯಲ್ಲಿ ಶ್ರೀ ತಾತನವರ ದಿವ್ಯ ನೇತೃತ್ವದಲ್ಲಿ ದೇಶಿಕರಿಗೆ ಪಟ್ಟಾಧಿಕಾರ ನಡೆದು ಪಾಲಿಕೋತ್ಸವವು ಸುಂದರದಿಂದ ನಡೆಯಿತು. ಶ್ರೀ ತಾತನವರಿಗೆ ಎಪ್ಪತ್ತೈದು ವರ್ಷಗಳ ಸ್ಮಾರಕವಾಗಿ ವಜ್ರಮಹೋತ್ಸವವನ್ನು ಅದೇ ೧೯೭೪ರ ಮೇ ತಿಂಗಳು ಹತ್ತನೇ ತಾರೀಕಿನ ದಿನ ಶ್ರೀ ತಾತನವರಿಗೆ ಮಾಡಿ ಶ್ರೀ ಮೂಜಗಂ ಅವರು ಶ್ರೀ ತಾತನಿಗೆ ಹೂಮಳೆಗರೆದು ತಮ್ಮ ಘನತೆ ಹೆಚ್ಚಿಸಿಕೊಂಡರು. ದೇಶಿಕರಿಗೆ ಪಟ್ಟಾಧಿಕಾರ ಹಾಗೂ ತಾತನವರಿಗೆ ವಜ್ರಮಹೋತ್ಸವ ಕಾರ್ಯದ ಬಗ್ಗೆ ವಿವರಿಸಿದರೂ ಪೂರ್ಣ ವಿವರ (ಕಾವ್ಯದಲ್ಲಿನ ಪದ್ಯಗಳು ನೋಡಿರಿ) ಅಂತು ಈ ಎಲ್ಲಾ ಕಾರ್ಯಕ್ಕೆ ಶ್ರೀ ಕೊಟ್ಟೂರು ಸ್ವಾಮಿಗಳು ಸೇವೆ ಘನತರವಾದದ್ದು ಎಂದು ಹೇಳಲು ಅತಿಶಯೋಕ್ತಿಯಲ್ಲ.

## ಹದಿನಾಲ್ಕನೆಯ ಸಂಧಿ

### ಸಿರುಗುಪ್ಪೆಯಲ್ಲಿನ ಅಯ್ಯಪ್ಪ ಧಣಿಯ ಬಿಲ್ವ ವನದಲ್ಲಿ ಶ್ರೀ ತಾತನವರು ಅನುಷ್ಠಾನ ಮಾಡಿದ್ದು

ಪಟ್ಟಾಧಿಕಾರದ ಹಾಗೂ ವಜ್ರಮಹೋತ್ಸವದ ಮಹಾ ಕಾರ್ಯಗಳಲ್ಲಿ ಅಸ್ವಸ್ಥರಾದ ಶ್ರೀ ತಾತನವರು ವಿಶ್ರಾಂತಿಗೆಂದು ಸಿರುಗುಪ್ಪೆಯ ಅಯ್ಯಪ್ಪನವರ ಮನೆಗೆ ದಯಮಾಡಿಸಿ ಸಾಯಂಕಾಲ ಮನೆಯ ಮುಂದೆ ಇರುವ ಬಿಲ್ವವನದಲ್ಲಿ ಚರಿಸಿ ಪ್ರಶಾಂತತೆಯನ್ನು ಅಪೇಕ್ಷಿಸಿದರು. ಸಿದ್ಧ ಪುರುಷನಾದ ವಶಿಷ್ಠ ಮಹಾಮುನಿ ಬಿಲ್ವ ವೃಕ್ಷದ ಬುಡದಲ್ಲಿ ಶಿವಪೂಜೆಯನ್ನು ಮಾಡಿ ಭಕ್ತ ಶ್ರೇಷ್ಠನೆನಿಸಿದ್ದು ಹಾಗೂ ಈ ಯಾವ ಮಹಾಮುನಿಯನ್ನು ನೋಡಿದ ಓರ್ವ ರಾಜನು ತನ್ನ ಹಿಂಸೆಯ ಗುಣವನ್ನು ಬಿಟ್ಟು ಅಹಿಂಸಾ ಪರಮೋ ಧರ್ಮ ಗುಣಗಳನ್ನು ಪಡೆದನೆಂದೂ ಬಿಲ್ವ ಮಹಿಮೆಯನ್ನು ಹೇಳುತ್ತಾ, ಕೆಲದಿನಗಳು ಬಿಲ್ವ ವನದಲ್ಲಿ ಶ್ರೀ ತಾತನವರು ಅನುಷ್ಠಾನ ಮಾಡಿ

ಅಲ್ಲಿ ಇರುವಾಗ್ಗೆ ಪಟ್ಟಾಧಿಕಾರ ಹಾಗೂ ವಜ್ರ ಮಹೋತ್ಸವದ ಕಾರ್ಯದಲ್ಲಿ ಉಳಿದ ಧನ ಧಾನ್ಯ ಇತ್ಯಾದಿ ಸಂಗ್ರಹಗಳಿಂದ ಒಂದು ಸ್ಮಾರಕ ಮಂಟಪ ಅರ್ಥಾತ್ ದಾಸೋಹ ಮಂಟಪ ಕಟ್ಟಿಸಬೇಕೆಂಬ ಕೆಲವು ಜನ ಭಕ್ತರು ಸಿರುಗುಪ್ಪೆಗೆ ಬಂದು ತಿಳಿಸಲು ಆ ಕಾರ್ಯ ನಿಮಿತ್ತ ಶ್ರೀ ತಾತನವರು ಅನಿವಾರ್ಯವಾಗಿ ವಳಬಳ್ಳಾರಿ ಮಠಕ್ಕೆ ತೆರಳಿದರು.

## ಹದಿನೈದನೆಯ ಸಂಧಿ

### ವಳಬಳ್ಳಾರಿಯಲ್ಲಿ ದಾಸೋಹ ಮಂಟಪ ಕಟ್ಟಿಸಿದುದು

ದಾಸೋಹ ಮಂಟಪದ ನಿರ್ಮಾಣ ಕಾರ್ಯ ಸರ್ವತೋಮುಖವಾಗಿ ಸಾಗಿರಲು ಅದಕ್ಕೆ ಧನವೂ ಅಷ್ಟೇ ಭರದಲ್ಲಿ ಖರ್ಚಾಯಿತು. ಇದು ದೊಡ್ಡವರು ಮಾಡುವ ಕಾರ್ಯವೆಂದೂ ತಾವು ಸಣ್ಣ ಹಳ್ಳಿಯ ಮಠದ ಸ್ವಾಮಿಗಳೆಂದೂ ಶ್ರೀ ತಾತನವರು ವೃದ್ಧಾಪ್ಯದಲ್ಲಿ ಚಿಂತಿಸಿದರು. ತಾತನವರ ದೇಹ ಸೊರಗಿತು. ಶಕ್ತಿ ಗುಂದಿತು. ಭಕ್ತ ಜನರು ಹಳ್ಳಿಯ ವೈದ್ಯರಿಂದ ಸೇವೆ ಮಾಡಿಸಿದರು. ಶ್ರೀ ಕೊಟ್ಟೂರು ಸ್ವಾಮಿಗಳ ಅಪೇಕ್ಷೆಯಂತೆ ಶ್ರೀ ತಾತನವರನ್ನು ತೋರಿಸಲು ಬಳ್ಳಾರಿ ನಗರಕ್ಕೆ ಕಾರಿನಲ್ಲಿ ಪ್ರಯಾಣ ಮಾಡಿಸಿ ಕರೆತಂದರು. ನುರಿತ ಡಾ|| ಪಂಪನಗೌಡರು ಹಾಗೂ ಅನುಭವಿ ಡಾ|| ದೊಡ್ಡ ಮಲ್ಲಪ್ಪನವರು ಶ್ರೀ ತಾತನವರ ಆರೋಗ್ಯ ವಿಚಾರಿಸಿ ತಾತನಿಗೆ ವಂದಿಸಿ ನರಗಳ ದುರ್ಬಲತೆಯಿಂದ ಹೀಗಾಗಿದೆಯೆಂದು ಔಷಧೋಪಚಾರ ಗೈದರು ಅಲ್ಲಿನ ಕೊಟ್ಟೂರು ಸ್ವಾಮಿಗಳ ಮಠದಲ್ಲಿ ವಿಶ್ರಾಂತಿ ಪಡೆಯಿರಿ ಎಂದು ಎಲ್ಲಾ ಭಕ್ತರ ಅಪೇಕ್ಷೆಗೆ ಒಪ್ಪಿ ಬಳ್ಳಾರಿಯಲ್ಲಿಯೇ ಉಳಿದರು. ಕೊಟ್ಟೂರು ಸ್ವಾಮಿಗಳ ಮಠದಲ್ಲಿರುವಾಗ್ಗೆ ಶ್ರೀ ತಾತನವರು ತಮ್ಮ ಎಲ್ಲಾ ಖರ್ಚನ್ನು ತಾವೇ ಭರಿಸಿಕೊಂಡು ಇತರರಿಗೆ ನೋವನ್ನುಂಟುಮಾಡದ ದಯಾಮಯಿ ಶ್ರೀ ತಾತನವರು ಎಲ್ಲಾ ಕಿರಿಯ ಸ್ವಾಮಿಗಳನ್ನು ಕಳುಹಿಸಿ. ಸೇವಾ ಕಿಂಕರನಾದ ಶಿವನಗೌಡನನ್ನು ಉಳಿಸಿಕೊಂಡರು. ಈ ಸಮಯದಲ್ಲಿ ಈ ಯಾವ ಚನ್ನಬಸವ ಲೀಲಾ ಕಾವ್ಯ ರಚಿಸಿರುವ ಶಿವಕವಿಗಳಾದ ನಾ. ಮ. ಸಿದ್ಧರಾಮಯ್ಯನವರು ಬಳ್ಳಾರಿಯ ಗಾಂಧಿನಗರದಲ್ಲಿ ಕಟ್ಟಿಸಿದ ನೂತನ ಗೃಹ ಪ್ರವೇಶದ ಕಾರ್ಯಕ್ಕೆ ಶ್ರೀ ತಾತನವರು ಬರುವುದಾಗಿ ಅಪ್ಪಣೆ ಕೊಡಿಸಿದ್ದರು. ಕವಿಯು ಮಾಡಿದ ಪುಣ್ಯದ ಫಲವೋ ಏನೋ ಅಂತೂ ಈ ಹಿಂಪೆಯೇ ಆ ಮನೆಯು ಇನ್ನೂ ಅಪೂರ್ಣವಾದಾಗ್ಗೆ ಒಮ್ಮೆ ಶ್ರೀ ತಾತನವರು

ಚಿನ್ನಹದ ಮೇರೆಗೆ ಆಗಮಿಸಿ, ಸಂಕ್ಷಿಪ್ತ ಪಾದಪೂಜೆ ಮಾಡಿಸಿಕೊಂಡಿದ್ದರು. ನಂತರ ಕವಿಗಳಿಗೆ ಶಕ್ತಿ ತುಂಬಿ ಹರಸಿದ್ದರು. ಈಗ ನೂತನ ಗೃಹ ಪೂಜೆಗೆ ಶ್ರೀ ತಾತನವರು ಒಳ್ಳೇ ಹರುಷದಿಂದ ಒಪ್ಪಿ ಬರುವುದಾಗಿ ಹೇಳಿದ್ದರು. ಕವಿಗಳಿಗೆ ತೀರ್ಥರೂಪರಾದ ಶ್ರೀ ತಾತನವರಿಗೆ ಆಸ್ಥಾನ ಪಂಡಿತರಾದ ಪಂಡಿತ ಶ್ರೀ ದೊಡ್ಡಯ್ಯಶಾಸ್ತ್ರಿಗಳವರ ಅಧ್ಯಕ್ಷತೆಯಲ್ಲಿ ಶ್ರೀ ತಾತನವರ ದಿವ್ಯ ನೇತೃತ್ವದಲ್ಲಿ ಶಿವಕವಿ ನಾ.ಮ ಸಿದ್ಧರಾಮಯ್ಯ ನವರ ನೂತನ ಗೃಹದ ಪೂಜೆ ಮುಗಿಯಿತು. ಕವಿಗಳು ಭಕ್ತಿಯಿಂದ ತಂದ ಕೌಪೀನ, ಶಲ್ಯ ಅತ್ಯಂತ ಹರ್ಷದಿಂದ ಸ್ವೀಕರಿಸಿ ಅವುಗಳನ್ನು ತೊಟ್ಟು ಕೊಂಡರು. ಗಣ ತೃಪ್ತಿಯೊಂದಿಗೆ ಕಾರ್ಯ ಶೋಭಿಸಿ ದಿನಾಂಕ ೨೬-೪-೧೯೭೨ ರಂದು ಎಲ್ಲರಿಗೂ ಮಂಗಲವನ್ನುಂಟುಮಾಡಿತು. ಕೆಲವು ಗಂಟೆಗಳು ಮಂಚದ ಮೇಲೆ ಪವಡಿಸಿ ವಿಶ್ರಾಂತಿ ಪಡೆದ ಶ್ರೀ ತಾತನವರು ನಂತರ ಮನೆಯವರನ್ನೆಲ್ಲಾ ಹರಸಿ ಕವಿಪತ್ನಿ ಉಮಾದೇವಿಯವರಿಗೂ ಹಾಗೂ ಪಂಡಿತ ದೊಡ್ಡಯ್ಯಶಾಸ್ತ್ರಿಗಳವರ ಸತಿಸಾಧ್ವಿ ಬಸವಮ್ಮನವರಿಗೂ ಫಲತಾಂಬೂಲಾದಿಗಳಿಂದ ಹರಸಿ ಪ್ರತ್ಯೇಕದಲ್ಲಿ ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರನ್ನು ಹಾಗೂ ಕವಿಗಳಾದ ಸಿದ್ಧರಾಮಯ್ಯನವರನ್ನು ಆಶೀರ್ವದಿಸಿ, ಕವಿ ಗಳು ಕೊಟ್ಟ ಕಾಣಿಕೆ ಸಂತೃಪ್ತಿಯಿಂದ ಸ್ವೀಕರಿಸಿ ಕಾರಿನಲ್ಲಿ ಕೊಟ್ಟೂರು ಸ್ವಾಮಿಗಳ ವರ ಮಠಕ್ಕೆ ತೆರಳಿದರು. ಬಳ್ಳಾರಿಯಲ್ಲಿನ ಕೊಟ್ಟೂರು ಸ್ವಾಮಿಗಳ ಮಠದಲ್ಲಿ ವಿಶ್ರಾಂತಿ ಪಡೆಯುವ ಶ್ರೀ ತಾತನನ್ನು ದರ್ಶನ ಮಾಡಿ ನಂತರ ಭಕ್ತರು ಕೊಟ್ಟ ಕಾಣಿಕೆಯ ಧನ ಸಂಗ್ರಹವನ್ನು ಅಲ್ಲಿನ ಪ್ರಸಾದ ನಿಲಯಕ್ಕೆ ಕೊಟ್ಟು ನಿರಂಜನ ಮೂರ್ತಿಗಳ ನಿಜದ ನಿಲುವಿನಲ್ಲಿ ನಿಂತು ಬೆಳಗಿದವರು ಶ್ರೀ ತಾತನವರು ! ಕೆಲವು ದಿನ ಗಳು ಇದ್ದ ನಂತರ ಶ್ರೀ ಜಗದ್ಗುರು ಸಂಗನ ಬಸವ ಸ್ವಾಮಿಗಳನ್ನು ಕರೆದು ತಮ್ಮ ಅನುಕೂಲ ನೋಡಿಕೊಂಡು ವಳ ಬಳ್ಳಾರಿಗೆ ಬರಲು ಹೇಳಿ ಆದವಾನಿಯ ಧೀಮಂತ ಬುಸಣ್ಣ ಧಣಿಯವರ ಕಾರಿನಲ್ಲಿ ವಳಬಳ್ಳಾರಿಗೆ ತೆರಳುವ ಮುನ್ನ ಕೊಟ್ಟೂರು ಸ್ವಾಮಿ ಗಳವರ ಮೂಲ ಗದ್ದುಗೆಗೆ ಕಾಯಿ ಕರ್ಪೂರ ಮಾಡಿಸಿ ಆಶೀರ್ವಾದ ಪಡೆದು ವಳಬಳ್ಳಾರಿಗೆ ಬಂದು ಸೇರಿದರು.

ದಾಸೋಹ ಮಂಟಪದ ಕಟ್ಟಡ ಹೇಗೋ ಅಂತು ಮುಗಿದುದಕ್ಕಾಗಿ ಸಂತೋಷಿ ಸಿದ ಶ್ರೀ ತಾತನವರು ಅದರ ಉದ್ಘಾಟನಾ ಸಮಾರಂಭದ ಕಾರ್ಯವನ್ನು ಶ್ರೀ ಕೊಟ್ಟೂರು ಸ್ವಾಮಿಗಳವರನ್ನು ಕರೆಸಿ ಕಾರ್ಯಕ್ರಮಗಳನ್ನು ಏರ್ಪಡಿಸಿದರು. ೧೯೭೨ರ ಮೇ ತಿಂಗಳ ೫ನೇ ತಾರೀಕಿಗೆ ಸರಿಯಾಗಿ ವಿವಿಧ ಕಾರ್ಯಗಳು ನಡೆದವು, ದಾಸೋಹ ಮಂಟಪದ ಉದ್ಘಾಟನಾ ಕಾರ್ಯಾಂಗವಾಗಿ ಬೆಳಗ್ಗೆ ಮಠದ ಅಂಗಳದಲ್ಲಿ ಮುಂಡಗಿರಿ ಮಠದ ಶ್ರೀ ಬೋಳ ಬಸವ ಮಹಾಸ್ವಾಮಿಗಳವರಿಂದ ಷಟ್‌ಸ್ಥಲ ಧ್ವಜಾ ರೋಹಣ ಕಾರ್ಯ ನೆರವೇರಿತು. ದಾಸೋಹ ಮಂಟಪದ ಉದ್ಘಾಟನೆಯು ಶ್ರೀ ಮ. ನಿ. ಪ್ರ. ಹಾನಗಲ್ ಸದಾಶಿವ ಮಹಾಸ್ವಾಮಿಗಳು ಇವರ ಅಮೃತ ಹಸ್ತ

ದಿಂದ ಹುಬ್ಬಳ್ಳಿ ಮೂರು ಸಾವಿರ ಮಠದ ಜಗದ್ಗುರು ಶ್ರೀ ಶ್ರೀ ಶ್ರೀ ಗಂಗಾಧರ ರಾಜ ಯೋಗೀಂದ್ರ ಮಹಾಸ್ವಾಮಿಗಳವರ ದಿವ್ಯ ಸಮ್ಮುಖದಲ್ಲಿ ನೆರವೇರಿತು. ನಂತರ ಹುಬ್ಬಳ್ಳಿ ರುದ್ರಾಕ್ಷಿ ಮಠದ ಶ್ರೀಗಳವರ ಘನ ಅಧ್ಯಕ್ಷತೆಯಲ್ಲಿ ಹಾಗೂ ನಾಗ್ನೂರ್ ಮಠದ ಶ್ರೀಗಳ ಕೃಪೆಯೊಳಗೆ ವಿವಿಧ ಗೋಷ್ಠಿಗಳು ನಡೆದವು. ಈ ಮಹಾ ಕಾರ್ಯ ದಲ್ಲಿ ನೂರೆಂಟು ಸಾಮೂಹಿಕ ವಿವಾಹಗಳು ಶ್ರೀ ತಾತನವರ ದಿವ್ಯ ನೇತೃತ್ವದಲ್ಲಿ ಸಾಂಗ ವಾಗಿ ಜರುಗಿದವು. ವಿದ್ವದ್ ಗೋಷ್ಠಿಯಲ್ಲಿ ಭಾಗವಹಿಸಲು ಹಾಗೂ ತಮ್ಮ ಆತ್ಮೀಯ ಗುರುಗಳಾದ ಶ್ರೀ ತಾತನವರ ಪ್ರೇಮಾಶೀರ್ವಾದ ಪಡೆಯಲು ಬಂದಿದ್ದ ನಾಗರಹಾಳು ಮಠದ ಶ್ರೀ ದೊಡ್ಡಯ್ಯ ಶಾಸ್ತ್ರಿಗಳಿಗೆ ಶ್ರೀ ತಾತನವರು "ಇದೇ ಕೊನೆಯ ದೊಡ್ಡ ಕಾರ್ಯ ದೊಡ್ಡಪ್ಪನವರೇ ! " ಇನ್ನು ತಮ್ಮ ಕಾಲ ಸನ್ನಿಹಿತವಾಗಿದೆಯೆಂದೂ ಹೇಳಿದಾಗ್ಗೆ ಶ್ರೀ ಶಾಸ್ತ್ರಿಗಳು ಅನುನಯದಿ ತಮ್ಮ ಚಿತ್ತ ಬುದ್ಧಿ ಅರಿಯಲು ಆರಿಗೂ ಅಸಾಧ್ಯವಾದುದು ಎಂದು ಕಿಂಕರದಿ ಮಾತನಾಡುತ್ತಾ ಶ್ರೀ ತಾತನವರ ದೇಹಕ್ಕೆ ವಿಶ್ರಾಂತಿ ಅವಶ್ಯಕವೆಂದು ಹೇಳಿ, ಆಶೀರ್ವಾದ ಪಡೆದು ತಮ್ಮ ನಾಗರಹಾಳಿಗೆ ಶಾಸ್ತ್ರಿ ಗಳು ತೆರಳಿದರು. ಈ ಎಲ್ಲಾ ಕಾರ್ಯಗಳಿಗೆ ಕಾರಣೀಭೂತರಾದ ಜಗದ್ಗುರು ಹೇಮಕೂಟ ಸಿಂಹಾಸನಾಧೀಶ್ವರ ಶ್ರೀ ಶ್ರೀ ಶ್ರೀ ಕೊಟ್ಟೂರು ಸ್ವಾಮಿಗಳ ಮಠ ದೊಡೆಯರಾದ ಸಂಗನಬಸವ ಮಹಾಸ್ವಾಮಿಗಳು ಪ್ರೇರಕ ಶಕ್ತಿಯಾಗಿ ಮಿಂಚಿದ ಭವ್ಯತೆ, ಧೀಮಂತತೆಯನ್ನು ಶ್ರೀ ತಾತನವರಿಂದ ಪಡೆದು ಪುಣ್ಯ ಮೂರ್ತಿಗಳಾ ಗಿದ್ದರು. ಮಠದ ಕಿರಿಯ ಸ್ವಾಮಿಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಠದ ಘನತೆಗೆ ಕುಂದು ಬಾರದೆ ದಾಸೋಹ ಕಾರ್ಯ ಹಾಗೂ ಇನ್ನಿತರ ಮಠದ ಆಗುಹೋಗುಗಳನ್ನು ಶ್ರೀ ತಾತನವರ ಕೃಪೆಯಲ್ಲಿ ಚೆನ್ನಾಗಿ ನೋಡಿಕೊಂಡು ಹೋಗು ತ್ತಿದ್ದರು. ಇದೇ ಪ್ರಕಾರ ಅಡವಿ ಅಮರೇಶ್ವರದ ಶ್ರೀ ಶಾಂತಮಲ್ಲ ಮಹಾಸ್ವಾಮಿ ಗಳವರೂ ನದಿಚಾಗಿಯ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳವರೂ ಸಹ ಭಕ್ತರ ಉದ್ಧಾರ ಕಾರ್ಯಗಳಲ್ಲಿ ಭಾಗಿಯಾಗಿ ದಕ್ಷತೆಯಿಂದ ತಮ್ಮ ತಮ್ಮ ಮಠದ ಕಾರ್ಯ ಗಳನ್ನು ಜೊತೆಗೆ ಕೇಂದ್ರ ಮಠವಾದ ವಳಬಳ್ಳಾರಿ ಮಠದ ಕಾರ್ಯಕ್ರಮಗಳಲ್ಲೂ ಭಾಗಿಯಾಗುತ್ತಾ ಇಂದಿಗೂ ಶ್ರೀ ತಾತನವರ ಕೃಪೆಯಲ್ಲಿ ಬೆಳಗುವ ಜ್ಯೋತಿ ಗಳಾಗಿದ್ದಾರೆ.

## ಹದಿನಾರನೆಯ ಸಂಧಿ

### ಶ್ರೀ ತಾತನವರು ಪರಮ ಲೀಲೆಗಳನ್ನು ಮಾಡಿ ಲಿಂಗದೊಳಗಾದದ್ದು

"ಭಕ್ತಿಯೆಂಬ ಪೃಥ್ವಿಯ ಮೇಲೆ ಗುರುವೆಂಬ ಬೀಜವಂಕುರಿಸಿ, ಲಿಂಗವೆಂಬ ಎಲೆಯಾಯಿತ್ತು ; ಲಿಂಗವೆಂಬ ಎಲೆಯ ಮೇಲೆ ವಿಚಾರವೆಂಬ ಹೂವಾಯಿತ್ತು ;

ಆಚಾರವೆಂಬ ಕಾಯಾಯಿತ್ತು ; ನಿಷ್ಪತ್ತಿಯೆಂಬ ಹಣ್ಣಾಯಿತ್ತು ; ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಬಿಟ್ಟು ಕಳಚಿ ಬೀಳುವಲ್ಲಿ ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ”

— ಬಸವಣ್ಣನವರು

ಮೇಲೆ ಉದಾಹರಿಸಿದ ಭಗವಾನ್ ಬಸವಣ್ಣನವರ ವಚನ ನಮ್ಮ ವಳಬಳ್ಳಾರಿ ಶ್ರೀ ತಾತನವರಿಗೆ ವೃದ್ಧಾಪ್ಯದಲ್ಲಿನ ಸುಸಮಯದಲ್ಲಿ ಚನ್ನಾಗಿ ಅನ್ವಯಿಸುತ್ತಿತ್ತು. ಶ್ರೀ ತಾತನವರ ದೇಹವು ದಿನ ದಿನಕ್ಕೆ ಸೊರಗಿ ಶ್ರೀಗಂಧದ ಚಕ್ಕೆಯಂತೆ ಸಮಾಜ ಸೇವೆಯಲ್ಲಿ ಸವೆಯಲ್ಪಟ್ಟು ಅವರ ಸೌಗಂಧ ಧರ್ಮಾಚರಣೆಯ ಕಂಪು ಎಲ್ಲಾ ನಾಡಿನಲ್ಲಿ ಹರಡಿತ್ತು. ಮಠದ ಎಲ್ಲಾ ವ್ಯವಹಾರಗಳನ್ನು ಕುಂದು ಬಾರದ ಹಾಗೆ ನೋಡಿಕೊಳ್ಳಿರೆಂದು ತಮ್ಮ ಉತ್ತರಾಧಿಕಾರಿಗಳಾದ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳಿಗೂ, ಅಡವಿ ಅಮರೇಶ್ವರದ ಶ್ರೀ ಶಾಂತಮಲ್ಲ ಮಹಾಸ್ವಾಮಿಗಳಿಗೂ ಮತ್ತು ನದಿಚಾಗಿಯ ಶ್ರೀ ತೋಂಟದಾರ್ಯ ಮಹಾಸ್ವಾಮಿಗಳಿಗೂ ಹೇಳಿ ಇನ್ನು ತಮ್ಮ ಇಹಲೋಕದ ಸೇವೆ ಮುಗಿಯುತ್ತಾ ಬಂದಿದೆ, ಸಮಾಜದಲ್ಲಿ ಜಾಗೃತರಾಗಿ ಸೇವೆ ಸಲ್ಲಿಸಿರೆಂದು ಹಾರೈಸಿದರು.

ಒಂದು ದಿನ ತಾತನವರಿಗೆ ವಿಷಮ ಜ್ವರ ಕಾಣಿಸಿಕೊಳ್ಳಲು ಅಲ್ಲಿ ಸಮೀಪದ ಹಳ್ಳಿ ವೈದ್ಯರು ಔಷಧಿ ಕೊಟ್ಟು ಗುಣಪಡಿಸಿದರು. ಅದೇ ಸಮಯದಲ್ಲಿ ಶ್ರೀ ತಾತನವರು ಸಮಾಧಿ ಮಾಡುವ ಜಾಗವನ್ನು ತೋರಿಸಲು ಕೇಳಬೇಕೆಂಬ ಭಕ್ತರ ಅಪೇಕ್ಷೆಯಂತೆಯೇ ಕೇಳಲು ಶ್ರೀ ತಾತನವರು ಗುರುಮಠದ ಗದ್ದುಗೆಗೆ ಎದುರುಗಡೆ ಇರುವ ಕಟ್ಟೆಯ ಜಾಗವನ್ನು ತೋರಿಸಿ, ತಾವು ಎಲ್ಲಾ ಮತ, ಜಾತಿ, ಪಂಥದವರಿಗೂ ಬೇಕಾಗಿರುವುದರಿಂದ ತಮ್ಮ ಸಮಾಧಿ ಹೊರಗಡೆಗೆ ಆಗಬೇಕೆಂದು ತಮ್ಮ ಕೊನೆಯ ಅಪೇಕ್ಷೆಯನ್ನು ಭಕ್ತರ ಆಗ್ರಹದಂತೆ ಅನಿವಾರ್ಯವಾಗಿ ತಿಳಿಸಿದರು. ಅದಕ್ಕೆ ಸಿದ್ಧಲಿಂಗಸ್ವಾಮಿಗಳು ಭಕ್ತಿಯಿಂದ ಆ ಕಾರ್ಯ ಮೊದಲೇ ಮಾಡಿಇಬೇಕೆಂದು ಕ್ರಿಯಾ ಸಮಾಧಿಯನ್ನು ವಿದ್ಯುಕ್ತವಾಗಿ ಮಾಡಲು ಮನಸ್ಸು ಮಾಡಿದರು. ವೀರಶೈವ ಸಿದ್ಧಾಂತದಲ್ಲಿ ಹೇಳಿದಂತೆ (ಪಾರಮೇಶ್ವರಾಗಮದಲ್ಲಿ ಹೇಳಿದಂತೆ, ಖನನ, ದಹನ, ತ್ಯಾಗ ಎಂದು ಮೂರು ವಿಧವಾದ ಸಮಾಧಿಗಳು ಮಾಡುವ ಕ್ರಮವಿದೆ. ವೀರಶೈವರ ಸಮಾಧಿ ಕ್ರಿಯೆಗೆ ಶಿವಮೇಧವೆನ್ನುವರು-ಖನನವೇ ಬಹು ಶ್ರೇಷ್ಠವಾದದ್ದು. (ಕಾವ್ಯದಲ್ಲಿನ ಕೆಲವು ಪದ್ಯಗಳನ್ನು ಉದಾಹರಿಸಿರುವುದನ್ನು ನೋಡಬಹುದು.) ಕ್ರಿಯಾ ಸಮಾಧಿಯ ರಚನೆ ಹೀಗೆ ಇದೆ.

5 ಪಾದ ಉದ್ದ × 5 ಪಾದ ಅಗಲ × 9 ಪಾದ ಎತ್ತರ = 225 ಘನಪಾದ

ತಳದಲ್ಲಿರುವ ವೇದಿಕೆ :

3 ಪಾದ ಉದ್ದ × 3 ಪಾದ ಅಗಲ × 1 ಪಾದ ಎತ್ತರ = 9 ಘನಪಾದ

225 ಘನ ಪಾದದಲ್ಲಿ 9 ಘನಪಾದ ಕಳೆಯಲು 216 ಘನ ಪಾದವು. ಇದು ಲಿಂಗ ಸಕೀಲು

## ಸೋಪಾನಗಳು

1ನೇ ಸೋಪಾನ :—1 ಪಾದ ಉದ್ದ × 1 ಪಾದ ಅಗಲ × 1 ಪಾದ ಎತ್ತರ
== 1 ಘನಪಾದ

2ನೇ ಸೋಪಾನ :—2—,,—×2—,,— × 2 —,,— = 8 ಘನಪಾದ

3ನೇ ಸೋಪಾನ :—3—,,— × 3 — ,, — × 3 —,,—
= 27 ಘನಪಾದ

1ನೇ ಸೋಪಾನ— 1 ಘನಪಾದ 2ನೇ ಸೋಪಾನ, 8 ಘನಪಾದ, 3ನೇ ಸೋಪಾನ 27 ಘನಪಾದ ಇವುಗಳನ್ನು ಕೂಡಿಸಲು ಒಟ್ಟು 36 ಘನಪಾದ ಇದು ಅಂಗ ಸಕೀಲು

## ಕಿರುಗೋಣೆಂತುಂ

ಕಿರುಕುಣಿ :—

3 ಪಾ. ಅ. × 3 ಪಾ. ಎ. × 3 ಪಾದ ಒಳಗಡೆ = 27 ಘನಪಾದ.

ಕಿರುಳುಣಿ ಶಿಖರ :—

3 ಪಾದ ಅಗಲ × 3 ಪಾ. ಒಳಗಡೆ × $1\frac{1}{2}$ ಪಾದ ಎತ್ತರ
= $13\frac{1}{2}$ ಘನಪಾದ

ಇದರ ಅರ್ಧ $6\frac{3}{4}$ ಘನಪಾದಗಳು

ತ್ರಿಕೋಣದ ಮಗ್ಗುಲು 2 ದೀಪದ ಗೂಡುಗಳು

1 ಪಾ. ಉ. × 1 ಪಾ. ಅ. × 1 ಪಾದ ಎ. = 1 ಘನಪಾದ ಇದರಂತೆ ಇನ್ನೊಂದು ದೀಪದ ಗೂಡು 1 ಘನಪಾದ

ಒಟ್ಟು 2 ಘನಪಾದಗಳು

**ದೀಪದ ಗೂಡು ಶಿಖರ** :—1 ಪಾ. × $\frac{1}{2}$ ಪಾದ × $\frac{1}{2}$ = $\frac{1}{4}$ ಘನಪಾದ

ಇದರ ಅರ್ಧ $\frac{1}{8}$ ಘನಪಾದ

2 ದೀಪಗಳಿಗೆ $\frac{1}{4}$ ಘನಪಾದ. ಅಂತೂ ಕಿರುಕುಣಿಯ 27 ಘನಪಾದ ಕಿರುಕುಣಿಯ ಶಿಖರದ 6$\frac{3}{4}$ ಘನಪಾದ 2 ದೀಪಗಳ ಗೂಡು. 2 ಘನ ಪಾದ ಮತ್ತು 2 ದೀಪಗಳ ಗೂಡುಗಳ ಶಿಖರ $\frac{1}{4}$ ಘನಪಾದ, ಇವುಗಳನ್ನು ಕೂಡಿಸಲು 36 ಘನ ಪಾದ. ಸಮಾಧಿಯು 216 ಘನಪಾದ, ಸೋಪಾನ 36 ಘನಪಾದ ಕಿರುಕುಣಿ 36 ಘನಪಾದ ಕೂಡಿಸಿದಾಗ್ಗೆ ಒಟ್ಟು 288 ಘನಪಾದಗಳು.

ಶ್ರೀ ತಾತನವರ ಸಮಾಧಿ ಕ್ರಮದಲ್ಲಿ ಮಾಡುವಾಗ್ಗೆ ಶ್ರೀ ಸಿದ್ಧಲಿಂಗ ಮಹಾ ಸ್ವಾಮಿಗಳು ಆಧಾರ ಗ್ರಂಥಗಳನ್ನು ನೋಡಿ ಅಂತೂ ಕ್ರಿಯಾ ಸಮಾಧಿಯ ಕೆಲಸ ಮುಗಿಸಿದರು.

ಶ್ರೀ ತಾತನವರ ದೇಹ ಸ್ಥಿತಿ ತೀರ ಕೆಟ್ಟು ಚಿಂತಾಜನಕವಾಗಲು ಕೊನೆಯ ಯತ್ನವೆಂದು ಶ್ರೀ ತಾತನವರನ್ನು ಹುಬ್ಬಳ್ಳಿಗೆ ಕಾರಿನಲ್ಲಿ ಕರೆದುಕೊಂಡು ಹೋದರು. ಅಲ್ಲಿನ ಪ್ರೈವೇಟ್ ನರ್ಸಿಂಗ್ ಹೋಂನಲ್ಲಿ ಸೇರಿಸಿ ವೈದ್ಯರ ಚಿಕಿತ್ಸೆ ಹಾಗೂ ಔಷಧೋಪಚಾರ ಮಾಡುವ ಸಮಯದಲ್ಲಿ ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀಗಳು (ಶ್ರೀ ಮೂಜಗಂ) ಅಲ್ಲಿಗೆ ಧಾವಿಸಿ ಬಂದು ತಾತನವರ ಕೊನೆಯ ಅಪೇಕ್ಷೆ ಯನ್ನು ಕೇಳಲು ಶ್ರೀ ತಾತನವರು ಶ್ರೀ ಮೂಜಗಂ ಅವರ ಮೊಗವನ್ನು ನೋಡಿ ಕರುಣೆಯಿಂದ ವಳ ಒಳ್ಳಾರಿಯಲ್ಲಿನ ತಮ್ಮ ಮಠಕ್ಕೆ ತಿಳಿಸುವುದಾಗಿ ಹೇಳಿ ತಮ್ಮ ಕಾರನ್ನು ತರಿಸಿ ಆಗಲೇ ವಳಬಳ್ಳಾರಿ ಮಠಕ್ಕೆ ಪ್ರಯಾಣ ಬೆಳೆಸಿದರು. ಕಾರು ಒಳ ಬಳ್ಳಾರಿಯ ದಾರಿ ಹಿಡಿದು ವೇಗವಾಗಿ ಸಾಗಿದರೂ ದಾರಿ ಸಾಗದೆ ವಿಳಂಬವಾಗುತ್ತಿದೆ. ಕಾರಿನೊಳಗಿನ ಭಕ್ತರು, ಸ್ವಾಮಿಗಳು ಶ್ರೀ ತಾತನವರ ಬಗ್ಗೆ ಮನದಲ್ಲಿ ಚಿಂತಿಸುತ್ತಾ ದುಃಖದಿಂದ ಕಣ್ಣುಒರಸುತ್ತಾ ಬೇರೆ ಗತಿಯಿಲ್ಲದೆ ಊರು ಸೇರುವ ತನಕ ತಾತನನ್ನು, ಶಿವನನ್ನು ಭಜಿಸಿದರು. ತಾತನವರು ಮಾತ್ರ ಪ್ರಶಾಂತ ಚಿತ್ತರಾಗಿ ಯಾವ ವಿಹ್ವಲತೆ, ವಿಕಾರ ತೋರಿಸದೆ ಶಿವಧ್ಯಾನದಲ್ಲಿ ಮನವನ್ನು ಲೀನಗೊಳಿಸಿದ್ದರು. ವಳಬಳ್ಳಾರಿ ಸಮೀಪ ಬರಲು ಊರ ದೇವಿ ಗುಡಿ ಬಂತೇನಪ್ಪ, ನಮ್ಮ ಮಠ ಬಂದಿತೇನಪ್ಪ ಎಂದು ಕೇಳಲು ಭಕ್ತರು ತುಂಬಿದ ದುಃಖದ ಗದ್ಗದ ಕಂಠದಿಂದ ಹೌದಪ್ಪ ಮಠ ಬಂತಪ್ಪ ಎಂದು ಹೇಳಿದರು. ಮಠದ ಮುಂದೆ ಕಾರು ಬಂದು ನಿಂತಿತು. ಶ್ರೀ ತಾತನವರನ್ನು ಕಾರಿನಿಂದ ಇಳಿಸಿ ಕೈಹಿಡಿದುಕೊಂಡು ಮಠದೊಳಗೆ ಕರೆದುಕೊಂಡು ಬಂದು ಹೊರಗಿನ ಕಟ್ಟೆ (ಬಂಕದಲ್ಲಿ) ಯ ಮೇಲೆ ಕೂಡ್ರಿಸಿದರು. ಶ್ರೀ ತಾತನವರಿಗೆ ಮುಖ ತೊಳಸಿ, ಪಾದಪೂಜೆ ಮಾಡಿದರು. ಶ್ರೀ ತಾತನವರು ತಮ್ಮ ನೊಸಲಿಗೆ ಶ್ರೀ ವಿಭೂತಿ ಧರಿಸಿ ಲಿಂಗಯ್ಯನನ್ನು ಅಂದರೆ ಕೊರಳ ವಸ್ತ್ರದಲ್ಲಿ ಧರಿಸಿರುವ ಇಷ್ಟ ಲಿಂಗವನ್ನು ಒಮ್ಮೆ

ಕೈಯಿಂದ ಮುಟ್ಟಿ ಮಾನಸಿಕ ಜಪದಿಂದ ಶಿವನನ್ನು ಧ್ಯಾನಿಸಿ, ಒಮ್ಮೆ ಮಠದ ಒಳ ಹಾಗೂ ಹೊರ ಆವರಣವನ್ನು ದೃಷ್ಟಿಸಿ ನೋಡಿ ಅಲ್ಲಿ ನೆರೆದ ಭಕ್ತ ವೃಂದವನ್ನು ನೋಡಿ ಮನದಲ್ಲಿ ಹರಸಿ ತಮ್ಮ ಪ್ರಾಣ ಲಿಂಗದ ಜ್ಯೋತಿಯನ್ನು ಹೊರಗೆ ಬೆಳಗಿಸಿ ಮಹಾ ಜ್ಯೋತಿಯೊಡನೆ ಬೆಳಗಿ ಬೆರೆತುಹೋಯಿತು ಅರ್ಥಾತ್ ಲಿಂಗದೊಳಗಾದರು. ಈ ಮಹಾ ಮಹಿಮರ ದಿವ್ಯ ದೃಶ್ಯ ನೋಡಿದ ವಳಬಳ್ಳಾರಿ ಸುವರ್ಣಗಿರಿ ಸಂಸ್ಥಾನ ಮಠದ ಉತ್ತರಾಧಿಕಾರಿಗಳಾದ ಶ್ರೀ ಮ. ನಿ. ಪ್ರ. ಸಿದ್ಧಲಿಂಗ ಮಹಾಸ್ವಾಮಿಗಳು, ಅಡವಿ ಅಮರೇಶ್ವರ ಕ್ಷೇತ್ರಾಧಿಪತಿಗಳಾದ ಶ್ರೀ ಮ. ನಿ. ಪ್ರ. ಶಾಂತಮಲ್ಲ ಮಹಾ ಸ್ವಾಮಿಗಳು ಮತ್ತು ನದಿಚಾಗಿಯ ವಿರಕ್ತ ಮಠಾಧೀಶ್ವರರಾದ ಶ್ರೀ ಮ. ನಿ. ಪ್ರ. ತೋಂಟದಾರ್ಯ ಮಹಾಸ್ವಾಮಿಗಳು, ಭಕ್ತರ ಜೊತೆಗೆ ತಾವೆಲ್ಲರೂ ಅನಂತ ವಿಧವಾಗಿ ದುಃಖಿಗಳಾದರು. ದುಂದುಭಿಯ ಸಂವತ್ಸರದಲ್ಲಿ ಅಧಿಕ ಆಶ್ವಯುಜ ಮಾಸದ ಕೃಷ್ಣ ಪಕ್ಷದ ಆದಿವಾರದ ದಿನ (೧೦ ೧೦ ೧೯೮೨ರಂದು ಲಿಂಗೈಕ್ಯರಾದದ್ದು) ಲಿಂಗೈಕ್ಯರಾದ ಸಾಯಂಕಾಲ ಸಮಯದ ಸುದ್ದಿ ಬಾನುಲಿಯಿಂದ ತಿಳಿದ ವಿಷಯಕ್ಕೆ ದೇಶದ ನಾನಾ ಕಡೆಯಿಂದ ರಾಜಕೀಯ ಮುಖಂಡರು, ಭಕ್ತರು, ಕವಿಗಳು, ಪಂಡಿತರು, ಗಾಯನ ಕಲಾವಿದರು ಇತ್ಯಾದಿ ಅನೇಕ ವಿಧದಲ್ಲಿ ಜನ ಸಮೂಹವೆಂಬ ನದಿಗಳು ಒಳಬಳ್ಳಾರಿ ಕ್ಷೇತ್ರಕ್ಕೆ ಬಂದು ಜಿದಂಬುಧಿಯಲ್ಲಿ ಸೇರಿ ತರಂಗ ತರಂಗವಾಗಿ ಭಾವೋದ್ವೇಗದಿಂದ ದುಃಖಿತರಾಗಿ ಮನಸ್ಸು ಮುಖವಾಗಿ, ನೋಟ ನೆಲೆನಿಂತು ಶ್ರೀ ತಾತನವರ ಭವ್ಯ ದರ್ಶನ ಕೂಟದಲ್ಲಿ ವಿಲೀನವಾಯಿತು. ಈ ವಿಷಯ ತಿಳಿದ ಬಳ್ಳಾರಿಯಲ್ಲಿದ್ದ ಕೊಟ್ಟೂರು ಜಗದ್ಗುರುಗಳು ಅತಿ ತೀವ್ರದಲ್ಲಿ ವಳಬಳ್ಳಾರಿಗೆ ಬಂದು ಸೇರಿದರು. ಆತ್ಮೀಯರಾದ ಮಠದಭಿಮಾನಿಗಳಾದ ಆಸ್ಥಾನ ಕವಿಗಳಾದ ಶ್ರೀ ದೊಡ್ಡಯ್ಯ ಶಾಸ್ತ್ರಿಗಳು ವೃದ್ಧಾಪ್ಯದಿಂದ ದೇಹಸ್ಥಿತಿ ಚೆನ್ನಾಗಿಲ್ಲದಿದ್ದರೂ ಸಹ ಶ್ರೀ ತಾತನವರ ಅಂತಿಮ ದರ್ಶನ ಪಡೆಯಲು, ನಾಗರಹಾಳಿನಿಂದ ತಮ್ಮ ಚಿರಂಜೀವಿಗಳಾದ ಶ್ರೀ ಬಸವರಾಜಯ್ಯ ಇತ್ಯಾದಿಯವರೊಡಗೂಡಿ ಕವಿ ಶ್ರೀ. ನಾ.ಮ. ಸಿದ್ಧರಾಮಯ್ಯನವರ ಜೊತೆಗೂಡಿ ವಳಬಳ್ಳಾರಿಗೆ ಬಂದು, ಶ್ರೀ ತಾತನವರ ಅಂತಿಮ ದರ್ಶನ ಮಾಡಿ ಕೊಂಡು ಹೂಮಾಲೆ ಹಾಕಿ, ವಿಭೂತಿ ಧೂಪ ಸುಗಂಧ ಕಡ್ಡಿಗಳಿಂದ ಕಾಣಿಕೆ ಸಲ್ಲಿಸಿ ದುಃಖ ತಡೆಯಲಾರದೆ ಕಣ್ಣೀರು ಹನಿಸಿದರು.

ಇಡೀ ರಾತ್ರಿ ಭಜನೆ, ಸಂಕೀರ್ತನೆಗಳಿಂದ ಶ್ರೀ ತಾತನವರನ್ನು ಸ್ತುತಿಸಿದರು. ಅಂತ್ಯೇಷ್ಟಿಯ ಕಾರ್ಯಕ್ಕೆ ಮಂಡಗಿರಿ ಶ್ರೀಗಳು, ಹಾಲ್ವಿ ರುದ್ರಮುನಿಸ್ವಾಮಿಗಳು, ಹುಬ್ಬಳ್ಳಿ ಶ್ರೀಗಳು, ಕೊಟ್ಟೂರು ಸ್ವಾಮಿಗಳು ಇತ್ಯಾದಿ ಹರಗುರು ಚರವರೇಣ್ಯರು ಬಂದು ಕಿರಿಯ ಸ್ವಾಮಿಗಳೆಲ್ಲರನ್ನು ಸಮಾಧಾನಪಡಿಸಿ ಮೂರನೆಯ ದಿನ ವಿಧ್ಯುಕ್ತವಾಗಿ ಶ್ರೀ ತಾತನವರ ಕ್ರಿಯಾಸಮಾಧಿಯ ಕಾರ್ಯ ಮಾಡಿ ಮುಗಿಸಿದರು.

ಎತ್ತೆತ್ತ ನೋಡಿದರೆ ಬಸವನೆಂಬ ಬಳ್ಳಿ !
ಎತ್ತಿ ನೋಡಿದರೆ ಲಿಂಗವೆಂಬ ಗೊಂಚಲು !!
ಒತ್ತಿ ಹಿಂಡಿದರೆ ಭಕ್ತಿಯೆಂಬ ರಸವಯ್ಯ !!!

—ಮಡಿವಾಳ ಮಾಚಯ್ಯ

ಈ ಮೇಲಿನ ಮಡಿವಾಳ ಮಾಚಿತಂದೆಗಳ ವಚನದಂತೆ ಶ್ರೀ ತಾತನವರ ಧವಳ ಕೀರ್ತಿಯೆಂಬ ಬಳ್ಳಿ ಎಲ್ಲೆಡೆಗೂ ಪಸರಿಸಿ ಹೂ ಬಿಟ್ಟು ಕಂಪನ್ನು ಪಸರಿಸಿ ಕಾಯಿ ಹಣ್ಣಾಗಿ ಪರಶಿವನಿಗರ್ಪಿತವಾಯಿತು.

ಶ್ರೀ ತಾತನವರ ಪುಣ್ಯತಿಥಿಯ ಅಂಗವಾಗಿ ಪ್ರತಿವರ್ಷ ಪುರಾಣ ಗಾಯನ, ಪಂಡಿತರ ಗೋಷ್ಠಿಗಳನ್ನು ನಡೆಸಿ ಕೊನೆಗೆ ರಥೋತ್ಸವದೊಂದಿಗೆ ಮಂಗಲ ಮಾಡುವರು. ಮಠದ ಪರಂಪರೆಯು ಘನತೆಗೆ ಕುಂದು ತಾರದೆ ಮುಂದುವರಿಸಿಕೊಂಡು ಈಗಿನ ಶ್ರೀ ಸಿದ್ಧಲಿಂಗಮಹಾಸ್ವಾಮಿಗಳು ತ್ರಿವಿಧ ದಾಸೋಹ ಮೂರ್ತಿಗಳಾಗಿ ದಿವ್ಯ ಪ್ರಕಾಶದಲ್ಲಿದ್ದಾರೆ. ಇದೇ ಪ್ರಕಾರ ಅಡವಿ ಅಮರೇಶ್ವರದ ಶ್ರೀಗಳು ಹಾಗೂ ನದಿಚಾಗಿಯ ಶ್ರೀಗಳು ತಮ್ಮ ತಮ್ಮ ಮಠದಲ್ಲಿ ಕಾರ್ಯ ತತ್ಪರರಾಗಿ ದಕ್ಷತೆಯಿಂದ ಕೆಲಸ ಮುಂದುವರಿಸಿದ್ದಾರೆ. ಇವರೆಲ್ಲರಿಗೂ ಕೊಟ್ಟೂರು ಜಗದ್ಗುರುಗಳಾದ ಶ್ರೀ ಶ್ರೀ ಶ್ರೀ ಸಂಗನಬಸವ ಮಹಾಸ್ವಾಮಿಗಳವರು ಮಾರ್ಗದರ್ಶಕರಾಗಿದ್ದಾರೆ.

ಇಂತಹ ಪರಮ ತಾತನವರ ಶ್ರೀ ಚನ್ನಬಸವಲೀಲಾ ಕಾವ್ಯವನ್ನು ಬರೆದ ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ದೇಶದ ಜನ ಹಿತಾರ್ಥಕ್ಕೋಸ್ಕರ ಭಾಮಿನೀ ಷಟ್ಪದಿಯಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳಿ ಸಾರ್ಥಕದ ಕೆಲಸ ಮಾಡಿದ್ದಾರೆ. ಅದಕ್ಕೆ ಸಹಜದಲ್ಲಿ ನೆಲೆಕಲೆ ಹಾಗೂ ಬೆಲೆ ಬರುವುದು. ಅನೇಕ ಹರಗುರು ಚರವರೇಣ್ಯರ ಜೊತೆಗೆ ಅಸಂಖ್ಯ ಭಕ್ತರು ಭಕ್ತಿಯಿಂದ ಕಾವ್ಯಾರಾಧನೆ ಮಾಡಿ ಅದರ ಒಳತಿರುಳಿನ ಪ್ರಸಾದದ ಸವಿಯನ್ನು ಸವಿದಾಗಲೇ ಕವಿಕೃತಿಗೆ ಧನ್ಯತೆಯ ಮೆರುಗು, ಭಗವದನುಗ್ರಹದ ಬೆಡಗೂ ಬರುವುದು !!

ಭಾಮಿನೀ ಷಟ್ಪದಿಯ ಈ ಕಾವ್ಯದಲ್ಲಿ

೧೬ ಸಂಧಿಗಳಿದ್ದು ೧೧೦೩ ಪದ್ಯಗಳಿವೆ.

ಸತ್ಯಂ ಶಿವಂ ಸುಂದರಂ

—:o:—

# ಒಪ್ಪೋಲೆ

| ಕ್ರಮ ಸಂಖ್ಯೆ | ಸಂಧಿ | ಪದ್ಯ | ಪುಟ | ತಪ್ಪು | ಸರಿ |
|---|---|---|---|---|---|
| ೧ | ಪೀಠಿಕಾ ಸಂಧಿ | ೧ | ೨ | ಕಲಿಸು | ಕಲಿಸುವ |
| ೨ | ೨ | ೫ | ೩ | ಲಿಂಗಗಳಿಷ್ಟು | ಲಿಂಗಗಳಿಷ್ಟ |
| ೩ | ೨ | ೬ | ೬ | ಶಿವಪೂರ | ಶಿವಪುರ |
| ೪ | ೨ | ೭ | ೧೧ | ದುಃಖದ | ದುಃಖವ |
| ೫ | ೨ | ೯ | ೧೭ | ಸೀಸೆ | ಸೇಸೆ |
| ೬ | ೨ | ೧೩ | ೩೩ | ಮಣಿ | ಮಿಣಿ |
| ೭ | ೨ | ೧೪ | ೩೯ | ರಮಿ | ರಮಿಸಿ |
| ೮ | ೨ | ೧೬ | ೪೫ | ಬಸವಯ್ಯಾ | ಬಸವಯ್ಯ |
| ೯ | ೨ | ೧೮ | ೫೨ | ಹಿಗುತ | ಹಿಗ್ಗುತ |
| ೧೦ | ೩ | ೧೯ | ಸೂಚನಪದ್ಯ | ಹರುಪದಲಿ | ಹರುಷದಲಿ |
| ೧೧ | ೩ | ೧೯ | ೨ | ಮೆಣ್ಣೆ | ಯೆಣ್ಣೆ |
| ೧೨ | ೩ | ೨೦ | ೪ | ಪೂಜೆಯ | ಪೂಜೆ |
| ೩ | ೩ | ೨೫ | ೨೪ | ಮಠದೀ | ಮುದದೀ |
| ೧೪ | ೪ | ೨೭ | ೫ | ಎದೆಗುರುದೇಂ | ಎದೆಗುರುಡೇಂ |
| ೧೫ | ೪ | ೨೭ | ೭ | ಕಾಯ್ದುಳು | ಕಾಯ್ಗಳು |
| ೧೬ | ೪ | ೩೦ | ೧೬ | ಘಟ್ಟೆ | ಘಟ್ಟ |
| ೧೭ | ೪ | ೩೦ | ೧೮ | ಮಿದುಕುತ | ವಿಡುಕುತ |
| ೧೮ | ೫ | ೩೨ | ೧ | ಕ್ರಿಯೋಭಯತ್ಮನೆ | ಕ್ರಿಯೋಭಯಾತ್ಮನೆ |
| ೧೯ | ೬ | ೪೦ | ೫ | ಧ್ಯಾದಿ | ಧ್ಯಾನದಿ |
| ೨೦ | ೬ | ೪೨ | ೧೪ | ಸರಳ ಸಂಗಮ | ಸರಳದಲಿ ಸಂಗಮ |
| ೨೧ | ೬ | ೪೩ | ೧೭ | ನಿಶಯಉದಿಸಿದ | ನಿಶಯಲುದಿಸಿದ |
| ೨೨ | ೬ | ೪೪ | ೨೭ | ಶಿಶ | ಶಸಿ |
| ೨೩ | ೬ | ೫೦ | ೪೫ | ಪೂರ್ವಾಶ್ರಮುದ | ಪೂರ್ವಾಶ್ರಯದ |
| ೨೪ | ೬ | ೫೧ | ೫೦ | ಹದುಳು | ಹದುಳ |
| ೨೫ | ೬ | ೫೨ | ೫೩ | ಕುಡಿವಾಡಿ | ಕುಣಿದಾಡಿ |
| ೨೬ | ೬ | ೫೪ | ೬ | ಪಾದಕಂಡು | ಪಾದಕಂದು |

| ಕ್ರಮ ಸಂಖ್ಯೆ | ಸಂಧಿ | ಪದ್ಯ | ಪುಟ | ತಪ್ಪು | ಸರಿ |
|---|---|---|---|---|---|
| ೨೭ | ೭ | ೫೭ | ೭ | ವಿಕ್ಕದಂತಹ | ಮಿಕ್ಕದಂತಹ |
| ೨೮ | ೭ | ೬೪ | ೩೩ | ಮನದಹದಲ್ಲಿ | ಮನಮಹದಲ್ಲಿ |
| ೨೯ | ೭ | ೬೪ | ೩೪ | ಉದಮ | ಉದಯ |
| ೩೦ | ೮ | ೬೬ | ಸೂಚನಾ | ಶ್ರೀ ಚನ್ನಬಸವರ | ಚನ್ನಬಸವರ |
| | | | ೧ | ಶರಣರ | ಶರಣರಾ |
| ೩೧ | ೮ | ೬೬ | ೩ | ಸಮುಸಿ | ಸಮನಿಸಿ |
| ೩೨ | ೮ | ೬೮ | ೮ | ಪ್ರಸಾರ | ಪ್ರಸಾದ |
| ೩೩ | ೮ | ೭೨ | ೨೬ | ಪರಿಪಾದನೆ | ಪ್ರತಿಪಾದನೆ |
| ೩೪ | ೮ | ೭೩ | ೩೦ | ಸುತ್ತುವಂದಿರು ಅವರ | ಸುತ್ತವಂದಿರುತವರ |
| ೩೫ | ೮ | ೭೪ | ೩೪ | ನುಡ್ಡಿ | ನುಡಿ |
| ೩೬ | ೮ | ೭೫ | ೩೭ | ಧ್ಯಾನ | ಧಾನ್ಯ |
| ೩೭ | ೮ | ೭೮ | ೫೧ | ವಿರುತ | ವಿಶತ |
| ೩೮ | ೮ | ೭೯ | ೫೨ | ಕಲ್ಯಾಣಕಾಗಿಮಾ | ಕಲ್ಯಾಣಕಾಗಿಯಾ |
| ೩೯ | ೮ | ೮೦ | ೫೯ | ದುಃಖದಿಗಳಲೀ | ದುಃಖ ದಿನಗಳಲೀ |
| ೪೦ | ೮ | ೮೨ | ೬೫ | ಕಾಪ್ಯಕ | ರೌಪ್ಯಕ |
| ೪೧ | ೮ | ೮೩ | ೭೧ | ವೊಪ್ಪು | ವೊಪ್ಪಿ |
| ೪೨ | ೯ | ೮೫ | ೨ | ಹೊಳೆಯುತ | ಹೊಳೆಯುತಲಿ |
| ೪೩ | ೯ | ೮೬ | ೬ | ಗೊಳ್ಳು ರಹಿತ | ಗೊಳ್ಳುರಹಿತದ |
| ೪೪ | ೯ | ೮೭ | ೧೧ | ನಿಲುಕ್ಕ | ನಿಲುಕ |
| ೪೫ | ೯ | ೯೫ | ೪೩ | ಭಕ್ತಗುಣ | ಭಕ್ತಗಣ |
| ೪೬ | ೯ | ೯೬ | ೪೭ | ಶ್ರೀಗುರುಬಸವರು | ಶ್ರೀಗುರುಚನ್ನಬಸವರು |
| ೪೭ | ೯ | ೯೭ | ೫೧ | ತಿರುನೀಲಕಂಡನು | ತಿರುನೀಲಕಂಠನು |
| ೪೮ | ೯ | ೯೮ | ೫೫ | ಕಳಸೀ | ಕಳಿಸೀ |
| ೪೯ | ೯ | ೧೦೦ | ೬೧ | ಮಾಘಮಾಸದ | ಮಾಘದಮಾಸ |
| ೫೦ | ೯ | ೧೦೩ | ೭೨ | ಕದುಗಲಿಯೆ | ಕಡುಗಲಿಯೆ |
| ೫೧ | ೯ | ೧೦೪ | ೭೬ | ಆಗಲ | ಆಗಲಾ |
| ೫೨ | ೯ | ೧೦೪ | ೭೭ | ಕಶಲ | ಕುಶಲ |

| ಕ್ರಮ ಸಂಖ್ಯೆ | ಸಂಧಿ | ಪದ್ಯ | ಪುಟ | ತಪ್ಪು | ಸರಿ |
|---|---|---|---|---|---|
| ೫೩ | ೯ | ೧೦೪ | ೭೭ | ಜಸಪಡೆವೆಂದರಾ | ಜಸಪಡೆಯೆಂದರಾ |
| ೫೪ | ೧೦ | ೧೧೪ | ೧೪ | ಬಸವನನು ಯಾಯಿಯಾಗಿ | ಬಸವನನುಯಾಯಿಯಾಗಿ |
| ೫೫ | ೧೦ | ೧೨೦ | ೩೬ | ಇಷ್ಟಲಿಂಗದ | ಇಷ್ಟಲಿಂಗದಿ |
| ೫೬ | ೧೧ | ೧೩೪ | ಸೂಚನೆ | ಅಡವಿಅಮರೇಶ್ವರ ಲಿಂಗದ | ಅಡವಿಅಮರೇಶ್ವರನ ಲಿಂಗದ |
| ೫೭ | ೧೧ | ೧೩೪ | ೧ | ಗುರುಕೃಪೆಮಾಡು | ಗುರುವೆಕೃಪೆಮಾಡು |
| ೫೮ | ೧೧ | ೧೩೫ | ೬ | ಪನ್ನಗಾಭರಣವನು | ಪನ್ನಗಾಭರಣನನು |
| ೫೯ | ೧೧ | ೧೪೧ | ೩೧ | ಯುಗದೊಳೂ | ಯುಗಳದೊಳೂ |
| ೬೦ | ೧೧ | ೧೪೬ | ೫೦ | ಳಾ ಲಿಂಗಲಿಂಗ | –ಳಾ ಲಿಂಗ |
| ೬೧ | ೧೨ | ೧೫೫ | ೩೫ | ಕೃಪೆಯಲಿ | ಕೃಪೆಯಲ್ಲಿ |
| ೬೨ | ೧೨ | ೧೬೦ | ೫೩ | ಗೆಟ್ಟಗೆನೆ | ನೆಟ್ಟಗೆನೆ |
| ೬೩ | ೧೨ | ೧೬೩ | ೬೫ | ಸಾರ್ಥವು | ಸಾರ್ಥಕವು |
| ೬೪ | ೧೨ | ೧೯೩ | ೧೮೬ | ಅರವತ್ತೆಂಟರ | ಅರುವತ್ತೆಂಟರ |
| ೬೫ | ೧೩ | ೨೨೨ | ೩೦ | ಶಿವಮಯದಿಂ | ಶಿವಮಯದಿ |
| ೬೬ | ೧೪ | ೨೨೬ | ೫ | ಭಕ್ತಶ್ರೇಷ್ಠನೆನಿಸೀ | ಭಕ್ತಶ್ರೇಷ್ಠನಿಸೀ |
| ೬೭ | ೧೫ | ೨೩೪ | ೨೭ | ತಮ್ಮ | ತಮ್ಮಯ |
| ೬೮ | ೧೫ | ೨೩೫ | ೨೮ | ತವಸಿ | ತರಿಸಿ |
| ೬೯ | ೧೬ | ೨೫೦ | ೪೦ | ದಿಗಿಲುಗೊಳ್ಳುತಲಿ | ದಿಗಿಲುಗೊಳ್ಳುತ |
| ೭೦ | ೧೬ | ೨೫೪ | ೫೮ | ಕೇಳುದಿ | ಕೇಳದ |

## ವಿರಕ್ತ ಶ್ರೇಷ್ಠನಿಗೆ ಸಾಂಕೇತಿಕವಾಗಿ ಮಾಡಿದ ಅಷ್ಟಾದಶ (ಹದಿನೆಂಟು) ವರ್ಣನೆಗಳು

| ಕ್ರಮ ಸಂಖ್ಯೆ | ಸಂಧಿ | ಪದ್ಯಗಳು | ವರ್ಣನೆಗಳು |
|---|---|---|---|
| ೧ | ೨ | ೪, ೫, ೬ | ನಗರ |
| ೨ | ೨ | ೭ ೮ | ಸಮುದ್ರ |
| ೩ | ೨ | ೯ | ಶೈಲ |
| ೪ | ೨ | ೧೦, ೧೧ | ಋತು |
| ೫ | ೨ | ೨೧ | ಚಂದ್ರೋದಯ |
| ೬ | ೨ | ೨೫ | ಸೂರ್ಯೋದಯ |
| ೭ | ೨ | ೨೮ | ಉದ್ಯಾನ |
| ೮ | ೨ | ೨೮ | ಜಲಕ್ರೀಡೆ |
| ೯ | ೨ | ೩೮ | ಮಧುಪಾನ |
| ೧೦ | ೨ | ೩೪ | ರಥೋತ್ಸವ |
| ೧೧ | ೨ | ೩೬ | ವಿರಹ ವಿಪ್ರಲಂಭ |
| ೧೨ | ೨ | ೩೯ | ವಿವಾಹ |
| ೧೩ | ೨ | ೫೩ | ಪುತ್ರೋತ್ಸವ |
| ೧೪ | ೪ | ೫ | ಮಂತ್ರಾಲೋಚನೆ |
| ೧೫ | ೪ | ೭ | ದ್ಯೂತ |
| ೧೬ | ೪ | ೧೮ | ಪ್ರಯಾಣ |
| ೧೭ | ೫ | ೧೮ | ಯುದ್ಧ |
| ೧೮ | ೬ | ೧೩ | ನಾಯಕನ ಅಭ್ಯುದಯ |

## ೧) ಶರಭ ಸಾಳ್ವಾವತಾರ (ಸಂಧಿ ೬, ಪದ್ಯ ೫೯)

ಬ್ರಹ್ಮನ ಮಗ ಕಸ್ಯಪ ಬ್ರಹ್ಮ. ಆತನ ಪತ್ನಿ ದಿತಿ. ಅವಳ ಒಡಲಲ್ಲಿ ಹುಟ್ಟಿದವರು—ಹಿರಣ್ಯಾಕ್ಷ, ಹಿರಣ್ಯ ಕಸ್ಯಪ. ಇವರು ಉಗ್ರ ತಪಸ್ಸಿನ ಫಲದಿಂದ ಬ್ರಹ್ಮನಿಂದ ವಿಶೇಷ ವರಗಳನ್ನು ಪಡೆದು ಲೋಕಕಂಟಕರಾಗುವರು ಹಿರಣ್ಯಾಕ್ಷನನ್ನು ಶ್ರೀ ವಿಷ್ಣುವು ವರಾಹಾವತಾರವನ್ನು ತಾಳಿ ಕೊಂದ ನಂತರ ತನ್ನ ಅಣ್ಣನವರನ್ನು ಕೊಂದ ವಿಷ್ಣುವನ್ನು ಕೊಲ್ಲಲು ಸಂಕಲ್ಪಿಸಿದ ಹಿರಣ್ಯ ಕಸ್ಯಪನನ್ನು, ವಿಷ್ಣುವು ನರ ಮತ್ತು ಸಿಂಹ ಈ ಎರಡು ಏಕವೆನಿಸಿದ ನೃಸಿಂಹಾವತಾರ ಧರಿಸಿ ಹಿರಣ್ಯ ಕಸ್ಯಪನ ವಕ್ಷಸ್ಥಲವನ್ನು ಭೇದಿಸಿ ಕ್ರೋಧದಿಂದ ರಕ್ತಪಾನ ಮಾಡಿ ಉನ್ಮತ್ತನಾಗಿ ಮಾನವರನ್ನು ಹಿಂಸಿಸಿ, ಲೋಕಕಂಟಕನಾಗಿರಲು, ದೇವತೆಗಳ ಪ್ರಾರ್ಥನೆಯಂತೆ ಪರಮಾತ್ಮನು ವೀರಭದ್ರನಿಗೆ ಆಜ್ಞೆಮಾಡಿ ನೃಸಿಂಹನ ಸಂಹಾರಕ್ಕೆ ಕಳುಹಿಸುವನು. ರೌದ್ರ ರೂಪಿಯಾದ ವೀರಭದ್ರನು ಶರಭ ಸಾಳ್ವಾವತಾರ ತಾಳಿ, (ಶರಭವೆಂದರೆ ಎಂಟು ಕಾಲುಗಳುಳ್ಳ ಮೃಗ ; ಸಾಳ್ವವೆಂಬ ಹೆಸರಿನ ಒಂದು ಪಕ್ಷಿ. ಇದಕ್ಕೆ ಎರಡು ಅಥವಾ ನಾಲ್ಕು ಮುಖಗಳಿರುತ್ತವೆ. ಗಂಡಭೇರುಂಡ ಎಂದು ಹೇಳುವರು. ಮೃಗ – ಪಕ್ಷಿ ಸೇರಿ ಶರಭ ಸಾಳ್ವಾವತಾರ) ಈ ವಿಚಿತ್ರ ಅವತಾರದಿಂದ ನರಸಿಂಹನ ಮದವನ್ನು ಮುರಿದು, ಶರಣಾಗತನನ್ನಾಗಿ ಮಾಡಿಸಿಕೊಂಡು, ಶಿವನಲ್ಲಿಗೆ ಕರೆದೊಯ್ದು ಅಲ್ಲಿ ವಿಷ್ಣುವು ಪರಮಾತ್ಮನ ಆರಾಧನೆಯಿಂದ ತನ್ನೆಲ್ಲ ಪಾಪಗಳನ್ನು ಹೋಗಲಾಡಿಸಿಕೊಂಡು ನರಸಿಂಹಾವತಾರ ಮುಗಿಸಿ ವೈಕುಂಠವಾಸಿಯಾಗುವನು.

(ಈ ಶರಭ ಸಾಳ್ವಾವತಾರ ಕಥೆಯು ಶಿವಪುರಾಣದ ಆರನೇ ಆಶ್ವಾಸದಲ್ಲಿ ಬರುವುದು)

## ೨) "ನಚಿಕೇತ"

(ಕಠೋಪನಿಷತ್‌ನಲ್ಲಿ ಬರುವ ವಾಜಶ್ರವಸ ಎಂಬುವನ ಮಗ
ನಚಿಕೇತನ ಕಥೆ—೭ನೇ ಸಂಧಿ, ೫ನೇ ಪದ್ಯ)

ವಾಜಶ್ರವನು – "ವಿಶ್ವಜಿತ್" ಎಂಬ ಯಾಗ ಮಾಡಿ ಯಜ್ಞಫಲದ ಆಸಕ್ತಿಯುಳ್ಳವನಾಗಿ ತನ್ನ ಸರ್ವಸ್ವವನ್ನು ದಾನಮಾಡಿ, ಕೊನೆಗೆ ಉಳಿದ ಮುದಿ (ವೃದ್ಧ, ಕೆಲಸಕ್ಕೆ ಬಾರದ) ಹಸುಗಳನ್ನು ಆಚಾರ್ಯರಿಗೆ ಸಂಭಾವನೆಯಾಗಿ ಕೊಡುತ್ತಿರುವುದನ್ನು ನೋಡಿದ ಮಗನಾದ ನಚಿಕೇತನು ತಮ್ಮ ತಂದೆ ಮಾಡುವ ಕಾರ್ಯಕ್ಕಾಗಿ ಮರುಗಿ ತನ್ನನ್ನು ಯಾರಿಗೆ ದಾನ ಕೊಡುವಿರಿ ? ಎಂದು ಬಾರಿಬಾರಿಗೂ ಕೇಳಿದಾಗ್ಗೆ ಬೇಸತ್ತ ತಂದೆ ನಚಿಕೇತನನ್ನು ಯಮನಿಗೆ ದಾನವಾಗಿ ಕೊಡುವೆನೆಂದು ಹೇಳಿದಾಗ ತಂದೆಯ ಮಾತನ್ನು ನಡೆಸುವುದಕ್ಕೆ ನಚಿಕೇತನು ಯಮಲೋಕಕ್ಕೆ ಹೋಗಿ – ಅಲ್ಲಿ

ಯಮನು ಇಲ್ಲದಿರಲು, ಬಾಗಿಲಲ್ಲಿ ಮೂರು ದಿನಗಳು ಉಪವಾಸದಿಂದ ಕಾದು ಕೊನೆಗೆ ಯಮನ ದರ್ಶನ ಪಡೆದು ಮೂರು ದಿನಗಳು ಕಾದ ಕಾರಣ ಯಮನ ಅನುಗ್ರಹಕ್ಕೆ ಪಾತ್ರನಾಗಿ ಮೂರು ವರಗಳನ್ನು ಪಡೆದುಕೊಂಡು (೧) ತನ್ನ ತಂದೆ ಸಿಟ್ಟಾಗದೆ ಪ್ರೇಮದಿಂದ ಪುನಃ ಬರಮಾಡಿಕೊಳ್ಳಬೇಕು (೨) ಅಗ್ನಿಯನ್ನು ಆರಾಧಿಸುವ ಮಾರ್ಗ ತಿಳಿಸಬೇಕು (೩) ಆತ್ಮಜ್ಞಾನ (ಬ್ರಹ್ಮಜ್ಞಾನ)ದ ರಹಸ್ಯ ತಿಳಿಸಬೇಕೆಂದು ಕೇಳಿ, ಇವುಗಳನ್ನು ಪಡೆದುಕೊಂಡು ಸಾವಿನ ಬಳಿಕ ಆತ್ಮ ಅವಿನಾಶಿ ಯೆಂದು ತಿಳಿದುಕೊಂಡು ಲೌಕಿಕ – ಪಾರಮಾರ್ಥಿಕದ ಸಮನ್ವಯ ಸೊಗಸಿನ ಬಾಳನ್ನು ಕಂಡು ಕೃತಾರ್ಥತೆಯನ್ನು ಪಡೆದಾತನೇ ಮಹಾ ಬಾಲಕ ನಚಿಕೇತನು !

### ೩) ನಮಕ – ಚಮಕ (೨ನೇ ಸಂಧಿ, ಪದ್ಯಗಳು ೪೫, ೪೬)

"ಏಕೋ ರುದ್ರೋನದ್ವಿತೀಯಃ" ಎಂಬ ಶೃತಿ ವಾಕ್ಯದಂತೆ ವೇದಾನುಸಾರ ಆತನ ಉಪಾಸನೆ ಮಾಡಬೇಕು. ಏಕಾದಶ ನಮಕ, ಏಕಾದಶ ಚಮಕ, ಪುರುಷ ಸೂಕ್ತ ಗಳಲ್ಲಿ ಸರ್ವವ್ಯಾಪ್ತನಾದ ಶ್ರೀ ರುದ್ರನ ಅಧಿಕಾರದ ವರ್ಣನೆ ಮಾಡಿದೆ. ಇಂತಹ ಶ್ರೀ ರುದ್ರನಿಗೆ ನಮಸ್ಕಾರ ಮಾಡಿ ಆತನನ್ನು ವೇದಾಗಮೋಪನಿಷತ್ ಸ್ಮೃತಿ, ಪುರಾಣಗಳಲ್ಲಿ ಉಕ್ತವಾಗಿರುವಂತೆ ಸ್ತುತಿಸಿದರೆ ಸಮಸ್ತ ಮಾನವರ ಮನೋರಥಗಳ ಸಿದ್ಧಿಸಿ ನಿತ್ಯಾನಂದವನ್ನು ಉಂಟುಮಾಡುವುದು.

### ೪) ಆರು ಮುಗಿದೇಳನೆಯ ಯತ್ನವು (ಸಂಧಿ ೧೨; ಪ್ರಸಂಗ ೩–ಪದ್ಯ ೫೭)

ಷಡ್ಭಿರ್ ಮನುಷ್ಯ ಯತ್ನಾನಿ, ಸಪ್ತಮಂ ದೈವ ಚಿಂತನಂ

ಆರು ಯತ್ನಗಳು: ೧) ಉದ್ಯಮ ೨) ಸಾಹಸ ೩) ಧೈರ್ಯ ೪) ಬುದ್ಧಿ ೫) ಶಕ್ತಿ ೬) ಪರಾಕ್ರಮ. ಏಳನೆಯದೇ ದೈವ ಯತ್ನವು. (ಗುರುದೇವಂಗೆ ಮೊರೆಹೋಗುವಿಕೆ).

# ಶಬ್ದಕೋಶ

ವಿ. ಸೂ. : ಮೊದಲನೆಯ ಸಂಖ್ಯೆ – ಸಂಧಿಗಳ ಸೂಚಕವು, ಎರಡನೆಯ ಸಂಖ್ಯೆ – ಪದಗಳ ಸೂಚಕವು.

| | | | |
|---|---|---|---|
| ಪಂಚ ಕ್ಲೇಶಗಳು | ೨– | ೨ | ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶ |
| ವನಧಿ | ೨– | ೮ | ಸಮುದ್ರ |
| ಸೂರಿ | ೨– | ೪೧ | ವಿದ್ವಾಂಸ, ಪಂಡಿತ |
| ಕನಗು | ೩– | ೩ | ಜಿಡ್ಡು, ಕಮಟು |
| ಹೆಂಪು | ೩– | ೬ | ಆಧಿಕ್ಯ, ಘನತೆ |
| ರಂಪ | ೩– | ೬ | ರಂಬಾಟ, ಹುಸಿ ದುಃಖ |
| ಹೊಂಪುಳಿ | ೩– | ೬ | ರೋಮಾಂಚನ, ಪುಳಕ |
| ಪದಪಿನಿಂ | ೩– | ೧೫ | ಉತ್ಸಾಹದಿಂದ |
| ಸದರದಿಂ | ೩– | ೧೫ | ಸಲಿಗೆಯಿಂದ, ಸರಾಗವಾಗಿ |
| ಬಿಸುಗಣ್ಣ | ೩– | ೧೬ | ಶಿವ |
| ಅಭಿಜಾತ | ೪– | ೪ | ಉತ್ತಮ ಕುಲದಲ್ಲಿ ಜನಿಸಿದವ, ಪ್ರಿಯ–ವಿವೇಕಿ |
| ಅಭಿರಾಮ | ೪– | ೪ | ಸುಂದರವಾದ |
| ಅಭಿಧಾನದಿಂ | ೪– | ೪ | ಹೆಸರುವಾಸಿಯಾದ |
| ಅಭಿಘಾತ | ೪– | ೪ | ಗಾಸಿಯಾದ, ಪೆಟ್ಟಾದ, ನಷ್ಟವಾಗುವಿಕೆ |
| ಅಭಿಭವಿಸು | ೪– | ೪ | ಆಯಾಸಗೊಳಿಸು |
| ಕಳತ್ರ | ೪– | ೪ | ಹೆಂಡತಿ |
| ನಿಖಿಲ | ೪– | ೯ | ಎಲ್ಲ, ಸಕಲ |
| ನಿಖರ | ೪– | ೯ | ಹೆಚ್ಚುಕಡಿಮೆಯಿಲ್ಲದ, ಸಮತ್ವದಲ್ಲಿ |
| ನಿಗದಿ | ೪– | ೧೩ | ಗೊತ್ತುಮಾಡಿದ, ನಿಶ್ಚಯಿಸಿದ |
| ಷಡಧ್ವಗಳು | ೫– | ೯ | ವರ್ಣಾಧ್ವ, ಮಂತ್ರಾಧ್ವ, ಪದಾಧ್ವ, ಕಲಾಧ್ವ ತತ್ವಾಧ್ವ, ಭುವನಾಧ್ವ (ತತ್ವಜ್ಞಾನಕ್ಕೆ, ತತ್ವಪ್ರಾಪ್ತಿಗೆ ಆರು ದಾರಿಗಳು : ಮೊದಲಿನ ಮೂರು ಶಬ್ದಾತ್ಮಕವು ಮುಂದಿನ ಮೂರು ಅರ್ಥಾತ್ಮಕವಾದವು. |
| ತತಿಗಾಲ | ೬– | ೧ | ಸಕಾಲ, ಪರ್ವ (ಹದ) ಕಾಲ |
| ಸದರದಿಂ | ೬– | ೬ | ಸಲಿಗೆಯಿಂದ, ಸರಾಗದಿಂದ |
| ಶ್ಯಾಮ | ೬– | ೮ | ಕಪ್ಪು (ಕರಿಯ) ಬಣ್ಣ, ಮನೋಹರವಾಗಿ |

| | | |
|---|---|---|
| ನಿಕಷ | ೬– ೧೩ | ಒರೆಗಲ್ಲು |
| ದಿಶೆ | ೬– ೧೭ | ದೆಸೆ, ದಿಕ್ಕು |
| ಸುಯಿಧಾನ | ೬– ೧೮ | ಎಚ್ಚರಿಕೆ |
| ಬುಲ್ಲಯಿಸು | ೬– ೨೧ | ಉತ್ಸಾಹವಾಗುವಂತೆ ಮಾಡು |
| ಅಕ್ಕುರುಳಿ | ೬– ೪೪ | ಭಯ, ಅಂಜಿಕೆ |
| ಸವಡು | ೭– ೨೧ | ಬಿಡುವು, ವಿರಾಮ |
| ಅವದಾತ | ೭– ೨೧ | ಪರಿಶುದ್ಧವಾದ |
| ಕುಶಲಾಗ್ರ | ೭– ೨೬ | ಚತುರಮತಿಯುಳ್ಳವ |
| ನಿಟಲ | ೭– ೨೯ | ಹಣೆ |
| ತಥ್ಯ | ೭– ೩೦ | ಸತ್ಯ, ದಿಟ, ನಿಜ |
| ವಸುವೈಭವ | ೭– ೩೩ | ಐಶ್ವರ್ಯ (ಸಂಪತ್ತು) ಭೋಗದಿಂದ |
| ವಸುಧೇಶ | ೭– ೩೩ | ಭೂಮಿಯ ಒಡೆಯ, ರಾಜ |
| ಅಶನ | ೭– ೩೩ | ಆಹಾರ, ತಿನ್ನುವುದು |
| ವಸನ | ೭– ೩೩ | ಬಟ್ಟೆ |
| ಹದಿಬದೆಯ | ೮– ೧೪ | ಪತಿವ್ರತೆಯ |
| ನಿರಾಳ | ೮– ೨೬ | ಪ್ರಶಾಂತ, ನೆಮ್ಮದಿ, ಶಾಂತಿ |
| ನಿಪ್ಪೊಸತು | ೮– ೩೨ | ಬಹಳ ಹೊಸತು, ಹೊಚ್ಚ ಹೊಸತು |
| ಆಮಯ | ೮– ೩೯ | ರೋಗ |
| ಉಗ್ಗಡ | ೮– ೪೦ | ಅತಿಶಯ |
| ವೆಗ್ಗಳತೆ | ೮– ೪೦ | ಶ್ರೇಷ್ಠತೆಯನ್ನು ಪಡೆದ |
| ಸಮೀಚೀನ | ೮– ೫೯ | ಯೋಗ್ಯವಾದ |
| ವಿನತಿ | ೮– ೬೭ | ನಮ್ರತೆ, ಸೌಜನ್ಯ |
| ನಿರೂಪ | ೮– ೬೮ | ಅಪ್ಪಣೆ, ಆಜ್ಞೆ |
| ಘಳಿಯ | ೯– ೨ | ಕಟ್ಟಳೆ, ನಿಯಮ |
| ಗೊರವ | ೯– ೬ | ಶಿವ |
| ಮಿಗಧರ | ೯– ೧೧ | ಚಂದ್ರ |
| ಹಮ್ಮದವ | ೯– ೩೪ | ಬೆರಗು, ದಿಗ್ಭ್ರಮೆ |
| ತವನಿಧಿ | ೯– ೪೬ | ಎಂದೂ ನಾಶವಾಗದ ನಿಧಿ |
| ತಳಿಗೆ | ೯– ೫೨ | ಹರಿವಾಣ, ತಟ್ಟೆ |
| ಅವಧರಿಸು | ೯– ೬೫ | ಮನಸಿಟ್ಟು ಕೇಳು |
| ಅವಗಾಹದಿಂ | ೯– ೬೫ | ಚೆನ್ನಾಗಿ ತಿಳಿದು |

| | | |
|---|---|---|
| ದಿಮ್ಮಿದ | ೯- ೬೪ | ಶ್ರೇಷ್ಠ ವ್ಯಕ್ತಿ |
| ಸತ್ವರ | ೯- ೮೧ | ಬೇಗ-ವೇಗ |
| ಬೀಯವಮಾಡು | ೯- ೯೫ | ಖರ್ಚುಮಾಡು |
| ಪಳಯಿಸದ | ೯- ೯೭ | ದುಃಖಿಸದ, ಪ್ರಲಾಪಿಸದ |
| ನಿರತ | ೧೦- ೧೭ | ಆಸಕ್ತ |
| ಉಪರತಿ | ೧೦- ೧೭ | ವೈರಾಗ್ಯ |
| ಸಂತ | ೧೦- ೨೮ | ಶಾಂತಿ, ಸಮಾಧಾನ, ಪೂಜ್ಯನಾದ |
| ಏವದದಿ | ೧೦- ೨೯ | ದುಃಖದಿಂದ |
| ಸನ್ನಿಭದಿ | ೧೦- ೩೫ | ಸಮಾನವಾಗಿ |
| ಕಾಶ | ೧೦- ೩೭ | ಕಾಂತಿ, ಪ್ರಕಾಶ |
| ವನರುಹದ | ೧೦- ೪೧ | ಕಮಲದ, ತಾವರೆಯಂತಹ |
| ಅಗದ | ೧೦- ೪೯ | ಔಷಧ |
| ಲಾಗು | ೧೦- ೬೬ | ಹೆಚ್ಚಳ, ಆಧಿಕ್ಯ, ಚಳಕ |
| ಥಗೆ | ೧೦- ೬೭ | ಉರಿಬಿಸಿಲಿನ |
| ಇಂಗಡಲೊಳಿಂಪು | ೧೦- ೭೩ | ಕ್ಷೀರಸಾಗರದ ಸವಿ, ಹಿತ, ರುಚಿ |
| ವೀತರಾಗದಿ | ೧೦- ೭೫ | ರಾಗದ್ವೇಷಗಳಿಲ್ಲದ |
| ಉಲುಕದಂತಹ | ೧೦- ೮೪ | ಅಲ್ಲಾಡದಂತಹ, ಕಂಪನವಿಲ್ಲದ |
| ಕಸರಿಕೆ ಇರದ | ೧೧- ೨ | ಮೋಸವಿಲ್ಲದ |
| ಪರಿಕರ | ೧೧- ೧೫ | ಸಲಕರಣೆ |
| ನಿವಹ | ೧೧- ೨೧ | ಸಮೂಹ, ಗುಂಪು, ಸಂದಣಿ |
| ಆಯತದಿ | ೧೧- ೨೯ | ಉಚಿತದಿಂದ, ಯೋಗ್ಯದಿಂದ |
| ಯೋಜನೆ | ೧೧- ೩೯ | ಏರ್ಪಾಟು, ವ್ಯವಸ್ಥೆ |
| ಬಣಗು | ೧೨- ೨೧ | ಕ್ಷುದ್ರ, ಅಲ್ಪವಾದ |
| ಅನಿಶದಿಂ | ೧೨- ೩೩ | ನಿರಂತರದಿ, ಎಡೆಬಿಡದೆ |
| ತಹತಹದ | ೧೨- ೩೫ | ಕಳವಳದ, ಚಿಂತೆಯ |
| ಬಿನದಿ | ೧೨- ೪೨ | ವಿನೋದದಿಂದ, ಸಂತೋಷದಿಂದ |
| ವಸುಧೈವದ | ೧೨- ೪೭ | ವಿಶ್ವದ |
| ಉಪಕರಿಸಿ | ೧೨- ೮೧ | ಉಪಕಾರಮಾಡಿ, ಸಹಾಯಮಾಡಿ |
| ಅನುಗೆಡಿಸು | ೧೨-೧೪೧ | ಅನುಕೂಲ ಸಮಯವನ್ನು ಕೆಡಿಸುವಿಕೆ |
| ಡಿಳ್ಳ | ೧೨-೧೪೩ | ಭಯ, ದುಃಖ |
| ಗುಮ್ಮಡಿಯ | ೧೨-೧೪೮ | ಭೂತ (ಪಿಶಾಚಿ) |

| | | |
|---|---|---|
| ಯಾತುಧಾನದ | ೧೨-೧೬೦ | ರಾಕ್ಷಸ, ಪಿಶಾಚಿಯ |
| ಗೊಡ್ಡ | ೧೨-೧೬೧ | ಚೇಷ್ಟೆ, ತೊಂದರೆ |
| ಗೊರವ | ೧೨-೧೬೮ | ಶಿವ |
| ಸ್ವಾದ | ೧೨-೧೭೦ | ಸವಿ, ರುಚಿ |
| ಬಿತ್ತರದಿ | ೧೨-೧೭೯ | ವಿಸ್ತಾರವಾಗಿ |
| ಎಸೆವ | ೧೨-೨೨೯ | ಶೋಭಿಸುವ |
| ಜೀಯಮಾಡದೆ | ೧೩- ೨೭ | ಅತಿಯಾಗಿ ಖರ್ಚುಮಾಡದೆ |
| ಜೋಳವಾಳಿಯ | ೧೬- ೪ | ಒಡೆಯನ ಋಣವನ್ನು ತೀರಿಸುವಿಕೆ |
| ತಾಪತ್ರಯ | ೧೬- ೧೨ | ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ |
| ಖನನ | ೧೬- ೨೩ | ಹಣವನ್ನು ಹೂಳುವುದು, ತೋಡುವಿಕೆ |
| ಅವಗತಿ | ೧೬- ೩೪ | ಜ್ಞಾನ, ತಿಳಿವಳಿಕೆ |
| ರೊಡ್ಡಗೈ | ೧೬- ೬೪ | ಎಡಗೈ |
| ಕೆಮ್ಮಗೆಯ | ೧೬- ೭೮ | ವ್ಯರ್ಥವಾಗಿ, ಸುಮ್ಮನೆ |
| ದುಮ್ಮಾಳ | ೧೬- ೭೮ | ವ್ಯಸನ, ಚಿಂತೆ |
| ದಾತ | ೧೬- ೮೫ | ದಾನಿ, ಉದಾರಿ |

---

## ಶಿವಕವಿ ಪಂಡಿತ ಶ್ರೀ ನಾ. ಮ. ಸಿದ್ಧರಾಮಯ್ಯನವರು ಮಾಡಿದ ಧಾರ್ಮಿಕ ಸೇವೆಯ ಬಗ್ಗೆ ವಿಹಂಗಮ ನೋಟ

### ಹೊಸಪೇಟೆ ನಗರದಲ್ಲಿ

೧೯೬೮ ರಲ್ಲಿ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ಪ್ರತಿ ಆದಿತ್ಯವಾರ ಶಿವಾನುಭವ ಕಾರ್ಯಗಳು ನಡೆಸಿದರು ಮತ್ತು ಪ್ರತಿ ಶುದ್ಧ ಅಷ್ಟಮಿಗೆ ಧಾರವಾಡದ ಶ್ರೀ. ಮ. ನಿ. ಪ್ರ. ಲಿಂಗೈಕ್ಯ ಮೃತ್ಯುಂಜಯ ಮಹಾ ಶಿವಯೋಗಿಗಳವರ ಅಷ್ಟಮಿಯನ್ನು ಆಚರಿಸಿದರು. ಪ್ರತಿವರ್ಷ ಡಿಸೆಂಬರ್ ತಿಂಗಳಲ್ಲಿ ಧಾರವಾಡ ಮುರುಘಾ ಮಠದಿಂದ ನಡೆಯುವ ಶಿವಾನುಭವ ಪರೀಕ್ಷೆಗಳಿಗೆ ಹೊಸಪೇಟೆ ಕೇಂದ್ರವನ್ನಾಗಿ ಮಾಡಿಕೊಂಡು ಹೊಸಪೇಟೆಯ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲೂ ಮತ್ತು ಎ. ವಿ. ಸಂಘದವರು ನಡೆಸುತ್ತಿದ್ದ ವಿಜಯನಗರದ ಹಾಸ್ಟೆಲ್ ವಿದ್ಯಾರ್ಥಿಗಳಿಗೂ ಶಿವಾನುಭವದ ಬೋಧಕರೂ ಹಾಗೂ ಸಂಚಾಲಕರಾಗಿ ಕೆಲಸ ನಿರ್ವಹಿಸಿ ಅನೇಕ ಭಕ್ತರನ್ನು ವೀರಶೈವ ಮತ ತತ್ವದ ತಿರುಳನ್ನು ತಿಳಿಯುವಂತೆ ಮಾಡಿ ಮಹೋಪಕಾರ ಮಾಡಿದ್ದಾರೆ.

೧) ಶ್ರಾವಣ ಮಾಸದಲ್ಲಿ (೬-೮-೧೯೬೮) ಶ್ರೀ ಕೊಟ್ಟೂರು ಸ್ವಾಮಿಗಳ ಮಠ-(ಹೊಸಪೇಟೆ) ದಲ್ಲಿ ಪ್ರತಿದಿನ ಸಾಯಂಕಾಲ ೬ ಗಂಟೆಯಿಂದ ೮ ಗಂಟೆಯವರೆಗೆ.

ಶ್ರೀ ದ್ಯಾಂಪುರ ಚನ್ನಕವಿ ಕೃತ "ಶ್ರೀ ವೀರೇಶ್ವರ ಪುರಾಣವನ್ನು ಒಂದು ತಿಂಗಳ ಪರ್ಯಂತರ ಹೇಳಿ ಸಮಾಜದ ಜನತೆಗೆ ಸೇವಾ ಮನೋಭಾವದಿಂದ ಶರಣರ ಚರಿತ್ರಾಮೃತವನ್ನು ನೀಡಿ ಧನ್ಯರಾಗಿದ್ದಾರೆ.

೨) ೧೯೬೯ರಲ್ಲಿ ಶ್ರಾವಣ ಶುದ್ಧ ಗುರುವಾರದಿಂದ ಒಂದು ತಿಂಗಳ ಪರ್ಯಂತರವಾಗಿ ಶ್ರೀಗುರು ವೈ. ನಾಗೇಶಶಾಸ್ತ್ರಿಗಳಿಂದ ವಿರಚಿತವಾದ ಲಿಂಗೈಕ್ಯ "ಶ್ರೀ ಮ. ನಿ. ಪ್ರ. ಮೃತ್ಯುಂಜಯ ಲೀಲಾ ವಿಲಾಸ" ಪುರಾಣ ಪ್ರವಚನ ಮಾಡಿ ಕೊನೆಯಲ್ಲಿ ಮುಂಡರಗಿ ಸಂಸ್ಥಾನ ಮಠಾಧೀಶ್ವರರಾದ ಶ್ರೀ ಮ. ನಿ. ಪ್ರ. ಜಗದ್ಗುರು ಅನ್ನದಾನ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಹಾಗೂ ಶ್ರೀ ಎಂ. ಹೆಚ್. ಎಂ. ಗುರುಶಂಕರಯ್ಯನವರ ಘನ ಅಧ್ಯಕ್ಷತೆಯಲ್ಲಿ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ಮಹಾಕಾರ್ಯ ನಡೆಸಿ ಕೃತಕೃತ್ಯರಾಗಿದ್ದಾರೆ.

೩) ೧೯೭೦ ರಲ್ಲಿ ಶ್ರಾವಣಮಾಸದ ಶುದ್ಧದಿಂದ ಪ್ರತಿದಿನ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ದ್ಯಾಂಪುರ ಶ್ರೀ ಚನ್ನಕವಿ ಕೃತ ಶ್ರೀ ಬಾಲಲೀಲಾ ಮಹಾಂತೇಶ್ವರ ಪುರಾಣ ಪ್ರವಚನವನ್ನು ಒಂದು ತಿಂಗಳ ಪರ್ಯಂತರ ಮಾಡಿ ಕೊನೆಯ ದಿನಾಂಕ ೩-೯-೧೯೭೦ ಗುರುವಾರ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ಕೊಪ್ಪಳದ ಸಂಸ್ಥಾನ ಮಠದ ಶ್ರೀ ಮ. ನಿ. ಪ್ರ. ಶಾಂತವೀರ ಮಹಾ ಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಶ್ರೀ ಬೆಲ್ಲದ ಚನ್ನಪ್ಪನವರ ಘನ ಅಧ್ಯಕ್ಷತೆಯಲ್ಲಿ ಹಾಗೂ ಕೊಟ್ಟೂರು ಸ್ವಾಮಿ ಮಠದ ಶ್ರೀ ಮ. ನಿ. ಪ್ರ. ಬಸವಲಿಂಗ ಮರಿದೇವರೂ, ಗಂಗಾವತಿ ಕಲ್ಮಠದ ಶ್ರೀ ನಿ. ಪ್ರ. ಪತ್ರೆಯ್ಯ ಸ್ವಾಮಿಗಳೂ, ಶ್ರೀ ಮೋಕೆಯ ಪಟ್ಟದ ದೇವರೂ ಹಾಗೂ ನಾಗೇನಹಳ್ಳಿಯ ನಗರಗಡ್ಡಿ ಮಠದ ಶ್ರೀ ಮ. ನಿ. ಪ್ರ. ಶಿವಶಾಂತವೀರ ಸ್ವಾಮಿಗಳವರ ಮುಖ್ಯ ಅತಿಥಿಗಳ ಸಮ್ಮುಖದಲ್ಲಿ ಪುರಾಣ ಮಂಗಲ ಮಾಡಿ ಶಿವಕೃಪೆಗೆ ಪಾತ್ರರಾಗಿದ್ದಾರೆ.

೪) ಇದಲ್ಲದೇ ೧೯೭೦ರಲ್ಲಿ ಅಂದರೆ ದಿನಾಂಕ ೨೨-೪-೧೯೭೦ರಲ್ಲಿ ಮತ್ತು ೨೩-೪-೧೯೭೦ ಈ ಎರಡೂ ದಿನಗಳಲ್ಲಿ ಪರಮ ತಪಸ್ವಿ, ಧಾರವಾಡದ ಶ್ರೀ. ಮ. ನಿ. ಪ್ರ. ನವಕಲ್ಯಾಣ ಮಠದ ಕುಮಾರ ಮಹಾಸ್ವಾಮಿಗಳವರಿಂದ ಬಿ. ಡಿ. ಸಿ. ಸಿ. ಬ್ಯಾಂಕ್ - ಹೊಸಪೇಟೆ - ಹೊರ ಆವರಣದ ಭವ್ಯ ಮಂಟಪದಲ್ಲಿ ಕ್ರಮದಲ್ಲಿ "ಶಿವಶರಣರ ಸಮನ್ವಯ ಯೋಗ" ಹಾಗೂ ಮಾನವ ಧರ್ಮದ ಬಗ್ಗೆ

ವಿದ್ವತ್ ಪೂರ್ಣವಾದ ಹಾಗೂ ಅನುಭಾವಪೂರಿತವಾದ ದಿವ್ಯ ಸಂದೇಶ ಕೊಡಿಸಿದ ಸಂಚಾಲಕರಾಗಿ ಹಾಗೂ ಚೈತನ್ಯ ಪುರುಷರಾಗಿ ಸೇವೆ ಮಾಡಿ ಅನಂತ ಭಕ್ತಕೋಟಿಗೆ ಧಾರ್ಮಿಕದ ಪ್ರಜ್ಞೆ ಮೂಡಿಸಿ ಸಂತೋಷವನ್ನುಂಟುಮಾಡಿದರು.

೫) ೧೯೭೧ರ ಏಪ್ರಿಲ್ ತಿಂಗಳಲ್ಲಿ ಪ್ರಾರಂಭಗೊಂಡು ದಿನಾಂಕ ೬-೫-೧೯೭೧ರ ಗುರುವಾರದ ದಿನ ಡ್ಯಾಂಪುರ ಚನ್ನಕವಿ ಕೃತ ಹಾನುಗಲ್ ಲಿಂಗೈಕ್ಯ ಕುಮಾರ ಶಿವಯೋಗಿಗಳವರ ಪುರಾಣ ಪ್ರವಚನದ ಮಂಗಲ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ಶ್ರೀ. ಮ. ನಿ. ಪ್ರ. ಹಾನ್‌ಗಲ್ ಸದಾಶಿವ ಯೋಗಿಗಳವರ ದಿವ್ಯ ನೇತೃತ್ವದಲ್ಲಿ, ಅ. ಭಾ. ಶಿವಾನುಭವ ಸಂಸ್ಥೆಯ ಕಾರ್ಯಾಧ್ಯಕ್ಷರು ಆದ ಬಳ್ಳಾರಿಯ ಶ್ರೀ ವೈ. ಮಹಾಬಲೇಶ್ವರಪ್ಪನವರ ಘನ ಅಧ್ಯಕ್ಷತೆಯಲ್ಲಿ ಹಾಗೂ ಬಳ್ಳಾರಿಯ ಶ್ರೀ ಗುರು ವೈ. ನಾಗೇಶಶಾಸ್ತ್ರಿಗಳು ಮತ್ತು ನಾಗರಹಾಳು ಮಠದ ಪಂಡಿತ ಶ್ರೀ ದೊಡ್ಡಯ್ಯ ಶಾಸ್ತ್ರಿಗಳವರ ಮುಖ್ಯ ಆತಿಥ್ಯದಲ್ಲಿ ನೆರವೇರಿಸಿ ಸಾರ್ಥಕ ಕೆಲಸ ಮಾಡಿದ್ದಾರೆ.

೬) ಲಿಂಗೈಕ್ಯ ಶ್ರೀ ಟಿ. ಹೆಚ್. ಎಂ. ಷಡಕ್ಷರಯ್ಯನವರ ಶಿವಾನುಭವ ಮಂಟಪ, ಹೊಸಪೇಟೆ - ಇದರಲ್ಲಿ ಅಕ್ಕನ ಬಳಗದ ಆಶ್ರಯದಲ್ಲಿ ರಾಘವಾಂಕ ವಿರಚಿತ "ಸಿದ್ಧರಾಮ ಚಾರಿತ್ರ"ವನ್ನು ಮತ್ತು ಚಾಮರಸ ಕವಿಕೃತ "ಪ್ರಭುಲಿಂಗ ಲೀಲೆ" ಯನ್ನು ಪ್ರವಚನ ರೂಪದಲ್ಲಿ ಹೇಳಿ ಅನಂತ ಭಕ್ತರಿಗೆ ಮಹದುಪಕಾರ ಮಾಡಿದ್ದಾರೆ.

೭) ಬಸವಣ್ಣನವರ ಜಯಂತಿ (೭-೫-೧೯೭೦) ಹಾಗೂ ಶ್ರೀಮದ್ ಉಜ್ಜಯಿನಿ ಸದ್ಧರ್ಮ ಸೂರ್ಯ ಸಿಂಹಾಸನಾಧೀಶ್ವರ "ಶ್ರೀ ಜಗದ್ಗುರು ಸಿದ್ಧಲಿಂಗ ಮಹಾಶಿವಯೋಗಿಗಳವರ ಪುಣ್ಯತಿಥಿಯು (೮-೧-೧೯೬೯) ಈ ಮಹಾಕಾರ್ಯಗಳನ್ನು ಪ್ರತಿವರ್ಷ ಶ್ರೀ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ನಡೆಸಿದರೂ ೧೯೬೯ ಮತ್ತು ೧೯೭೦ ರಲ್ಲಿ ವಿಶೇಷವಾಗಿ ಆಚರಿಸಿ ಅಸಂಖ್ಯ ಭಕ್ತರಿಗೆ ಆನಂದವನ್ನುಂಟು ಮಾಡಿದ್ದಾರೆ.

೮) ೧೯೬೮ ರಿಂದ ೧೯೮೦ರ ವರೆವಿಗೂ ಲಿಂಗೈಕ್ಯ ಶ್ರೀ ಟಿ. ಹೆಚ್. ಎಂ. ಷಡಕ್ಷರಯ್ಯನವರ ಶಿವಾನುಭವ ಮಂಟಪದಲ್ಲಿ ಅನಂತವಿಧವಾಗಿ ಶಿವಾನುಭವ ಕಾರ್ಯಕ್ರಮಗಳನ್ನು ನಡೆಸಿ ಜನತೆಯಲ್ಲಿ ಧಾರ್ಮಿಕದ ಪ್ರಜ್ಞೆ, ನವಜಾಗೃತಿಯನ್ನುಂಟು ಮಾಡಿ ಬಹು ಉಪಯುಕ್ತ ಕಾರ್ಯವನ್ನೆಸಗಿದ್ದಾರೆ. ಪ್ರತಿವರ್ಷ ಅಕ್ಕಮಹಾದೇವಿಯವರ ಜಯಂತ್ಯುತ್ಸವದಲ್ಲಿ ಕಾರ್ಯ ಭಾಗಿಗಳಾಗಿ ಧಾರ್ಮಿಕತೆಗೆ ಮಹಾಚೇತನ ವಿತ್ತಿದ್ದಾರೆ.

೯) ೧೯೭೧ರಲ್ಲಿ ಕೊಟ್ಟೂರು ಸ್ವಾಮಿಗಳ ಮಠಕ್ಕೆ ಉತ್ತರಾಧಿಕಾರಿಗಳನ್ನು ಆರಿಸಬೇಕೆಂದು ಹುಬ್ಬಳ್ಳಿಯ ಮೂರು ಸಾವಿರ ಮಠದ ಶ್ರೀ ಶ್ರೀ ಜಗದ್ಗುರು ಗಂಗಾಧರ

ಮಹಾಶಿವಯೋಗಿಗಳವರ ದಿವ್ಯ ನೇತೃತ್ವದಲ್ಲಿ ಹಾಗೂ ಇಲಕಲ್ ಮಹಾಂತ ಶಿವ ಯೋಗಿಗಳವರ ಅಧ್ಯಕ್ಷತೆಯಲ್ಲಿ ಕೊಟ್ಟೂರು ಸ್ವಾಮಿಗಳವರ ಮಠದಲ್ಲಿ ನಡೆದ ಸಭೆ ಯಲ್ಲಿ ಮುಖ್ಯಪಾತ್ರ ವಹಿಸಿದವರಲ್ಲಿ ಶ್ರೀ. ನಾ. ಮ. ಸಿದ್ಧರಾಮಯ್ಯನವರು ಒಬ್ಬರು.

೧೦) ಈ ಮೇಲಿನ ಎಲ್ಲಾ ಕಾರ್ಯಕ್ರಮಗಳ ಮಹಾಚೇತನ ಪುರುಷ ರಾಗಿ ಉಚಿತ ಮನೋಭಾವದ ಶಿವಾನುಭವ ಸೇವೆ ಸಲ್ಲಿಸಿ ಎಲ್ಲರ ಮೆಚ್ಚುಗೆಗೆ ಪಾತ್ರ ರಾಗಿದ್ದಾರೆ.

೧೧) ೧೯೭೭ರಲ್ಲಿ ಶ್ರೀ ಸಂಗನಬಸವ ಮಹಾಸ್ವಾಮಿಗಳವರ ಪಟ್ಟಾಧಿಕಾರದ ಮಹಾಕಾರ್ಯಕ್ಕೆ ಪ್ರಥಮದಲ್ಲಿ ಪರಮತಪಸ್ವಿ ಒಳಬಳ್ಳಾರಿ ಮಠದ ಲಿಂಗೈಕ್ಯ ಶ್ರೀ ಚನ್ನಬಸವ ಮಹಾಸ್ವಾಮಿಗಳವರ ಪ್ರಥಮ ದರ್ಶನ ಮಾಡಿಸಿದವರಲ್ಲಿ ಒಬ್ಬರಾದ ಶ್ರೀ. ನಾ. ಮ. ಸಿದ್ಧರಾಮಯ್ಯನವರು ಮುಂದೆ ಪಟ್ಟಾಧಿಕಾರದ ಶಿವಾನುಭವ ಗೋಷ್ಠಿಗೆ ಬಳ್ಳಾರಿಯ ಸರ್ವದರ್ಶನ ತೀರ್ಥಶ್ರೀ ವೈ. ನಾಗೇಶಶಾಸ್ತ್ರಿಗಳವರನ್ನು ಮತ್ತು ಶ್ರೀ ಶಿ. ಮ. ಚನ್ನಬಸವೇಶ್ವರರನ್ನು ಹಾಗೂ ಇವರ ತೀರ್ಥರೂಪರಾದ ಪಂಡಿತ ಶ್ರೀ. ನಾ. ಮ. ದೊಡ್ಡಯ್ಯ ಶಾಸ್ತ್ರಿಗಳವರನ್ನು ಭಾಗಿಯಾಗುವಂತೆ ಮಾಡಿದ ಮಹಾಕಾರ್ಯಕ್ಕೆ ಕಾರಣೀಭೂತರಾಗಿ ಸೇವೆ ಸಲ್ಲಿಸಿದ್ದಾರೆ.

ಇವರೆಲ್ಲಾ ಕಾರ್ಯಕ್ರಮಗಳಿಗೆ ಜಾಲಿಬೆಂಚಿಯ ಸಂಗೀತ ಕಲಾಕೋವಿದ ಶ್ರೀ ದೊಡ್ಡ ಬಸವಯ್ಯ ಗವಾಯಿಗಳಿಂದ ವಚನ ಸಂಗೀತವೂ ಹಾಗೂ ಕುಡಿತಿನಿಯ ಶ್ರೀ ವಿರೂಪಾಕ್ಷಪ್ಪನವರಿಂದ ತಬಲಾ ವಾದನವೂ ಏರ್ಪಡಿಸುವ ಕ್ರಮಪದ್ಧತಿ ಸಾಂಪ್ರ ದಾಯಿಕವಾಗಿ ರೂಢಿಗೊಂಡು ಸಭೆಗೆ ಶೋಭೆಯುಂಟು ಮಾಡುತ್ತಿದ್ದಿತು. ಇದೇ ಪ್ರಕಾರ ಉಳವಿ, ಕೊಪ್ಪಳ, ಕುಷ್ಟಗಿ, ರಾಯಚೂರು, ಬಳ್ಳಾರಿ, ಬೆಂಗಳೂರಿನಲ್ಲಿ ಅನೇಕ ಧಾರ್ಮಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗಿಯಾಗಿ ಅಪಾರ ಸೇವೆ ಸಲ್ಲಿಸಿದ್ದಾರೆ.

ವಯಸ್ಸಿನಲ್ಲಿ ನನಗಿಂತ ಚಿಕ್ಕವರಾದರೂ ಉಳಿದೆಲ್ಲಾ ವಿಷಯಗಳಲ್ಲಿ ಮೇಧಾವಿ ಗಳಾಗಿ ನನಗೆ ಪೂಜ್ಯ ಗುರುಗಳಾಗಿದ್ದಾರೆ. ಅವರ ಈ ಸಂಸ್ಮರಣೆಯು ನಾಡಿನ ಜನರಿಗೆಲ್ಲಾ ವೇದ್ಯಗೊಂಡು ಅವರಿಂದ ಇನ್ನೂ ಅನೇಕ ಧಾರ್ಮಿಕ ಕಾರ್ಯಗಳು ಎಲ್ಲಾ ಸಮಾಜದ ಜನತೆಯು ಮಾಡಿಸಿಕೊಳ್ಳುವಂತಾದರೆ ಅದಕ್ಕಿಂತ ಮಿಗಿಲಾದ ಧನ್ಯತೆ ಉಂಟೇ ಜಗದಲ್ಲಿ !

ದಿನಾಂಕ :—
೧–೧೩–೧೯೮೮

—ಜಿ. ಜೆ. ಗದಿಗೆಪ್ಪ, ಭೂಒಡೆಯರು
ಹೊಸಪೇಟೆ

ಶ್ರೀ

# ಒಳಬಳ್ಳಾರಿ ಶ್ರೀ ಚನ್ನಬಸವ ಸ್ವಾಮಿಗಳ ಸುಪ್ರಭಾತ

ವೀರಶೈವ ತತ್ತ್ವ ಸಾರುವ
ಚಾರು ಸತ್ಕ್ರಿಯದಾಗರ
ನಾಮ ಸಾರ್ಥಕವಾದುದೈ
ಶ್ರೀ ಚನ್ನಬಸವಾ ಚನ್ನಬಸವಾ.

ಒಳಬಳ್ಳಾರಿ ಎಂದು ನೆನೆದೊಡೆ
ಬಳಿಯೊಳು ಬಂದು ನಿಂತವನಂತೆ
ಶಾಂತ ಶ್ರೀ ಶಿವಯೋಗಿ ಪ್ರತ್ಯಕ್ಷವಾಗಿ
ಸಂತೋಷದಿಂದ ಕೃಪೆಮಾಡು

ನಾವು ಕೋರುವ ವರವೀವ ನಿರಂಜನ
ಭಾವಜ ಭಂಜನ ಶ್ರೀ ಚನ್ನಬಸವ
ಚಾಗಿ ಮಠಾಧೀಶ ನಾಮ ಸಾರ್ಥಕವಾಗಿ
ತ್ಯಾಗ ಭೋಗದ ಯೋಗಿ ನೀನಾಗಿ

ಇಚ್ಛಿಸಿದ ಜನಗಳಿಗೆ ನಿಚ್ಚ ಸಂಪದವಿತ್ತೆ
ನಿತ್ಯ ಸಂತಸದಿಂದ ಹಾಡುವರೂ
ಕಾವಿ ವಸ್ತ್ರಕೆ ಬೆಲೆಯು ನಿಮ್ಮಿಂದ ಸಾರ್ಥಕವು
ಕಾವನಲರಂಬಿಗೆ ಎದೆಗೊಡದೆ

ದೇವನು ತಾನೊಮ್ಮೆ ಕಾಮನ ಸುಟ್ಟನು
ಭಾವಜನನು ಮಾತ್ರ ತಾನುಳಿದ
ಉಳಿದಂಥ ಮನಸಿಜನರುಹಿಸಿ ಭಸಿತವ
ತಳೆದ ಶ್ರೀ ಚನ್ನಬಸವಾ

ಜಂಗಮ ಭಕ್ತರು ಅಂಗಳದಿ ತುಂಬಿದೆ
ರಂಗ ಮಂಟಪದೊಳು ಧ್ಯಾನಿಪರೂ
ಭವರೋಗ ವೈದ್ಯನೇ ಬೆಳಗಾಗಿದೇಳಯ್ಯ
ತವಭಕ್ತ ಜನರೆಲ್ಲ ಕಾದಿಹರೂ

ಬೆಳ್ಳನೆ ಬೆಳಗುವ ರವಿತಾನೆ ಬಂದಿಹ
ಬೆಳ್ಳನೆ ಮುಡಿಯುಟ್ಟು ದರುಶನಕೆ
ಸಂದಣಿಯೊಳು ತೂರಿಬಂದು ನಮಿಸಲಿಕ್ಕೆ
ತಂದೆ ನಿಮ್ಮಯ ಪಾದ ಕಾಣಿಕೆ

ಹೃದಯ ಕಮಲದೊಳು ನೆಲಸಿದ ಚಿಲ್ಲಿಂಗ
ಪದುಳದಿಂ ಪೂಜಿಪ ಶಿವಯೋಗಿಯೇ
ಸದಯ ಧರ್ಮದ ಮೂರ್ತಿ ದಶ ದಿಶೆಯೊಳು ಕೀರ್ತಿ
ತವಪಾದ ಕೀರ್ತನೆ ಗೈಯ್ಯುವರು

ಅಡವಿಯ ಜನರನು ಅಮರರಗೈಯ್ಯಲು
ಅಡವಿ ಅಮರೇಶ್ವರ ಸ್ಥಾಪಕರೂ, ಪೋಷಕರು
ಪೊಡವಿಯೊಳಗೆ ಶಿವ ಧರ್ಮಕ್ಷೇತ್ರವ ಮಾಡಿ
ದೃಢದಿಂದ ಭಕ್ತಾಳಿ ಪೂಜಿಪರೂ ರಾಜಿಪರು

ಏಳಯ್ಯ ಬೆಳಗಾಯಿತು ಬಾಳ ಬಟ್ಟೆಯ ತೋರು
ಶೀಲ ಗುಣಾನ್ವಿತನೆ ಚರಮೂರ್ತಿಯೆ
ಬಾಳಲೋಚನ ಮೂರ್ತಿ ಒಹಳ ಬೇಕಾಗಿದೆ
ತಾಳಲಾರರು ಭಕ್ತ ಜನರೀಗ ಜನರೀಗ

ಜ್ಞಾನ ಪ್ರಕಾಶವ ದೀನ ಭಕ್ತರಮೇಲೆ
ಬೆಳ್ಳನೆ ಬೆಳಕಾಗಿ ಬೀರುವದೂ
ಬಾಳಿನೊಳಗೆ ಸಮಭಾವನೆ ಬರುವಂತೆ
ಪಾವನಾತ್ಮಗೆ ಜಯ ಮಂಗಲವೂ

ಮಂಗಲ ಜಯ ಜಯ, ಲಿಂಗಾಂಗ ಸಮರಸ
ಅಂಗಭಾವವನೀಗೆ ಲಿಂಗವೆ ತಾನಾಗಿ
ಕಂಗಳ ಬೇಗೆ ಶಿವಲಿಂಗವ ನೀನಾಗೆ
ಸದಯವಾರಿಧಿ ಎಂದು ಕೀರ್ತಿಪರೂ....

ಪಂ. ನಾ. ಮ. ದೊಡ್ಡಯ್ಯಶಾಸ್ತ್ರಿಗಳು
ನಾಗರಹಾಳ

---

## ಶಿವಾನುಭವ

ಶಿವಾನುಭವ ವೆಂಬೈದಕ್ಷರಂಗಳು ಮನದಲ್ಲಿರಬೇಕು
ಶಿವಯೋಗವೆಂಬ ಸಾಧನಗೈಯುತ ಸಂತತವಿರಬೇಕು
ಅನ್ಯಧರ್ಮಗಳ ಗೌರವದಿಂದಲಿ ನೋಡುತ್ತಿರಬೇಕು
ಆ ಮತ ಈ ಮತ ಸಮ್ಮತ ವೆನುತಲಿ ಒಂದೇ ಭಾವಬೇಕು
ಅಣ್ಣನ ಭಕುತಿಯು ಚನ್ನನ ಜ್ಞಾನವು ಕಲಿಯುತಲಿರಬೇಕು
ಕಣ್ಣಿಗೆ ತೋರುವದೆಲ್ಲವು ವಿಶ್ವವು ದೇವರೆನ್ನಬೇಕು
ನಾನು ನನ್ನದೆಂಬಭಿಮಾನಗಳನು ತ್ಯಜಿಸುತಲಿರಬೇಕು
ನೀನು ಎಂಬ ನಿಜದರುವಿನ ಭಕುತಿಯು ಸೇವೆಯೊಳಿರಬೇಕು
ಜಾತಿ ಕೋತಿಗಳ ಗಾಳಿಯು ಸೋಂಕದೆ ನೀತಿವಂತನಾಗಿ
ಮಾತಿನಂತೆ ಮನ ನಡೆಯುಳಿದ್ದರೆ ಶಿವಾನುಭವಿಯಹಾಗಿ
ಮೃದುವಚನಂಗಳೆ ಜಪವೆಂದೆನ್ನುತ ಪದುಳದಿ ತಾನಿರುತಾ
ಸದಯವು ಧರ್ಮದ ಮೂಲವೆನುತಲಿ ಬಾಳುವ ಗೈಯುತ್ತಾ
ಭೃತ್ಯ ಭಾವದಿಂ ಸತ್ಯ ಶರಣ ಪಥಗಾಮಿಯು ತಾನಾಗೀ
ಮಿಥ್ಯ ವಿಷಯ ಸುಖ ನಿತ್ಯವಲ್ಲವೆಂದರಿಯುತ ದೃಢವಾಗಿ
ಶಿವಾನುಭವದ ಅಧಿಪತಿ ಸ್ಥಾನಕೆ ಚನ್ನಬಸವ ಶಿವಯೋಗಿ
ಶರಣಾಗತ ಜನ ಕ್ಷೇಮವ ವಹಿಸಿದ ಚಿನ್ನಿಧಿ ಶಿವಯೋಗಿ

—ಪಂ|| ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು

# ಬಳಬಳ್ಳಾರಿ ಶ್ರೀ ತಾತನವರ ಸುಪ್ರಭಾತ

— ನಾ. ಎಂ. ಸಿದ್ಧರಾಮಯ್ಯ

ಉಷೆಯು ಹೊಂಬೆಳಗಿನೊಳು ಸ್ವರ್ಣಗಿರಿ ಮಠದೊಳಗೆ
ನಿಶೆಯು ಕಳೆದೋಡುತಲಿ ಬಂಗಾರ ಬೆಳಗಿಗೆ
ರಾಸು ಕರುಗಳುಯಲ್ಲ ಅಂಬಾ ಅಂಬಾ ಯೆಂದೂ
ಸೂಸುತಿರುವದು ಪತ್ರ ಪುಷ್ಪಗಳ ಕಂಪೂ

ಮಠದ ಅಂಗಳದಲ್ಲಿ ಭಕ್ತ ಜನರೆಲ್ಲರೂ
ಮಠದೊಡೆಯ ಶ್ರೀ ಚನ್ನಬಸವ ಪೂಜೆಗೆ ಯೆಂದು
ಘಟತುಂಬಿದಾ ನೀರು ಲಿಂಗಮಜ್ಜನಕೆಂದು
ಪಟುತರದ ಭಕ್ತಿಯುಲಿ ಹಿಡಿದು ನಿಂತಿಹರು

ಚನ್ನಬಸವನೇ ಏಳು ಸನ್ಮತಿಯು ಗಾನದೊಳು
ಚನ್ನಬಸವಾ ಯೆಂದು ಕೋಗಿಲೆಯು ಹಾಡುತಿದೆ
ತನ್ನ ಮಧುರದ ಭಕ್ತಿಯುಲಿ ಚನ್ನ ಚಲುವಿನ ಉಷೆಯುಲಿ
ಚನ್ನ ಪರ ಜಂಗಮದ ಪರವಶದಿ ನೀನೇಳು

ಏಳು ಏಳಯ್ಯ ಯೋಗನಿದ್ರೆಯು ಕಳೆದು
ಬಾಳಿನಾ ಬೆಳಕಾಗಿ ರಾಗ ರಂಜನೆ ಕಳೆದು
ಏಳು ಏಳಯ್ಯ ಶ್ರೀ ನಿರಂಜನ ಮೂರ್ತಿ
ಏಳಿಲವ ಗೈಯ್ಯುದಲಿ ಕಾರುಣ್ಯಮೂರ್ತಿ

ತ್ಯಾಗ ಭೋಗದಿ ಕೂಡಿ ಶಿವಯೋಗಿ ನೀನಾಗಿ
ನೀಗು ಜನಗಳ ನೋವು ಗೆಲುವಿನಲಿ ಹರಸಿ
ಬಾಗಿ ಬಂದವರೆಲ್ಲ ಸಮತೆಯುಲ್ಲಿಯೆ ಕಂಡು
ಭೋಗವದು ಲಿಂಗ ಭೋಗೋಪ ಭೋಗದಲಿ ಕಂಡು

ಪೊಡವಿಯೊಳಡಿಯಿಡಲು ಅಮರೇಶ್ವರ ಕ್ಷೇತ್ರವು
ಮ್ಯಾಡಲಿಂಗ ಸ್ಥಾಪಕರು ಶ್ರೀ ತಾತನವರೂ
ಹಿಡಿದ ಸಂಕಲ್ಪವನು ಸಾಧಿಸಿ ಪೊರೆಯುವ ಯೋಗಿ
ನಡೆಚನ್ನ ನುಡಿಚೆನ್ನ ಶಿವಯೋಗಿ ಮೊಗಚನ್ನ

ಪರಮ ತಾತನ ಶ್ರೀಮುಖ ನೋಡಿ ದಣಿಯದು ಕಣ್ಣು
ಪರವಶದಿ ಮೈಮರೆದು ಶಿವಯೋಗಿ ದರುಶನದಿ ss
ಚರವರರು ಚಿನ್ಮಯರು ಶ್ರೀ ತಾತನವರೂ
ಎರಡನೆಯ ಶ್ರೀ ಚನ್ನಬಸವಣ್ಣ ತಾವಾಗೀ

ಪರಮ ಜ್ಞಾನಿಗಳಾಗಿ ಮೌನವೇ ತಾವಾಗಿs
ಗುರುದೇವ ಕಾರ್ಯದೊಳು ತತ್ವವ ತಿಳಿಸಿ
ಹರಿದೋಡುವವಘಗಳು ನಿಮ್ಮ ಸನ್ನಿಧಿಯೊಳು
ಕರಮುಗಿದ ಭಕುತರಿಗೆ ಕೊಡು ಬೇಗ ದರುಶನವ

ಸತ್ಯ ಶುದ್ಧದ ಗಳಿಕೆ ನಿತ್ಯ ಅರುಹಿನ ಬಳಕೆ
ಸತ್ಯ ಶುದ್ಧ ಕಾಯಕವು ದಾಸೋಹಕೆ
ನಿತ್ಯನಿರಂಜನನೆ ಅವಿಕಲದ ಜಂಗಮನೆ
ನಿತ್ಯ ಶಿವಪೂಜೆಗೆ ಬೇಗನೇಳೊಽಽ

ಮರಿದೇವರೆಲ್ಲರೂ ಕೈ ಮುಗಿದು ನಿಂತಿಹರು
ಗುರುದೇವ ನೀನೆದ್ದು ಅನುಗ್ರಹವ ಮಾಡು
ಪರಿಪರಿಯ ಪೂಜೆಯಾ ವೈಭೋಗ ನೋಡು
ಗುರುತರದಿ ನಡೆಸಿಹರು ಅಖಿಲ ಭಕ್ತರುಗೂಡಿ

ಪರಮ ಪದವಿಯನೊಲ್ಲೆ ವರದಕೀರ್ತಿಯನೊಲ್ಲೆ
ಪರಮ-ಪ್ರಸಾದವನು ಕರುಣಿಸುವ ಮೂರ್ತಿ
ಪರಜಂಗಮದಾ ಸ್ಥಿತಿಯಲಿ ನೀನು ನಿಂತೂ
ವರ ವಜ್ರಮಹೋತ್ಸವವ ನೀನೋಡಿ ಹರಸೂಽ

ಮಂಗಲವು ಶ್ರೀ ಚನ್ನಬಸವ ತಾತನಿಗೆ
ಮಂಗಲವು ಸ್ವರ್ಣಗಿರಿ ಮಠದವರ ಸ್ವಾಮಿಗೆ
ಮಂಗಲವು ಒಳಬಳ್ಳಾರಿ ಮಠದ ಅಧಿಪತಿಗೆ
ಮಂಗಲವು ಜಯ ಜಯತು ಶ್ರೀ ತಾತಗೆಽಽ

ಸತ್ಯಂ ಶಿವಂ ಸುಂದರಂ

---

## ಶ್ರೀ ಚನ್ನಬಸವ ಸ್ವಾಮಿಗಳ ಪ್ರಾರ್ಥನೆ

("ಕರುಣಾಳು ಎಡೆಯೂರ ವಾಸ ಸಿದ್ಧಲಿಂಗೇಶ" ಎಂಬಂತೆ)

ಕರುಣಾಳು ಶಿವಯೋಗಿ ಚನ್ನಾ
ಬಸವ ಮಾಂ ಪಾಹೀ !
ನೆನೆವೇ ಹೇ ಜಂಗಮಾರ್ಯಾ ತಾಪಾದಿ ದೂರ ॥ಪ॥
ಭವದುಃಖದಿಂದೇ ಬಳಲಿದೆನಿಂದೇ
ಪರಿಹರಿಸಲೆಂದೇ ಬೇಡಲು ಬಂದೆ ॥೧॥
ತನು ಮೋಹದಿಂದಾ ಘನತಾಪದಿಂದಾ
ಚಿನುಮಯರೂಪನ ಮರೆದಂಥಪಾಪಾ ॥೨॥
ವನಿತಾದಿ ವಿಷಯ ಘನಸೌಖ್ಯವೆಂದೂ
ನೆರೆನಂಬಿ ಕೆಟ್ಟೇ ನಿನ್ನನು ಬಿಟ್ಟೆ ॥೩॥
ತನು ಮನ ಶೀಲ ಶಿವಯೋಗಲೋಲ
ನುಡಿ ಮಂತ್ರ ನಡೆ ತಂತ್ರ ವಿನುತಾತ್ಮ ಯೋಗೀ ॥೪॥
ಕರುಣ ಕಟಾಕ್ಷಾ ಭಕ್ತಸಾಪೇಕ್ಷಾ
ನಿರವಧಿಕ ಪ್ರೇಮ ಪರಿಪೂರ್ಣ ಧಾಮ ॥೫॥
ಒಳಗಿರುವಂಥ ಬಳ್ಳಾರಿ ತಾತಾ
ಹೊರವಳಗೆ ತುಂಬಿದ ಪರಿಪೂರ್ಣವೀತಾ ॥೬॥

—ಪಂ. ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು

# ಶ್ರೀ ತಾತನವರ ಸ್ತುತಿ ಪಂಚಕ

—ನಾ. ಮ. ಸಿದ್ಧರಾಮಯ್ಯ

ಚಂಪಕ ಮಾಲಾವೃತ್ತ :

ವಿರತ ಮಠಾಧಿಕಾರವನು ತಾ ಧರೆಯೊಳ್ ಪುನೀತಭಾವದಿಂ
ಪರಿತರ ಓಜದಿಂ ಹೊಳೆಬಳಾರಿ ಮಠಾಧಿಪರಾದ ಚನ್ನ ಶ್ರೀ
ಗುರು ಬಸವೇಶ ತಾ ಬೆಳಗಿ ಚಂದದಿ ನೋಟದ ಮಾಟ ಕೂಟದಿಂ
ವರ ಶಿವಯೋಗದೊಳ್ ಅನುರೂಪ ತಪೋಧನರೆಂದು ಖ್ಯಾತಿಯಂ ॥೧॥

ಧರೆಯ ಜನಾಭಿವೃದ್ಧಿಗೆ ಪುರಾತನ ತತ್ವದ ತಾವು ಕಾರ್ಯದಿಂ
ಕರುಣ ಕೃಪಾವಲೋಕನದಿ ತೋರಿಸಿ ಭಕ್ತಿಯ ಶಕ್ತಿ ಪಾತದಿಂ
ಪರಿಹರಿಸುತ್ತ ಪಾಪವ ಸುನೀತಿ ಶಿವಾನುಭವಾದಿ ಯೋಗದಾ
ಪರಿ ತಿಳಿಸುತ್ತ ತಾತರೆನಿಸುತ್ತ ಪ್ರಖ್ಯಾತಿಯೊಳಾದ ಯೋಗಿಯೇ ॥೨॥

ಪರಮವಿರಕ್ತಿ ಭಾವದ ಮಹಾಶಿವಯೋಗಿ ಬಳಲ್ದ ಜೀವರಾ
ದರದಿ ಸುಚಿತ್ತ ಹಸ್ತದಿ ವಿನೂತನ ಮಾಡಿ ನಿರಾಳಭಾವದಿಂ
ಗುರುತರ ಯೋಗದಿ ಮೋದವ ಮಾಡಿ ಸಮಾಜದ ಏಳ್ಗೆಗಾಗಿಯೆ
ಪರಮ ತಪೋಧನರಾಗಿ ಸುಧೀರ ಸುಶಾಂತ ಮನಸ್ಕರಾದರೋ ॥೩॥

ಜನತೆಯ ಬೀಡು ನಿಮ್ಮ ಮಠವೇ ಶಿವಧಾಮ ವಿಭೂತಿಯೋಗದಾ
ಘನತರ ಪೂಜೆ ಭೋಗವದು ಲಿಂಗದ ಭೋಗ ಪ್ರಸಾದ ನೀಡುವಾ
ಮನವೆ ಮಹಾಂತವಾದುದು ಮಹಾಶರಣಾಗ್ರಣಿ ಪೆರ್ಮೆಯೆಂತುಟೋ
ಅನುಪಮ ಪಾದಸನ್ನಿಧಿಗೆ ಆನತನಾಗಿಯೇ ಧನ್ಯನಾದೆನೋ ॥೪॥

ಕಂದ :

ಧರಣಿಯೊಳು ಕರುಣಿಸಿದ ಶ್ರೀ
ಗುರು ಹಾರೈಕೆಯಂತೆಯೇ ಮನೋಹರ್ಷದೊಳ್
ವರಕಥನ ಕವನಗಳ ಕ
ಟ್ಟಿರುವಂಥ ಸಿದ್ಧರಾಮಯ್ಯ ಕವಿ ಧನ್ಯನೋ

## ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರ ಕಾವ್ಯ-ಗದ್ಯ ಕೃತಿಗಳ ಬಗ್ಗೆ ಮಹನೀಯರ ಸದಭಿಪ್ರಾಯಗಳು

### ಶಕುಂತಲಾ ಚರಿತ್ರೆಯ ಬಗ್ಗೆ

ಕಾವ್ಯ ಬರೆದಿರುವ "ಶಕುಂತಲಾ ಚರಿತ್ರ"ದ ಭಾಮಿನೀ ಷಟ್ಪದಿಯ ೧೦೮ ಪದ್ಯಗಳನ್ನು ಅವಲೋಕಿಸಿದೆವು. ಸಾಹಿತ್ಯವು ಸುಲಭ ಶೈಲಿಯಲ್ಲಿದ್ದು ಸೊಗಸಾಗಿ ಮೂಡಿಬಂದಿದೆ. ಪದಲಾಲಿತ್ಯ ಸಮೂಹವು ಕವಿಯನ್ನು ಅರಸುತ್ತಾ ಬಂದಿದೆ ಎಂದರೆ ತಪ್ಪಾಗಲಾರದು. ವ್ಯಾಸ ಭಾರತದಲ್ಲಿ ರೂಪುಗೊಂಡ ಈ ಕಥೆ ಕಾಳಿದಾಸನಿಂದ ವಿಕಸಿತವಾಗಿ ಶ್ರೀ ಸಿದ್ಧರಾಮಯ್ಯನವರ ಹಸ್ತದಲ್ಲಿ ಸಂಕ್ಷೇಪವಾಗಿ ಕನ್ನಡಿಗರಿಗೆ ನಿಕ್ಷೇಪವಾಗಿ ದೊರೆತಿದೆ.

ರವಿ ಕಾಣದುದನ್ನು ಕವಿ ಕಂಡ ಎಂಬ ನಾಣ್ಣುಡಿಯಂತೆ ಕವಿ ಬೇಸರ ಬರಿಸದಂತೆ ರಚಿಸಿದ್ದಾರೆ. ಪ್ರಾಸಲಕ್ಷಣಗಳಿಂದ ಕೂಡಿದ ಶಕುಂತಲ ಚಾರಿತ್ರ್ಯ ಅಪೂರ್ವವಾಗಿದೆ.

—ಶ್ರೀ ಶಂಕರಾನಂದ ಸರಸ್ವತೀ ಸ್ವಾಮೀಜಿಗಳು

೧೩–೬–೧೯೭೨ ಯೋಗಾನಂದೇಶ್ವರ ಮಠ, ಕೃಷ್ಣರಾಜನಗರ, ಮೈಸೂರು ಜಿಲ್ಲೆ

---

ಶ್ರೀಮನ್ಮಹಾರಾಜ ನಿರಂಜನ ಜಗದ್ಗುರು
ಶ್ರೀ ಗಂಗಾಧರ ರಾಜಯೋಗೀಂದ್ರ ಮಹಾಸ್ವಾಮಿಗಳು
ಮೂರು ಸಾವಿರ ಮಠ, ಹುಬ್ಬಳ್ಳಿ ಅವರ

### ಆಶೀರ್ವಚನ (೧೯–೬–೧೯೭೨)

ಪ್ರಾಚೀನ ಪರಂಪರೆ ಶೈಲಿಯು ನಶಿಸುತ್ತಿರುವ ಸಮಯದಲ್ಲಿ ಸಂಸ್ಮರಣ ತರುತ್ತಿರುವುದು ಪ್ರಶಂಸನೀಯವಾದುದು. ಸಂಸ್ಕೃತ ಸಾಹಿತ್ಯ ಗದ್ದುಗೆಯನೇರಿದ ಮಹಾಕವಿ ಕಾಳಿದಾಸನು ಬರೆದ ಶಾಕುಂತಲ ನಾಟಕದ ಆಧಾರದ ಮೇಲೆ ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಭಾಮಿನೀ ಷಟ್ಪದಿಯಲ್ಲಿ ಶಕುಂತಲಾ ಚರಿತ್ರೆಯನ್ನು ಸುಂದರವಾಗಿ ಬರೆದಿದ್ದಾರೆ. ಭಾಷೆ, ಭಾವ ಆಕರ್ಷಕವಾಗಿದೆ. ಸಮಗ್ರ ಚರಿತ್ರೆಯನ್ನು ೧೦೮ ಪದ್ಯಗಳಲ್ಲಿ ಹೆಣೆದು ತಮ್ಮ ಕವಿತಾ ಸಾಮರ್ಥ್ಯವನ್ನು ಸಾರ್ಥಕಗೊಳಿಸಿದ್ದಾರೆ. ಶಕುಂತಲೆಯ ಜೀವನ ಚರಿತ್ರೆಯು ಪ್ರಾಪಂಚಿಕರಿಗೆ ಸಹಾಯಕವಾಗಿದೆ.



## ಗಿರಿಜಾ ಕಲ್ಯಾಣ ಹಾಗು ಶಕುಂತಲಾ ಚರಿತ್ರೆಯ ಬಗ್ಗೆ

ಭಾಮಿನೀ ಗತಿ ಈ ಕವಿಗೆ ಸಾಧಿಸಿದೆ. ನಡುಗನ್ನಡ ಶೈಲಿಯು ಅವರ ಹಿಡಿತಕ್ಕೆ ಸಿಕ್ಕಿದೆ, ಆದುದರಿಂದ ಅವರ ಪದ್ಯಗಳ ನಿರರ್ಗಳವಾದ ಸರಣಿಯಲ್ಲಿ ತೆರೆಗೊಂಡಿವೆ. ನಾನು "ಶಾಕುಂತಲಾ ಚರಿತ್ರೆ"ಯನ್ನು ಮೆಚ್ಚಿದ್ದೇನೆ, ಸಂತೋಷ ಪಟ್ಟಿದ್ದೇನೆ. ಕವಿಗಳಾದ ಶ್ರೀ ನಾ. ಮ. ಸಿದ್ಧರಾಮಯ್ಯನವರ "ಗಿರಿಜಾ ಕಲ್ಯಾಣ ಕಾವ್ಯ" ಭಾಮಿನೀ ಷಟ್ಪದಿಯಲ್ಲಿ ಅಂದವಾಗಿ ಛಂದೋಬದ್ಧವಾಗಿ ರಚಿತವಾಗಿದೆ. ಕವಿಗಳು ಸರಳವಾಗಿ ಸೊಗಸಾದ ಲಲಿತ ಶೈಲಿಯಲ್ಲಿ ಬಳಸಿದ್ದಾರೆ. ಕನ್ನಡಕ್ಕೆ ವಿಶಿಷ್ಟವಾದ ಆದಿ ಪ್ರಾಸವನ್ನು ಯಥಾ ಯೋಗ್ಯವಾಗಿ ಪ್ರಯೋಗಿಸಿದ್ದಾರೆ ಈ ಕೃತಿಯು ಪ್ರತಿ ಪದ್ಯದಲ್ಲಿ ಇದು ಮೆಚ್ಚಬೇಕಾದ ಮಾತು. ಈ ಕವಿಯು ಖಂಡಕಾವ್ಯ ಒಳ್ಳೆಯ ಗುಣ ಲಕ್ಷಣಗಳನ್ನು ಒಳಗೊಂಡಿದೆ. ಕಾವ್ಯದಲ್ಲಿ ಗಾತ್ರಕ್ಕಿಂತ ಗುಣ ಮುಖ್ಯ. ಇಲ್ಲಿ ಕೃತಿಯುದ್ದಕ್ಕೂ ಸುಳಿದೀಬಂದ ಶೈಲಿಯು ನಡುಗನ್ನಡ ಹಾಗೂ ಹೊಸಗನ್ನಡ ಶೈಲಿಗಳ ನಡುವಣ ಅಂದವನ್ನೊಳಗೊಂಡಿದೆ ಮತ್ತು ತನ್ನತನವನ್ನು ತೋರಿ ವಿಶಿಷ್ಟತೆ ಪಡೆದಿದೆ.

—ಡಾ॥ ಡಿ. ಎಸ್. ಕರ್ಕಿಯವರು,
ಹುಬ್ಬಳ್ಳಿ

೧೯—೮—೧೯೭೮

---

ಶ್ರೀ ನಾ. ಮ. ಸಿದ್ಧರಾಮಯ್ಯನವರ ಕನ್ನಡ ಸಾಹಿತ್ಯಾಭಿರುಚಿ ಪ್ರಶಂಸನೀಯ. ಅವರು ಷಟ್ಪದಿಯ ಛಂದೋಲಯವನ್ನು ಸಾಧಿಸಿ ಈಗಾಗಲೇ ಗ್ರಂಥಗಳ ರಚನೆ ಮಾಡಿರುವರು. ಪ್ರಸ್ತುತ "ಗಿರಿಜಾ ಕಲ್ಯಾಣ ಕಾವ್ಯ"ವನ್ನು ಸರಳ ಸುಂದರ ಶೈಲಿಯಲ್ಲಿ ರಚಿಸಿರುವರು. ಇವರು ಪ್ರಾಸಾದಿಕ ಶೈಲಿಯನ್ನು ಹೀಗೆಯೇ ಪಳಗಿಸಿ ಕೊಳ್ಳುತ್ತಾ ಹೋದರೆ ಉತ್ತಮೋತ್ತಮ ಕಾವ್ಯಗಳನ್ನು ರಚಿಸುವುದರಲ್ಲಿ ಸಂದೇಹ ವಿಲ್ಲ.

ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರ ಕಾವ್ಯ ಕೃಷಿ ಸಫಲವಾಗಲಿ, ಸುಫಲವಾಗಲಿ ಎಂದು ಹಾರೈಸುತ್ತೇನೆ.

—ಡಾ॥ ಆರ್. ಸಿ. ಹಿರೇಮಠರು,
ಧಾರವಾಡ

೧೮—೮—೧೯೭೮

---

ತರುಣ ಕವಿಗಳಾದ ಶ್ರೀ ಸಿದ್ಧರಾಮಯ್ಯನವರು (ನಾಗರಹಾಳು), ಹಿರಿಯರ ಆಶೀರ್ವಾದದಿಂದ ಸಾಹಿತ್ಯ ಸೇವೆ ಮಾಡಿ, ಸಮಾಜದಲ್ಲಿ ನಿಸ್ವಾರ್ಥ ನಿರ್ಮಾತ್ಸರ ಸಹಕಾರ ಉಂಟಾಗುವಂತೆ ಮಾಡಲಿ.

—ಡಾ॥ ದ. ರಾ. ಬೇಂದ್ರೆಯವರು
ಧಾರವಾಡ

೭—೮—೧೯೭೮

ಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರು ಭಾಮಿನೀ ಷಟ್ಪದಿಯಲ್ಲಿ ಕಾವ್ಯಗಳನ್ನು ರಚಿಸಿರುವುದನ್ನು ನೋಡಿ ಸಂತಸವನ್ನುಂಟುಮಾಡಿದೆ. ಛಂದೋಲಯವು ಸಾರ್ಥಕತೆ ಪಡೆದಿದೆ. ಭಗವದನುಗ್ರಹ ಇವರಿಗೆ ಸದಾ ಇರಲೆಂದು ಹಾರೈಸುವೆನು.

—ಪದ್ಮವಿಭೂಷಣ ಶ್ರೀ ಕುವೆಂಪುರವರು

೧-೧-೧೯೮೮ ಮೈಸೂರು

---

ಚಿ|| ಶ್ರೀ ನಾ. ಮ. ಸಿದ್ಧರಾಮಯ್ಯನ ಕನ್ನಡತನವನ್ನು ಕನ್ನಡಿಸಿದ ಭಾಷಾ ಪ್ರೇಮಿಗಳಿಗೆ ಸಹಜವಾದದ್ದು ಶ್ರೀ ಗಿರಿಜಾ ಕಲ್ಯಾಣ ಕಾವ್ಯವು. ಇದು ಗಿರಿಜಾ ರಮಣನಲ್ಲಿಟ್ಟಿದ್ದ ಭಕ್ತಿಯು ದ್ಯೋತಕವಾಗಿದೆ. ಇಲ್ಲಿಯವರೆಗೆ ಪಂಡಿತರು, ವರ ಕವಿಗಳೂ ಬರೆದ ಮುನ್ನುಡಿ, ಶುಭ ಹಾರೈಕೆಗಳು ಚನ್ನಾಗಿ ಬರೆದಿರುವರೆಂಬುದು ಸಂತಸದ ನುಡಿ. ಮುಂದೆ ಕವಿಯು ಈಶ್ವರಾನುಗ್ರಹದಿಂದ ಇತ್ಯೋಪ್ಯತಿಶಯವಾದ ಕಾವ್ಯ ಬರೆಯುವ ಲವಲವಿಕೆ ಸರ್ವದಾ ಇರಲೆಂದು ಹಾರೈಸುತ್ತೇನೆ.

—ಪಂ|| ನಾ. ಮ. ದೊಡ್ಡಯ್ಯ ಶಾಸ್ತ್ರಿಗಳು

೨೦-೮-೧೯೭೮ ನಾಗರಹಾಳು

---

"ಕಾವ್ಯ ರತ್ನಾಕರ" ಎಂಬ ಕವನ ಸಂಗ್ರಹವು ಶ್ರೀ ನಾ. ಮ. ಸಿದ್ಧರಾಮಯ್ಯನವರ ಬೆಳೆಯುವ ಗುಣಗಳಿಗೆ ಕನ್ನಡಿ ಹಿಡಿದಿದೆ. ತೆರೆದ ಕಣ್ಣು, ಅರಿಯುವ ತವಕ ಅನುಭವಿಸುವ ಹೃದಯ, ತನ್ನನ್ನು ತಾನೇ ಮೀರಬೇಕೆಂಬ ಹಂಬಲ, ಪ್ರಯೋಗ ಶೀಲತೆ, ಪಕ್ವತೆಯ ಹಾರೈಕೆ, ಸದ್ದಿಲ್ಲದ ಸಾಧನೆಗಳು ದಾರಿದೀಪವಾದಲ್ಲಿ ಈ ಶಿವಕವಿಗಳು ಸಮಗ್ರ ಕರ್ನಾಟಕದ ಗಮನವನ್ನು ಸೆಳೆಯಬಲ್ಲರೆಂದು ನನ್ನ ಒಳದನಿ ನುಡಿಯುತ್ತಿದೆ. ಈ ನುಡಿಯನ್ನು ಅವರು ಹುಸಿಗೊಳಿಸುವುದಿಲ್ಲವೆಂದು ನಂಬಿದ್ದೇನೆ.

೮-೮-೧೯೭೭, ಬೆಂಗಳೂರು —ಡಾ|| ಸಿದ್ಧಯ್ಯ ಪುರಾಣಿಕರು

---

ಸಂಗ್ರಹ : ನಾ. ಮ. ಪಂಪಾರಾಧ್ಯರು, ಬಿ.ಕಾಂ., (ಸಿ.ಎ.), ಬಳ್ಳಾರಿ
ನಾ. ಮ. ಸಿ. ಸೋಮನಾಥರು, ಬಳ್ಳಾರಿ

---

ಶ್ರೀ ಸುಭಪಿಗಳೂ, ವೇದಮೂರ್ತಿಗಳೂ ಆದ

## ಪಂಡಿತ ಶ್ರೀ ನಾ. ಮ. ದೊಡ್ಡಯ್ಯಶಾಸ್ತ್ರಿಗಳು - ನಾಗಪಹಾಳು

ಇವರ ಕಾವ್ಯ – ಗದ್ಯ ಕೃತಿಗಳು

೧) ವೀರಶೈವನ ಭಕ್ತಿಯೋಗ (ಗದ್ಯರೂಪಕ)
೨) "ಶಿವಶರಣರ ಸಮನ್ವಯ ಯೋಗ" (ಗದ್ಯರೂಪಕ)
(ಕರ್ನಾಟಕ ವಿಶ್ವವಿದ್ಯಾಲಯದವರು–ಧಾರವಾಡ ಇವರ ಪ್ರಕಾಶನದಲ್ಲಿ)
೩) ಒಳಬಳ್ಳಾರಿ ಶ್ರೀ ಚನ್ನಬಸವ ಸ್ವಾಮಿಗಳವರ ಸುಪ್ರಭಾತ (ಕಾವ್ಯರೂಪಕ)
೪) ಉಜ್ಜನಿ ಜಗದ್ಗುರು ಶ್ರೀ ಸಿದ್ಧಲಿಂಗೇಶ್ವರ ಶತಕ (ಭಾಮಿನೀ ಷಟ್ಪದಿ)

## ಶಿವಕವಿ ಶ್ರೀ ನಾ. ಮ. ಸಿದ್ಧರಾಮಯ್ಯನವರ

ಕಾವ್ಯ – ಗದ್ಯ ಕೃತಿಗಳು

೧) ಶಕುಂತಲಾ ಚರಿತ್ರೆ (ಭಾಮಿನೀ ಷಟ್ಪದಿ)
೨) ಪ್ರೇಮವೇ ದೇವರು (ಕವನ ಸಂಗ್ರಹ)
೩) ಕಾವ್ಯರತ್ನಾಕರ (ಕವನ ಸಂಗ್ರಹ)
೪) ಜಗದ್ಗುರು ಶ್ರೀ ರೇಣುಕಾಚಾರ್ಯರ ಸುಪ್ರಭಾತ (ಕುಸುಮ ಷಟ್ಪದಿ)
೫) ಗಿರಿಜಾಕಲ್ಯಾಣ ಕಾವ್ಯ (ಭಾಮಿನೀ ಷಟ್ಪದಿ)
೬) ದೇವನ ನಿಲವು (ಬಿಲ್ವದಳಗಳು – ಲೇಖನ ಸಂಗ್ರಹ)
೭) ಒಳಬಳ್ಳಾರಿ ತಾತ ಶ್ರೀ ಚನ್ನಬಸವ ಲೀಲಾ ಕಾವ್ಯ (ಭಾಮಿನೀ ಷಟ್ಪದಿ)
೮) ಒಳಬಳ್ಳಾರಿ ಶ್ರೀ ತಾತನವರ ಸುಪ್ರಭಾತ (ನವೀನ ಕಾವ್ಯರೂಪಕ)
೯) (ಒಳಬಳ್ಳಾರಿ) "ಪರಮ ತಪಸ್ವಿ ಶ್ರೀ ತಾತನವರು" (ಗದ್ಯರೂಪಕ)